ಭಕ್ತಿ ಭಾಂಡಾರಿ

# ಬಸವಣ್ಣನವರ ವಚನಗಳು

## ಭಾವಾರ್ಥ ಸಹಿತ

●

ಸಂಪಾದಕರು: ೧೦೮ ಪುಟಗಳು

"ಕರ್ನಾಟಕ ಕವಿಚಂದ್ರ"

ಶ್ರೀ ಕಂಠ ಶಾಸ್ತ್ರಿ ಬೆಲೆ: ೮ ಆಣೆ ಮಾತ್ರ

— ಕೆಲವು ಅಭಿಪ್ರಾಯಗಳು —

ಬಸವಣ್ಣನವರ ತತ್ವಬೋಧೆ, ಧರ್ಮ-ವೇದಾಂತಗಳ ಪರಿಚಯ ಬಯಸುವವರಿಗೆ ಅನುಕೂಲ್ಯವಾದುದು ಈ ಪುಸ್ತಕ, ಬಸವಣ್ಣನವರ ಅನುಯಾಯಿಗಳಿಗಂತೂ ಪಾರಾಯಣ ಯೋಗ್ಯ ಗ್ರಂಥವಿದು. "ತಾಯಿನಾಡು" ೨೧—೬—೫೪

ಈ ಕಿರುಗ್ರಂಥದಲ್ಲಿ ಬಸವಣ್ಣನವರ ಸಾವಿರಾರು ವಚನಗಳಲ್ಲಿಯ ೩೨೬ ವಚನಗಳನ್ನು ಸಂಕಲಿಸಿ, ಭಾವಾರ್ಥದೊಡನೆ, ಶ್ರೀಕಂಠ ಶಾಸ್ತ್ರಿಗಳವರು ಅಳವಡಿಸಿದ್ದಾರೆ...... ಈ ಗ್ರಂಥಕ್ಕೆ ನಮ್ಮ ಹುತ್ಪೂರ್ವಕ ಸ್ವಾಗತವಿದೆ. "ಪ್ರಜಾವಾಣಿ" ೨೭—೬—೫೪

ಮನುಷ್ಯರ ಅಜ್ಞಾನವನ್ನು ಪರಿಹರಿಸಿ ಅವರಲ್ಲಿ ಮಾನವೀಯ ಭಾವನೆಗಳನು ಪ್ರಚೋದಿಸುವಂಥ ನೀತಿಸೂತ್ರಗಳನ್ನು ಸರಳವಾಗಿ, ಹೃದಯಸ್ಪರ್ಶಿಯಾಗಿ ವಿವರಿಸಿದುದೇ ಬಸವಣ್ಣನವರ ವಚನಗಳ ವೈಶಿಷ್ಟ್ಯವಾಗಿದೆ. ಈ ಪುಸ್ತಕದಲ್ಲಿ ಅಂತಹ ಕೆಲವು ಶ್ರೇಷ್ಠ ವಚನಗಳನ್ನು ಶ್ರೀ। ಶಾಸ್ತ್ರಿಗಳು ಸಂಗ್ರಹಿಸಿ ಅವುಗಳ ಭಾವಾರ್ಥವನ್ನು ಕೊಟ್ಟಿರುವರು "ರಾಷ್ಟ್ರಮತ" ೨—೭—೫೪

ಪ್ರಾಚೀನವಾದ ಉಪನಿಷತ್ತು, ಗೀತೆ ಮತ್ತಿತರ ಶಾಸ್ತ್ರ ಗ್ರಂಥಗಳಲ್ಲಿ ಪ್ರತಿಪಾದಿಸಿದ ಘನತತ್ವಗಳನ್ನು ಭಟ್ಟಿ ಇಳಿಸಿ, ಕನ್ನಡಿಗರಿಗೆ ರಸಪಾಕವನ್ನು ಉಣಬಡಿಸಿದಂತೆ ಈ ವಚನಗಳು ಇವೆಯೆಂದರೆ ತಪ್ಪಾಗದು. "ನವಯುಗ" (ಮಂಗಳೂರ) ೨೪—೬—೫೪

ಪ್ರಾಸಂಗಿಕವಾಗಿ ಉದಾಹರಿಸಲು ಮತ್ತು ಜೀವನ ಸಮಸ್ಯೆಗಳನ್ನೆದುರಿಸುವ ಧೈರ ಮಾಡಲು ಈ ವಚನಸಂಗ್ರಹ ಅಮೂಲ್ಯವಾಗಿದೆ. "ಕರ್ಮವೀರ" ೨೧—೨—೫೫

## ಸಿಟಿ ಬುಕ್ ಸ್ಟಾಲ್ ಹುಬ್ಬಳ್ಳಿ.

Printed by : S. V. SHRESHTHI at THE ROYAL PRINTING PRESS
Hubli & Published by him at THE CITY BOOK STALL HUBLI

Checked 1965

# ನನ್ನ ಮಾತು

ಜೈನ ಶಾಸ್ತ್ರದಲ್ಲಿ "ತ್ರಿಷಷ್ಟಿ ಶಲಾಕಾಪುರುಷ" ರಿದ್ದಂತೆ ಶೈವರಲ್ಲಿಯೂ ಅರವತ್ತು ಮೂರುಜನ ಶಿವಭಕ್ತರಿದ್ದಾರೆ. ಇವರನ್ನು "ಆದ್ಯರು" "ಪ್ರಮಥರು" ಹಾಗು "ಪುರಾತನರು" ಎಂದೂ ಕರೆಯುಲಾಗುತ್ತದೆ. ವೀರಶೈವ ವಚನಶಾಸ್ತ್ರ ಧಲ್ಲಿ ಮೊದಲಿನವೆರಡು ಹೆಸರುಗಳಿಂದಲೇ ಅವರನ್ನು ಸಂಬೋಧಿಸಲಾಗಿದೆ. ಅವು ಗಳನ್ನು ತಾವು ಅಣ್ಣ ಬಸವಣ್ಣ ಹಾಗು ದೇವರ ದಾಸಿಮಯ್ಯರ ವಚನಗಳಲ್ಲಿ ಕಾಣಬಹುದು.

ವೇದಕ್ಕಿಂತಲೂ ಅತಿ ಪ್ರಾಚೀನವೆನ್ನಿಸಿಕೊಂಡ ಶೈವ ಧರ್ಮವು ಭಕ್ತಿಮಾರ ಕ್ಕಾಗಿ ಭಾರತದೊಳಗಿನ ಉಳಿದೆಲ್ಲ ಪಂಥಗಳಿಗೂ ಬುನಾದಿಯುನ್ನು ಹಾಕಿಕೊಟ್ಟದೆ ಯೆಂದು ಹೇಳಿದರೆ ಅದು ಉತ್ಪ್ರೇಕ್ಷೆಯಾಗಲಾರದು. ಭಕ್ತಿಯುಲ್ಲಿ ಯಾರಿಗೂ ಎರಡನೆಯುವರೆನ್ನಿಸಿಕೊಳ್ಳದಂಥ ಈ ಅರುವತ್ತು ಮೂವರು ಭಕ್ತರಲ್ಲಿ ಕಾರಿ ಕಾಲಮ್ಮೆ, ಮಾಂಗಾಯುಕ್ಕ ಹಾಗು ಯುಸ್ಯಜ್ಞಾನಿಯುಂಥ ಮುಹಿಳೆಯುರೂ ಇದ್ದಾರೆ. ಈ ಎಲ್ಲ ಭಕ್ತಶಿರೋಮಣಿಗಳ ಜೀವನದುದ್ದಕ್ಕೂ ಸತ್ಯ, ದಯೆ, ಪರೋಪಕಾರ ಹಾಗು ವೈರಾಗ್ಯಗಳು ಹಾಸುಹೊಕ್ಕಾಗಿವೆ.

ಈ ಭಕ್ತಾಗ್ರಣಿಗಳ ಚರಿತ್ರೆಗಳನ್ನವಲೋಕಿಸಿದಲ್ಲಿ ಇವರ ಕಾಲವು ಕ್ರಿಸ್ತ ಶಕದ ಪ್ರಾರಂಭದಿಂದ ಸುಮಾರು ಒಂಭತ್ತನೆಯ ಶತಮಾನದವರೆಗಿನದಿರಬಹು ದೆಂದು ಧಾರಾಳವಾಗಿ ಹೇಳಬಹುದು. ಹಾಗೆ ಹೇಳಲು ಒಂದೆರಡು ಪ್ರಬಲ ಕಾರಣಗಳೂ ಉಂಟು. ಇದರಲ್ಲಿ ಬರುವ ಕೆಲ ಶಿವಭಕ್ತರು ಜೈನ ಅರಸರು ಹಾಗು ಬೌದ್ಧಮತೀಯರನ್ನು ಎದುರು ಹಾಕಿಕೊಂಡ ದೃಷ್ಟಾಂತಗಳಿವೆ. ಬೌದ್ಧ ಹಾಗು ಜೈನ ಧರ್ಮಗಳು ಮೊದಲಿನ ನಾಲ್ಕೆಂಟು ಶತಮಾನಗಳಲ್ಲಿಯೇ ಪ್ರಬುದ್ಧಾ ಅಸ್ಥೆಯುಲ್ಲಿದ್ದವು.

ತಮ್ಮ ತಮ್ಮ ಮತಗಳನ್ನು ಅಭಿವೃದ್ಧಿಗೊಳಿಸುವಂಥ ವಿಚಾರಗಳಲ್ಲಿ ಶೈವ ರಿಗೂ, ಜೈನ-ಬೌದ್ಧರಿಗೂ ನಡೆದ ವಾದವಿವಾದ ಹಾಗು ಕಲಹಗಳು ಕೇವಲ ಇದೊಂದೇ ಉದಾಹರಣೆಯುಲ್ಲ, ಅಂಥವುಗಳು ಶಂಕರಾಚಾರ್ಯರಂಥವರಿಂದಲೂ ರಾಮಾನುಜಾಚಾರ್ಯರಂಥವರಿಂದಲೂ, ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಅಂಥ ಸಂಗತಿಗಳು ಬಹುತರವಾಗಿ ಎಲ್ಲ ಪ್ರಾಚೀನ ಚರಿತ್ರೆಗಳಲ್ಲಿಯೂ ಕಂಡು ಬರುತ್ತವೆ. ಅದಕ್ಕಾಗಿ ಯಾರೂ ವಿಷಾದಪಡಬೇಕಾದುದಿಲ್ಲ.

ಅರುವತ್ತು ಮೂರು ಜನ ಮಹಾನುಭಾವರ ಚರಿತ್ರೆಯು ಬೋಧಪ್ರದವೂ, ಅನುಕರಣೀಯವೂ, ಹಾಗು ಪಠಿಸಲಿಕ್ಕೆ ಯೋಗ್ಯವೂ ಆಗಿರುವದಕ್ಕೆ ಇನ್ನೂ ಒಂದು ಮಹತ್ತರಕಾರಣವೆಂದರೆ ಇವರೆಲ್ಲ ಒಂದೇ ಸ್ಥಳದಲ್ಲಿ, ಒಂದೇ ಕಾಲದಲ್ಲಿ ಹುಟ್ಟಿದವರಾಗಿರದೆ ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ ಆಗಿ ಹೋಗಿದ್ದಾರೆ. ಅಲ್ಲದೆ ಅವರಲ್ಲಿ ಬ್ರಾಹ್ಮಣ-ಬ್ರಾಹ್ಮಣೇತರ ಎಂಬ ಭೇದವಿರದೆ ಎಲ್ಲ ಮತೀಯರೂ (ಶೂದ್ರರೂ ಸಹ) ಆಗಿಹೋಗಿದ್ದಾರೆ.

ಈ ಸಂಗ್ರಹದಲ್ಲಿ ಬರುವ ಒಬ್ಬೊಬ್ಬ ಶರಣನೂ ಶಿವಭಕ್ತಿಗೋಸುಗ ತನ್ನೆಲ್ಲವನ್ನೂ ಕೊನೆಗೆ ತನ್ನ ಅಸುವನ್ನೂ ಶಿವನಿಗೊಪ್ಪಿಸಿ ಕೃತಕೃತ್ಯನಾಗಿದ್ದಾನೆ. ಅಂತೆಯೇ ಬಸವಣ್ಣವರು ಇವರ ಜೀವನವನ್ನು ತಮ್ಮ ದಾರಿದೀಪವನ್ನಾಗಿಸಿಕೊಂಡಿದ್ದರೆ ಆಶ್ಚರ್ಯವೇನಲ್ಲ. ಅಲ್ಲದೆ "ಶಿವನಿಗಿಂತ ಶಿವಶರಣರೇ ಹೆಚ್ಚು" ಎಂದು ಶಿವಾಗಮಗಳು ಸಾರಿವೆ. ಅಂದಾಗ ಶಿವಶರಣರ ಬಗ್ಗೆ ಹೆಚ್ಚಿಗೆ ಹೇಳುವ ಆವಶ್ಯಕತೆ ಇಲ್ಲವೆಂದೇ ನನ್ನ ಭಾವನೆ.

ನಾನು ನೋಡಿದ ತೆಲಗು-ತಮಿಳು ಹಾಗು ಕನ್ನಡ ಗ್ರಂಥಗಳ ಮೇಲಿಂದ ಹೇಳಬೇಕೆಂದರೆ ಈ ಪುರಾತನರ ಹೆಸರುಗಳಲ್ಲಿ ಬಹಳಷ್ಟು ಅಂತರವು ಕಂಡು ಬರುತ್ತದೆ. ಆದರೆ ಅವರ ಚರಿತ್ರೆಯ ಮೇಲಿಂದ ಇವರು ಇಂಥವರು ಎಂದು ಹೇಳಲು ಸಾಧ್ಯವಾಗುತ್ತದೆ. ಇನ್ನೊಂದು ಒಳ್ಳೆಯ ಸಂಗತಿಯೆಂದರೆ ಕೇವಲ ಹೆಸರುಗಳಲ್ಲಿ ವ್ಯತ್ಯಾಸವಿದೆಯೇ ವಿನಹ ಚರಿತ್ರೆಯಲ್ಲಿಲ್ಲ. ಅಂತೆಯೇ ಅವರನ್ನು ಗುರುತಿಸಲು ಸಾಧ್ಯವಿದೆ. ಕೆಲವು ಗ್ರಂಥಗಳಲ್ಲಂತೂ ಅರವತ್ತುಮೂರರ ಅಂಕಿಯಲ್ಲೂ ಹೆಚ್ಚುಕಡಿಮೆಯಾದದ್ದು ಕಂಡುಬರುತ್ತದೆ.

"ಪಂಡಿತಾರಾಧ್ಯ ಚರಿತ್ರೆ"ಯಲ್ಲಿ ಕೇವಲ ಐವತ್ತುಮೂರು ಹೆಸರುಗಳನ್ನು ಕೊಡಲಾಗಿದೆ. "ತ್ರಿಷಷ್ಟಿ ಪುರಾತದ ವಿಲಾಸಂ"ದಲ್ಲಿ ಅರವತ್ತುನಾಲ್ಕು ಜನರು ಸಿಕ್ಕುತ್ತಾರೆ. ತಮಿಳು ಗ್ರಂಥದ ಪ್ರಕಾರ ನೋಡಿದರೆ ಅಂಕಿಗಳೇನೋ ಸರಿ ಹೋಗುತ್ತವೆ. ಆದರೆ ಅಲ್ಪ—ಸ್ವಲ್ಪ ಭಿನ್ನವಿದ್ದ ಮೂವರು-ನಾಲ್ವರು ಶರಣರ ಚರಿತ್ರೆಗಳು ನಮ್ಮ ಕಣ್ಣಿಗೆ ಬೀಳುತ್ತವೆ. ಅದನ್ನು ಗಮನಿಸಿದಾಗ ಸಂಖ್ಯೆಯನ್ನು ಪೂರ್ತಿಗೊಳಿಸಲು ಹಾಗೆ ಮಾಡಿರುವರೋ ಇಲ್ಲವೆ ಅವರೆಲ್ಲರೂ ಬೇರೆ ಬೇರೆಯವರೋ ಎಂಬ ವಿಚಾರ ಮನದೊಳಗೇ ಉಳಿದುಕೊಳ್ಳುತ್ತದೆ.

ಆದರೂ ನಿಜಗುಣ ಶಿವಯೋಗಿಗಳ ೭೭ ತ್ರಿಪದಿಗಳನ್ನು ಈಕ್ಷಿಸಿದಲ್ಲಿ (ಅದರಲ್ಲಿ ಪ್ರಾರಂಭದ ಒಂಭತ್ತು ಹಾಗು ಕೊನೆಯ ಐದು ಪದ್ಯಗಳನ್ನು ಬಿಟ್ಟು ಬಿಡಬೇಕು.) ಅರವತ್ತು ಮೂವರ ಹೆಸರುಗಳು ಸ್ಪಷ್ಟವಿರುವಗು ಗೋಚರವಾಗುತ್ತದೆ. ಅದರಲ್ಲಿಯ ಒಂದೊಂದು ತ್ರಿಪದಿಯಲ್ಲಿ ಅವರು ಒಬ್ಬೊಬ್ಬ ಶರಣನ

ಜೀವನವನ್ನೇ ಚಿತ್ರಿಸಿದ್ದಾರೆ. ಕನ್ನಡದ ಗಂಡು ಕವಿ ಸರ್ವಜ್ಞನಂತೆ ಇವರೂ ಮೂರು ಸಾಲುಗಳಲ್ಲಿ ಹೇಳುವುದೆಲ್ಲವನ್ನು ಹೇಳಿಬಿಟ್ಟಿದ್ದಾರೆ. ಅದಕ್ಕಾಗಿಯೇ ಪ್ರತಿಯೊಬ್ಬ ಶಿವಭಕ್ತನ ಜೀವನ ಚಿತ್ರದ ಕೊನೆಗೆ ನಿಜಗುಣ ಶಿವಯೋಗಿಗಳ ಒಂದೊಂದು ತ್ರಿಪದಿಯನ್ನು ಉಪಯೋಗಿಸಿಕೊಂಡಿದ್ದೇನೆ.

ಇದನ್ನು ಬರೆಯುವಾಗ ನಿಜಗುಣ ಶಿವಯೋಗಿಗಳ "ಪುರಾತನರ ತ್ರಿವಿಧಿ" ಆಸ್ಥಾನ ವಿದ್ವಾನ್ ಕರಿಬಸವ ಶಾಸ್ತ್ರಿಗಳ "ಬಸವೇಶ ವಿಜಯ" ಆದಿ-ಅಂತ್ಯಭಾಗ ಗಳು ಹರಿದುಹೋಗಿದ್ದ "ತ್ರಿಷಷ್ಟಿ ಪುರಾತನ ವಿಲಾಸಂ" ಎಂಬ ಪದ್ಯಕಾವ್ಯದ ನೆರ ವನ್ನೂ ಪಡೆದಿದ್ದು ಅವರಿಗೆ ನಾನು ಅತ್ಯಂತ ಋಣಿಯಾಗಿದ್ದೇನೆ. ಅಲ್ಲದೆ ಪಂಡಿ ತಾರಾಧ್ಯ ಚರಿತ್ರ" (ತೆಲಗು) ದಿಂದಲೂ ಕೆಲವಷ್ಟನ್ನು ಎತ್ತಿಕೊಂಡಿದ್ದೇನೆಂಬು ದನ್ನೂ ಹೇಳದಿದ್ದರೆ ಅದು ಅಪ್ರಸ್ತುತವೆನ್ನಿಸೀತು, ಅದರ ಕರ್ತರಿಗೆ ಅಪಕಾರ ವಾದೀತು. ಅನಂತರ ಕನ್ನಡದಲ್ಲಿ ಪುರಾತನರ ವಿಷಯಕ್ಕೆ ಗದ್ಯಗಳು ದೊರೆತರೆ ನಾನು ಬರೆದುದಕ್ಕೂ ಅವುಗಳಿಗೂ ಹೋಲಿಸಿ ನೋಡಬೇಕು, ಎಂಬ ಇಚ್ಛೆಯಿಂದ ಬಹಳಷ್ಟು ಹುಡುಕಾಡಿದರೂ ಸಿಕ್ಕಲಿಲ್ಲ.

ಕೊನೆಗೆ ಗದುಗಿನ ಲಾಯಬ್ರರಿಯೊಂದರಲ್ಲಿ ಗೆಳೆಯ ಚಂದ್ರಶೇಖರ ಹೆಸ ರೂರನಿಂದ ಶ್ರೀ ಮಿರ್ಜಿ ಮಹಾರುದ್ರಪ್ಪನವರು ಬರೆದ "ಅರವತ್ತುಮೂವರು ಪುರಾತನರು" ದೊರೆಯಿತು. ಅದು ಕೈಗೆ ಸಿಕ್ಕೊಡನೆ ಕೂಡಲೆ ನೋಡಿಕೊಂಡು ಕೊಡಬೇಕೆಂದರೆ ನನ್ನ ಕೆಲ ತೊಂದರೆಗಳಿಂದಾಗಿ ಮೂರು-ನಾಲ್ಕು ತಿಂಗಳುಗಳ ವರೆಗೆ ಪುಸ್ತಕವನ್ನು ತೆರೆದು ನೋಡುವದೂ ಆಗಲಿಲ್ಲ. ಪ್ರಕಾಶಕರು ಭೆಟ್ಟಿಯಾದ ಸಲಕ್ಕೊಮ್ಮೆ ಕೇಳದೆಹೋಗಿದ್ದರೆ ಇಂದಿನವರೆಗಾದರೂ ಮುಗಿಯುತ್ತಿತ್ತೋ ಇಲ್ಲವೋ ಅದೂ ಸಂಶಯ. ಕೊನೆಗೆ ಎರಡನ್ನೂ ನೋಡಿದೆ. ಅವರ ಮುನ್ನುಡಿ ಯನ್ನೂ ಓದಿದೆ. ಅದರಿಂದ ನನಗೆ ದೊರೆತ ಪ್ರತಿಯೂ ಸುರಂಗಕವಿಯದಿರ ಬೇಕೆಂಬುದೇ ನನ್ನ ಭಾವನೆ.

"ದ್ರಾವಿಡ"ವನ್ನು ಮೆಚ್ಚುವ ನನಗೆ ಶಿವಭಕ್ತರ ಕಥೆಗಳೆಂದರೆ ಪಂಚಪ್ರಾಣ ಹೀಗಾಗಿ ರಾಯಲ್ ಪ್ರೆಸ್ಸಿನ ಒಡೆಯರಾದ ಶ್ರೀ ಶ್ರೇಷ್ಠಿಯವರು ಈ ಶಿವಭಕ್ತರ ಬಗ್ಗೆ ಬರೆಯಲು ಕೇಳಿದೊಡನೆ ಸಂತೋಷದಿಂದ ಒಪ್ಪಿಕೊಂಡೆ. ಅಲ್ಲದೆ ಈ ಕೃತಿಯು ಹೊರಬರಲೂ ಅವರ "ವರಾತ"ವೇ ಕಾರಣವೆಂದರೂ ತಪ್ಪಲ್ಲ. ಬರೆ ಯುತ್ತಿದ್ದಂತೆ ಗದ್ಯಗಳ ಅರ್ಥ ವಿವರಣೆಗಳೇ ಮುಂತಾದ ಕಾರ್ಯದಲ್ಲಿ ನೆರವಾದ ಚಂದ್ರಶೇಖರನನ್ನೂ ನಾನು ಮರೆಯಲಾರೆ.

ಅಲ್ಲದೆ ನಾನು ಬರೆದುದನ್ನೆಲ್ಲ ಓದಿ ಯೋಗ್ಯ ಸಲಹೆ ಸೂಚನೆಗಳನ್ನಿತ್ತ ಅನಾಮಧೇಯ ಹಿರಿಯರ ಸಲಹೆ-ಪ್ರೋತ್ಸಾಹಗಳೇ ನನ್ನ ಜೀವನದ ದಾರಿ

ದೀಪವೆಂದು ಭಾವಿಸುತ್ತೇನೆ. ಇಷ್ಟೆಲ್ಲ ಹೇಳುತ್ತೇನೆಂದು ಇದು "ಪರಿಪೂರ್ಣ ಕೃತಿ" ಇದರಲ್ಲಿ ನ್ಯೂನತೆಗಳೇನೂ ಇಲ್ಲವೆಂದು ಯಾರೂ ಭಾವಿಸಲಾಗದು. ಓದುಗರು—ಹಿರಿಯರು ಅಂಥವುಗಳನ್ನು ಎತ್ತಿ ತೋರಿಸಿದಲ್ಲಿ ಅದನ್ನು "ಮಹಾಪ್ರಸಾದ"ವೆಂದು ಸ್ವೀಕರಿಸಿ ಮುಂದಿನ ಆವೃತ್ತಿಯಲ್ಲಿ ತಿದ್ದಿಕೊಳ್ಳಲು ಪ್ರಯತ್ನಿಸುತ್ತೇನೆ.

ಇನ್ನು ಈ ಶಿವಭಕ್ತರ ಬಗೆಗೆ--

ಈ ವಿಧದೊಳರವತ್ತು ಮೂವರ ಚರಿತ್ರವನು ।
ಮಾವರನ ಕರುಣ-ಶರಧಿಮಿಗೆ ಮೊಯುತಿರ ।
ಲೋವಿ ಕೇಳ್ದವನೆ ಕೃತಕೃತ್ಯ ॥

— ಎಂದು ನಿಜಗುಣ ಶಿವಯೋಗಿಗಳಂಥ ಮಹಾನುಭಾವರೇ ಹೇಳಿರುವಾಗ ನನ್ನಂಥವನು ಏನನ್ನು ಹೇಳಬಲ್ಲೆ ?

ಕನ್ನಡ ರಾಜ್ಯೋದಯ ದಿನ
**ಹುಬ್ಬಳ್ಳಿ**

**— ಎಂ ಜೀವನ.**

# ಅರ್ಪಣ

ಮೇಲು ಕೀಳೆಂಬ ಭಾವನೆಯಿಲ್ಲದೆ ಶಿವನಿಗೆ ಪ್ರಿಯವಾದ ಕಾಯಕವನ್ನು
ನಡೆಯಿಸಿಕೊಂಡು ಹೋಗುತ್ತಿರುವ ವಯೋವೃದ್ಧರೂ
ಜ್ಞಾನವೃದ್ಧರೂ ಹಾಗು
ನನಗೆ ಮಾರ್ಗದರ್ಶಕರೂ ಆದಂಥ

**ವೀರಯ್ಯನವರು ಯಾವಗಲ್ಲ**

ಅವರಿಗೆ

ಅತ್ಯಂತ ವಿನಮ್ರ ಭಾವನೆಯಿಂದ ಈ ನನ್ನ
ಅಲ್ಪಕೃತಿಯನ್ನು ಅರ್ಪಿಸಿದ್ದೇನೆ.

—ಎಂ. **ಜೀವನ**

# ಅಕ್ಕಮಹಾದೇವಿಯವರ ವಚನಗಳು

## ಭಾವಾರ್ಥ ಸಹಿತ

**ಸಂಪಾದಕರು : ಕೆ. ಎಸ್. ಹೆಬಸೂರ  ಬೆಲೆ : ೪ ಆಣೆ ಮಾತ್ರ**

### — ಕೆಲವು ಅಭಿಪ್ರಾಯಗಳು —

..."ಜಗತ್ತು ಕಂಡರಿಯದಂಥ ವೈರಾಗ್ಯ ತಾಳಿ, ನಿಮಿತ್ಯ ಮಾತ್ರಕ್ಕೆ ಕೌಶಿಕ ರಾಜನ ಕೈ ಹಿಡಿದು ಅದಷ್ಟು ಬೇಗ ಸಂಸಾರದ ಶೃಂಖಲೆಗಳನ್ನು ಕಿತ್ತೊಗೆದು ಅತಿ ವಿನೂತನವಾದ ರೀತಿಯಲ್ಲಿ ಚನ್ನಮಲ್ಲಿಕಾರ್ಜುನನನ್ನು ಅರಸಿ ಶ್ರೀಶೈಲದತ್ತ ಹೊರಟು ಶಿವನಲ್ಲಿ ಒಂದಾದ ಶಿವಶರಣೆ ಅಕ್ಕಮಹಾದೇವಿ. ಇವರ ಹೆಸರನ್ನು ಕೇಳದ, ಭಕ್ತಿಭಾವದಿಂದ ಸ್ಮರಿಸದ ಕನ್ನಡಿಗರು ಅತಿ ವಿರಳ. ... ಬರೀ ಧಾರ್ಮಿಕ ತತ್ತ್ವಬೋಧೆ ಮಾತ್ರವಲ್ಲದೆ, ಜನಸಾಮಾನ್ಯರಿಗೂ ಮುಟ್ಟುವಂತೆ ಹೃದ್ಯವಾದ ಶೈಲಿಯಲ್ಲಿ ಶಿವಶರಣರ ವಚನಗಳು ರಚಿತವಾಗಿರುವದೇ, ವಚನಗಳ ಜನಪ್ರಿಯತೆಯ ಗುಟ್ಟು- ಅದರಲ್ಲೂ ಕೆಲವು ವಚನಗಳ ಲಾಲಿತ ಅರ್ಥದ ವಿಸ್ತಾರ ಶ್ರೇಷ್ಠ ಸಾಹಿತ್ಯಕ್ಕೆ ಹೆಗ್ಗುರುತು. ಶ್ರೀ ಹೆಬಸೂರ ಅವರ ಅಕ್ಕಮಹಾದೇವಿಯವರ ವಚನಗಳನ್ನು ಭಾವಾರ್ಥ ಸಹಿತ ಪ್ರಕಟಿಮಾಡಿರುವದು ಸ್ತುತ್ಯ ಯತ್ನ.... ... ಕೆಲವೊಮ್ಮೆ ಕ್ಲಿಷ್ಟವೆನಿಸಬಹುದಾದ ಪದಗಳಿಗೆ ಪುಸ್ತಕದ ಕೊನೆಯಲ್ಲಿ ಶ್ರೀ ಹೆಬಸೂರ ಅವರು ಅರ್ಥವನ್ನು ಕೊಟ್ಟಿರುವದು ಓದುಗನಿಗೆ ಸಹಾಯಕವಾಗಿದೆ."

**"ಜನಪ್ರಗತಿ"** ಜನವರಿ, ೨೨ ೧೯೫೬

...''ಮಾನವರನ್ನು ಅಹಿಂಸೆ, ಸತ್ಯ, ಧರ್ಮ ಮತ್ತು ಭಕ್ತಿ ಮಾರ್ಗಗಳಲ್ಲಿ ಒಯ್ಯಲು ಈ ಗ್ರಂಥವು ಹೆಚ್ಚು ಮಾರ್ಗದರ್ಶಿಯಾಗಿರುತ್ತದೆ. ಮುಮುಕ್ಷುಗಳು ದಿನಂಪ್ರತಿ ಪಠಣ ಮಾಡಿ, ಮನನ ಮಾಡಲು ಹೆಚ್ಚು ಉಪಯೋಗವಾಗಿರುವ ಗ್ರಂಥವಿದು. ಇಂಥಾ ಮಹಿಳೆಯ ವಚನಗಳನ್ನು ಸುಲಭವಾಗಿ ಗ್ರಾಹ್ಯವಾಗುವಂತೆ ಅರ್ಥದೊಂದಿಗೆ ಜನಗಳ ಮುಂದೆ ಇಟ್ಟಿರುವ ಗ್ರಂಥದ ಸಂಗ್ರಹಕಾರರೂ ಮತ್ತು ಪ್ರಕಾಶಕರೂ ಪರಮಪಿತನ ಸೇವೆ ಮತ್ತು ಭಾಷಾ ಸೇವೆಗಳ ಮೂಲಕ ಭಾರತ ಮಾತೆಯ ಅನುಗ್ರಹಕ್ಕೆ ಪಾತ್ರರಾಗಿದ್ದಾರೆ." **"ಸತ್ಯವಾದಿ"** ೮-೧-೫೬

...' ಇಂಥವು ನಮ್ಮ ನಾಡಿನ ಪ್ರತಿವಾಚನಾಲಯಗಳಲ್ಲಿಯೂ ಸೇರಿಕೊಳ್ಳಬೇಕು, ಅದರಲ್ಲಿರತಕ್ಕ ಧರ್ಮದ ತಿರುಳನ್ನು ಗ್ರಹಿಸಿ, ಜ್ಞಾನದ ಮಟ್ಟವನ್ನು ಬೆಳಿಸಿಕೊಳ್ಳುವದು ವಾಚಕರ ಕರ್ತವ್ಯ. **'ರಾಷ್ಟ್ರಮತ'** ೨-೧೨-೧೯೫೫

## ಸಿಟಿ ಬುಕ್ ಸ್ಟಾಲ್, ಹುಬ್ಬಳ್ಳಿ

# ೬೩ ಶಿವಶರಣರ ಕಥೆಗಳು

## ೧. ಕಲಿಗಣನಾಥ

ಯಾವುದೊಂದು ವಿಷಯ ಮಿತಿಮೀರಿದಾಗ ಅದು ವಿರಸಕ್ಕೆ ಹೋಗಿ ಪರಿಣಾಮವು ವಿಪರೀತವಾಗುವದುಂಟು. ಬಿಸಿಲು ಅತಿಯಾದೊಡನೆ ಇಂದು ಮಳೆ ಬೀಳುತ್ತದೆ ಎಂದು ಹೇಳುತ್ತೇವೆ. ಅದು ನಿಸರ್ಗ ನಿಯಮವೆಂದು ಹೇಳುವವರು ಇರುವರಾದರೂ ಆಗುವದೆಲ್ಲ ಈಶ್ವರೀ ಸಂಕೇತವೆಂಬ ಮಾತನ್ನು ಯಾರೂ ಮರೆಯುವಂತಿಲ್ಲ. ಅದರಂತೆ ಜಗತ್ತಿನೊಳಗೆ ಪಾಪವು ಹೆಚ್ಚಾದಾಗ ಅದನ್ನು ಇಲ್ಲವಾಗಿಸಿ, ಜಗತ್ತನ್ನು ಕಾಪಾಡಲೋಸುಗ ದೇವದೇವನಾದ ಮಹಾದೇವನು ತನ್ನ ಪ್ರೀತಿಪಾತ್ರನನ್ನು ಕಳುಹಿಸುತ್ತಾನೆ. ಇದು ಜಗತ್ತು ಹುಟ್ಟಿದಂದಿನಿಂದಲೂ ನಡೆಯುತ್ತ ಬಂದ ಪರಿಪಾಠವಾಗಿದೆ.

ಭಾರತವು ಭಾವಿಕರ ಬೀಡು ಎಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಅದರಲ್ಲಿ ದಕ್ಷಿಣ ಭಾರತವಂತೂ ಶಿವಭಕ್ತರ ತವರುಮನೆಯೆಂದು ಅನಾದಿ ಕಾಲದಿಂದಲೂ ಪ್ರಸಿದ್ಧಿಪಡೆದಿದೆ. ಇಂದು ಕಣ್ಣು ಹೊರಳಿದತ್ತ ಚಿತ್ರಮಂದಿರ, ನಾಟ್ಯಮಂದಿರಗಳು ಗೋಚರಿಸುವಂತೆ ಎತ್ತ ನೋಡಿದತ್ತ ತಪೋವನಗಳು ಮಹಾಮಹಿಮರಾದ ಶಿವಭಕ್ತರಾದ ಮುನಿಪುಂಗವರಿಂದ ಕಂಗೊಳಿಸುತ್ತಿದ್ದವು. ಶಿವಭಕ್ತರ ನಾಡೆನಿಸಿದ ದಕ್ಷಿಣ ಭಾರತದ ಚೋಳ ಸೀಮೆಯಲ್ಲಿ ಶಿವಪುರವೆಂಬುದೊಂದು ನಗರವಿದ್ದಿತು. ಆ ನಗರದಲ್ಲಿ ಧರ್ಮಮಾರ್ಗವನ್ನುಲ್ಲಂಘಿಸಿ ನಡೆಯುವವರು ಯಾರೂ ಇರಲಿಲ್ಲ.

ಅಂತಹ ಪವಿತ್ರ ನಗರದಲ್ಲಿ ಮಹಾಶಿವಭಕ್ತನಾದ ಕಲಿಗಣನಾಥನು ಶಿವಪೂಜಾದುರಂಧರರಾಗಿದ್ದಂಥ ದಂಪತಿಗಳ ಉದರದಲ್ಲಿ ಜನಿಸಿದನು. ಮಹಾಮಹಿಮರೂ, ಯೋಗಿವರೇಣ್ಯರೂ ಆದಂಥ ಕೆಲವರ ಸಲಹೆಯ ಮೇರೆಗೆ ಆ ದಂಪತಿಗಳು ತಮ್ಮ ಕುಮಾರನಿಗೆ ಕಲಿಗಣನಾಥನೆಂದು ನಾಮಕರಣ ಮಾಡಿದರು. ಈತನು ಜನಿಸಿದ ಸಮಯವು ಎಂಥದಿದ್ದಿತೋ ಏನೋ ದಿನದಿನಕ್ಕೆ ಆ ನಗರಿಯು ಅಭಿವೃದ್ಧಿಯನ್ನೈದತೊಡಗಿತು. ನಗರದಂತೆ ನಾಗರಿಕರಲ್ಲಿಯೂ ಸ್ನೇಹ—ಸೌಹಾರ್ದ, ಮಮತೆಗಳೂ, ಗುರು-ಶಿಷ್ಯರಲ್ಲಿಯೂ ವಾತ್ಸಲ್ಯಗಳೂ ಬೆಳೆಯುತೊಡಗಿದವು.

ದೇವದೇವನಾದ ಮಹಾದೇವನ ಮಂದಿರಗಳಲ್ಲಿ ಸ್ಮರಣೆ, ಭಜನೆಗಳು ಅವ್ಯಾಹತವಾಗಿ ನಡೆಯುತೊಡಗಿನವು. ಕಾಮೋನ್ಮತ್ತರಲ್ಲಿಯೂ ಕೂಡ ವಿವೇಕವೂ ಉದಯವಾಗಿ ಅವರು ಸನ್ಮಾರ್ಗದಲ್ಲಿ ನಡೆಯುತೊಡಗಿದರು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಅಲ್ಲಿಯ ದಿಶೆಯೆ ಬದಲಾಗಿಬಿಟ್ಟಿತು. ಈ ರೀತಿಯ ಪರಿವರ್ತನೆಯು ಅಕಸ್ಮಿಕವಾಗಿ ಆದುದನ್ನು ಕಂಡು ಶಿವಭಕ್ತರಾದ ಯೋಗಿವರ್‍ಯರು ಇದು ಶುಭ ಚಿಹ್ನೆಯೆಂದು ಬಗೆದು ಸಂತೋಷಬಟ್ಟರು.

ಕಲಿಗಣನಾಥನು ಬಾಲ್ಯದಲ್ಲಿಯೇ ವಿದ್ಯಾಭ್ಯಾಸವನ್ನು ಪಡೆದು ಶಿವತತ್ವ ಸಿದ್ಧಾಂತ ರಹಸ್ಯವಿಶಾರದನಾದುದಲ್ಲದೆ, ಶಿವಾಗಮವನ್ನೂ ಬಲ್ಲವನಾಗಿ ಸಮಯಕ್ಕೆ ಸರಿಯಾಗಿ ಶಿವಮಂತ್ರಾಧಿಕಾರವನ್ನೂ ಪಡೆದನು. ಈ ರೀತಿಯಾಗಿ ಅವನು ಬಾಲ್ಯದಲ್ಲಿಯೇ ಗಹನವಾದ ವಿಷಯಗಳನ್ನು ಅರಿತುಕೊಂಡು ನಶ್ವರ ಶರೀರದ ಮೋಹವನ್ನಳಿದು ಎಲ್ಲವೂ ಶಿವಮಯ, ಅದರಂತೆ ಶರೀರವು ಕೂಡ ಶಿವಮಯವೆಂದು ತನ್ನದೇ ಆದ ಶಿವಾನಂದದಲ್ಲಿ ತಲ್ಲೀನನಾಗಿರುತ್ತಿದ್ದನು.

ದಿನಗಳುರುಳಿದಂತೆ ಕಲಿಗಣನಾಥನು ಪ್ರಾಪ್ತವಯಸ್ಕನಾಗುತ್ತಲೆ ಅವನಿಗೆ ಆ ರಾಜ್ಯದ ರಾಜ್ಯಲಕ್ಷ್ಮಿಯು ಕೈಮಾಡಿ ಕರೆದಳು. ಅರಸೊತ್ತಿಗೆಯು ಕೈಸೇರಿತು. ರಾಜ್ಯಲಕ್ಷ್ಮಿಯ ಕರೆಗೆ ಓಗೊಟ್ಟು ಕಲಿಗಣನಾಥನು ಸಿಂಹಾಸನಾರೂಢನಾಗಿ ಸರ್ವರಿಗೂ ಪ್ರಿಯವಾಗುವಂತೆ ರಾಜ್ಯಭಾರವನ್ನು ನಡೆಯಿಸತೊಡಗಿದನು. ಪಾಪಭೀರುವಾದ ಈತನು ತಾನು

ಮಾಡುವ ಪ್ರತಿಯೊಂದು ಕಾರ್ಯವು ಜನಕೋಟಿಗೆ ಹಿತವಾಗುವಂತೆ, ಹಾಗು ಹಿರಿಯರು ಒಪ್ಪುವಂತೆ ಮಾಡುತ್ತಿದ್ದನು.

ಅಲ್ಲದೆ ಈತನು ತನ್ನ ರಾಜಧಾನಿಯಲ್ಲಿಯ ಪ್ರತಿಯೊಬ್ಬನೂ ಲಿಂಗ ಧಾರಣೆಯನ್ನು ಮಾಡತಕ್ಕದ್ದೆಂದು ಆಜ್ಞಾಪಿಸಿದನು. ಹಾಗು ಮಹಾನ್ ಪವಿತ್ರ ಗ್ರಂಥಗಳ ಪ್ರಮಾಣಗಳಿಂದ (ವೇದ—ಆಗಮ—ಉಪನಿಷತ್ತು) ಪ್ರತಿಯೊಬ್ಬರೂ ಲಿಂಗವನ್ನು ಧರಿಸುವಂತೆ ಮಾಡಿದನು. ಈ ರೀತಿಯಾಗಿ ರಾಜ್ಯಭಾರವನ್ನು ನಡೆಯಿಸುತ್ತಿದ್ದ ಕಲಿಗಣನಾಥನ ಆಳಿಕೆಯಲ್ಲಿ ಅಕಾಲ ಮೃತ್ಯು, ಬರ, ನೆರೆಹಾವಳಿ ಮುಂತಾದವುಗಳ ಸುಳಿವೇ ಇರಲಿಲ್ಲ. ಅಷ್ಟೊಂದು ಸುಭಿಕ್ಷವಾಗಿದ್ದಿತು ನಾಡು. ಪ್ರತಿಯೊಬ್ಬರೂ "ಶರಣ ಸತಿ; ಲಿಂಗಪತಿ" ಎಂಬ ಭಾವನೆಯುಳ್ಳವರಾಗಿದ್ದಾಗ ಕೊರತೆ ಕಂಡು ಬರುವದಾದರೂ ಹೇಗೆ ?

ಮಹಾ ಶಿವಭಕ್ತನಾದ ಕಲಿಗಣನಾಥನು ಅಂಗದ ಮೇಲೆ ಲಿಂಗಧರಿಸಿದಂಥವನ ಮುಖಾವಲೋಕನವೂ ನನಗೆ ಬೇಡ ಎಂಬ ತತ್ವದ ಪ್ರತಿಪಾದಕನಾಗಿದ್ದನು. ಭಕ್ತರಲ್ಲಿಯ ಭಕ್ತಿಯ ಭಾಂಡಾರವು ಜಗಜ್ಜಾಹಿರವಾಗಬೇಕಾದರೆ ಯಾವುದೊಂದು ವಿಚಿತ್ರ ಘಟನೆ ಜರುಗಲೇಬೇಕಾಗುತ್ತದೆ. ಆದರಂತೆ ಕಲಿಗನಾಥನ ರಾಜಧಾನಿಯಲ್ಲಿಯೂ ಒಂದು ವಿಚಿತ್ರ ಘಟನೆಯು ಜರುಗಿತು. ಗಂಧದ ಕೊರಡಿನಲ್ಲಿಯ ಸುಗಂಧದ ಅರಿವು ಜಗತ್ತಿನ ಜನರಿಗಾಗಬೇಕಾದರೆ ಅದನ್ನು ಸಾಣೆಯಕಲ್ಲಿಗೆ ತಿಕ್ಕಿದಾಗಲೇ ಸಾಧ್ಯ. ಆದರಂತೆ ಶಿವಭಕ್ತರಲ್ಲಿಯ ಭಕ್ತಿಯೆಂಬ ಪರಿಮಳವು ಪರೀಕ್ಷೆಯೆಂಬ ಸಾಣೆಯಕಲ್ಲಿಗೆ ತೆಯ್ದಾಗಲೇ ಹರಡಿ ಸರ್ವಪ್ರಿಯವಾದುದು ಸರ್ವರಿಗೂ ವಿದಿತವಾದ ಸಂಗತಿಯಾಗಿದೆ.

ಜಗದೀಶನಾದ ಪಾರ್ವತೀನಾಥನು ಒಕ್ಕಲಿಗನ ವೇಷವನ್ನು ತಳೆದು ಲಿಂಗವನ್ನು ಧರಿಸಿಕೊಳ್ಳದೆ ಅರಸನು ವಾಸಿಸುವ ಭವನದ ಎದುರು ನಿಂತುಕೊಂಡನು. ಅಂಗದ ಮೇಲೆ ಲಿಂಗವಿಲ್ಲದೆ ನಿಂತುಕೊಂಡಿದ್ದ ಒಕ್ಕಲಿಗನ ರೂಪಿ ಶಿವನನ್ನು ದ್ವಾರಪಾಲಕನು ನೋಡಿ—

"ಅಯ್ಯಾ ಒಕ್ಕಲಿಗನೇ ! ಲಿಂಗವನ್ನು ಧರಿಸದ ನೀನು ಇಲ್ಲಿಗೇತಕ್ಕೆ ಬಂದಿರುವೆ ? ಇಲ್ಲಿಯವರೆಗೆ ನೀನು ಬಂದುದಾದರೂ ಹೇಗೆ ? ಲಿಂಗ

ವನ್ನು ಧರಿಸಲಾರದಂಥವರು ಈ ನಗರದೊಳಗೆ ಇರಕೂಡದೆಂದು ರಾಜಾಜ್ಞೆಯಿದೆ. ಅದಕ್ಕಾಗಿ ನೀನು ದಯವಿಟ್ಟು ಇಲ್ಲಿಂದ ತೆರಳು. ರಾಜಾಜ್ಞೆಯನ್ನು ಉಲ್ಲಂಘಿಸಬೇಡ" ಎಂದು ಬಿನ್ನವಿಸಿಕೊಂಡನು.

ದ್ವಾರಪಾಲಕನಾಡಿದ ಮಾತುಗಳನ್ನು ಕೇಳಿ ಒಕ್ಕಲಿಗನ ರೂಪದಲ್ಲಿದ್ದ ಪರಶಿವನಿಗೆ ನಗೆಬಂದಿತು. ಆದರೂ ನಗೆಯನ್ನು ತಡೆದು—

ಅಯ್ಯಾ ದ್ವಾರಪಾಲಕಾ! ನಾನು ಅರಸನನ್ನು ಕಾಣಬೇಕಾಗಿದೆ. ಕೆಲಸವು ಅತಿ ಅಗತ್ಯದ್ದಿದುದರಿಂದಲೇ ಇಲ್ಲಿಯವರೆಗೆ ಬರಬೇಕಾಗಿದೆ. ಅದಕ್ಕಾಗಿ ನೀನು ನನ್ನೊಂದಿಗೆ ಚರ್ಚೆಯಲ್ಲಿ ಸಮಯವನ್ನು ಕಳೆಯದೆ ಅರಸನ ಭೆಟ್ಟಿಯ ಪ್ರಬಂಧವನ್ನು ಮಾಡು" ಎಂದು ನುಡಿದನು.

ಅದಕ್ಕುತ್ತರ ರೂಪವಾಗಿ ದ್ವಾರಪಾಲಕನು, "ಅಯ್ಯೊ ಒಕ್ಕಲಿಗನೇ! ನಿನಗೆ ಅಂಥ ಅಗತ್ಯದ ಕೆಲಸವಾದರೂ ಏನಿದೆ? ನನ್ನ ಮಾತು ಕೇಳು. ಅರಸನ ಕೋಪಕ್ಕೆ ತುತ್ತಾಗಬೇಡ ಹೊರಟು ಹೋಗು" ಎಂದನು.

ದ್ವಾರಪಾಲಕನ ಮಾತು ಕೇಳಿ ಮರಳಲು ಆ ಒಕ್ಕಲಿಗನು ಬಂದಿರಲಿಲ್ಲ. ಅವನಿಗೆ ಅರಸನ ಸತ್ವಪರೀಕ್ಷೆ ಮಾಡಬೇಕಾಗಿದ್ದಿತು. ಅದಕ್ಕಾಗಿಯೇ ಅವನು, "ಅಯ್ಯಾ! ನನಗಾಗಿ ನೀನು ಚಿಂತಿಸಬೇಡ. ನಾನು ಅರಸನನ್ನು ಕಾಣಲೇಬೇಕಾಗಿದೆ. ನನ್ನ ಭೂಮಿಗೆ ತೆರಿಗೆಯನ್ನು ಹೆಚ್ಚು ಹಾಕಿದ ಪ್ರಯುಕ್ತ ಅರಸನೊಂದಿಗೆ ಮಾತನಾಡಬೇಕಾಗಿದೆ. ಅದಕ್ಕಾಗಿ ನೀನು ಈ ವಿಷಯದಲ್ಲಿ ಅಡ್ಡ ಬರಬೇಡ" ಎಂದನು.

ನಿರುಪಾಯನಾದ ದ್ವಾರಪಾಲಕನು ಮತ್ತೆ ಆ ಒಕ್ಕಲಿಗನಿಗೆ ಏನೂ ಹೇಳಲಿಲ್ಲ. ಅಲ್ಲದೆ ಶಿವಾನುಭವ ಮಂದಿರದಲ್ಲಿದ್ದ ಕಲಿಗಣನಾಥ ಭೂಪತಿಯ ಬಳಿ ಹೋಗಿ ಒಕ್ಕಲಿಗನು ಬಂದಿರುವ ಸಮಾಚಾರವನ್ನು ತಿಳಿಸಿದನು. ಶಿವಪದವಾದ ಲೇಖನವೊಂದು ಅದೇ ದಿನ ಜ್ಞಾನಗಳಿಂದ ಬರೆಯಲ್ಪಟ್ಟು ಅಲ್ಲಿಗೆ ಬಂದಿದ್ದಿತು. ಅದನ್ನು ನೋಡಲೋಸುಗವೇ ಸಕಲಶಾಸ್ತ್ರ ಪಾರಂಗತನಾದ ಕಲಿಗಣನಾಥನು ಶಿವಾನುಭವ ಮಂದಿರಕ್ಕೆ ಬಂದಿದ್ದನು. ಅಂಥ ಸಮಯದಲ್ಲಿ ಅಂಗದ ಮೇಲೆ ಲಿಂಗವನ್ನು ಧರಿಸದ ಒಕ್ಕಲಿಗನೊಬ್ಬನು ಹಾಕಲಾಗಿದ್ದತೆರಿಗೆಯು ಹೆಚ್ಚಾಗಿದೆಯೆಂದು ದೂರು ಕೊಡಲುಬಂದುದನ್ನು ಕೇಳಿ, "ಹೋಗು ದ್ವಾರಪಾಲಕಾ! ಭೂಮಿಯ ತೆರಿಗೆಯು ಸರಿಸಮನಾಗಿ

ಯಾರಿಗೂ ಭಾರವಾಗದಂತೆ ಹಾಕಲ್ಪಟ್ಟಿದೆ. ಆ ಬಗ್ಗೆ ಮಾತನಾಡುವ ಅವಶ್ಯಕತೆಯು ಇಲ್ಲ. ಅಲ್ಲದೆ ಲಿಂಗವನ್ನು ಧರಿಸದವನ ಮುಖವನ್ನು ಕೂಡಾ ನಾನು ನೋಡಲಾರೆ. ಆ ಬಂದಂಥ ಒಕ್ಕಲಿಗನನ್ನೇ ಮರಳಿಸಿ ಬಿಡು'' ಎಂದನು.

ಅನಂತರ ದ್ವಾರಪಾಲಕನು ಅರಸನಿಗೆ ವಂದಿಸಿ ಮತ್ತೆ ಮಹಾದ್ವಾರದ ಬಳಿ ಬಂದು ತನ್ನ ಪ್ರತೀಕ್ಷೆಯಲ್ಲಿರುವ ಒಕ್ಕಲಿಗನಿಗೆ ಅರಸನು ಆಡಿದುದೆಲ್ಲವನ್ನು ವಿವರಿಸಲು ಅದಕ್ಕೆ ಒಕ್ಕಲಿಗನು, "ದ್ವಾರಪಾಲಕಾ! ನಾವು ಈ ವರೆಗೂ ಕಡಿಮೆ ಪ್ರಮಾಣದಲ್ಲಿ ತೆರಿಗೆಯನ್ನು ಕೊಡುತ್ತಿದ್ದೆವು. ಆದರೆ ಈಗ ಹೊಸದಾಗಿ ಹಾಕಿದ ತೆರಿಗೆಯು ನಮ್ಮ ಶಕ್ತಿಗೂಮಿೂರಿದಂಥದಾಗಿರುತ್ತದೆ. ಅದಕ್ಕಾಗಿ ನೀನು ಸನ್ನಿಧಾನದಲ್ಲಿ ಈ ವಿಷಯವನ್ನು ಅರಿಕೆ ಮಾಡು. ಇಲ್ಲವೆ ನನ್ನನ್ನೇ ಒಳಗೆ ಹೋಗಲು ಅನುಮತಿ ಕೊಡು''ಎಂದನು.

ಒಕ್ಕಲಿಗನು ಮಹಾ ಹಟವಾದಿಯಿರುವನೆಂಬುದು ದ್ವಾರಪಾಲಕನಿಗೆ ಮನವರಿಕೆಯಾಯಿತು. ಅದಕ್ಕವನು ಮತ್ತೆ ಅರಸನ ಬಳಿಗೆ ಹೋಗಿ ಅವನಾಡಿದ ಮಾತುಗಳನ್ನು ಪುನರುಚ್ಚರಿಸಲು ಅರಸನು :—

"ಅವನು ಲಿಂಗಧಾರಣೆ ಮಾಡಿಕೊಂಡು ಬಂದುದಾದರೆ ಅವನ ಇಷ್ಟಾರ್ಥವು ನೆರವೇರುವದೆಂದು ತಿಳಿಸು'' ಎಂದು ಆಜ್ಞಾಪಿಸಿದನು.

ದ್ವಾರಪಾಲಕನು ಅದೇ ವಯತನ್ನೇ ಓಕ್ಕಲಿಗನಿಗೆ ತಿಳಿಸಲು, ಇದೇ ರೀತಿ ಉತ್ತರವನ್ನು ನಿರೀಕ್ಷಿಸುತ್ತಿದ್ದ ಒಕಲಿಗನು :—

"ಅಯ್ಯಾ ದ್ವಾರಪಾಲಕಾ! ನಮ್ಮ ಹಿರಿಯರೇ ಲಿಂಗಧಾರಣೆ ಮಾಡಿಲ್ಲವೆಂದ ಮೇಲೆ ನಾನು ಹೇಗೆ ಲಿಂಗಧಾರಣೆ ಮಾಡಲಿ? ಈ ವಿಷಯವನ್ನು ಧೊರೆಗೆ ತಿಳಿಸು'' ಎಂದನು.

ದ್ವಾರಪಾಲಕನಿಗೆ ಸಂಕಟಬಂದಂತಾಯಿತು, ಆದರೂ ಅವನು ಒಕ್ಕಲಿಗನಾಡಿದ್ದನ್ನೆಲ್ಲ ಸನ್ನಿಧಾನದಲ್ಲಿ ಅರಿಕೆ ಮಾಡಿಕೊಳ್ಳಲು, ಅರಸನಿಗೆ ಸಿಟ್ಟು ಬಂದಿತು. ಆ ಒಕ್ಕಲಿಗನ ಶಿರಚ್ಛೇದ ಮಾಡಿಬಿಡುತ್ತೇನೆ ಎಂದು ಖಡ್ಗವನ್ನು ಒರೆಯಿಂದ ಹಿರಿದುಕೊಂಡೇ ಒಕ್ಕಲಿಗನ ಬಳಿ ಬಂದನು. ಕಲಿಗಣನಾಥನಲ್ಲಿಯ ಶಿವಲಿಂಗದ ಮೇಲಿನ ಮಮತೆಯನ್ನು ಕಂಡು ಹರ್ಷಿತನಾದ ಶಂಕರನು ತನ್ನ ನಿಜ ರೂಪವನ್ನು ತೋರಿಸಿ "ಬೇಕಾದ

ವರವನ್ನು ಬೇಡು ” ಎಂದನು.

ಅದಕ್ಕೆ ಕಲಿಗಣನಾಥ ಭೂಪತಿಯು, “ ಹೇ ದೇವ ದೇವಾ ! ನಿನ್ನಲ್ಲಿ ನಾನಾವ ವರವನ್ನು ಬೇಡಲಿ ? ಆದರೂ ನಾನೊಂದು ಮಾತನ್ನು ಕೇಳು ತ್ತೇನೆ. ಅದನ್ನು ನೀನು ನಡೆಯಿಸಿಕೊಡಬೇಕು ” ಎನ್ನಲು ಅದಕ್ಕೆ ಜಗ ತ್ಪಾಲಕನು, “ ವತ್ಸಾ ! ನಿನ್ನ ಮನಸ್ಸಿನೊಳಗಿದ್ದುದನ್ನು ಕೇಳು ಪೂರೈಸಲು ನಾನು ಸಿದ್ಧನಿದ್ದೇನೆ ” ಎಂದನು. ಆಗ ಆಭೂಪತಿಯು, “ ಹೇ ಮಹಾ ದೇವಾ !. ನಿನ್ನ ಅಂಗದಲ್ಲಿ ನನಗೆ ಲಿಂಗವು ಕಾಣಿಸಲೊಲ್ಲದು. ನೀನು ಶಿವ ಲಿಂಗವನ್ನು ಧರಿಸಿಕೊಂಡರೆ ಸಾಕು. ಅದೇ ನನಗೆ ವರವನ್ನು ದಯಪಾಲಿಸಿ ದಂತಾಗುವದು” ಎಂದು ಬಿನ್ನವಿಸಿಕೊಂಡನು.

ಭಕ್ತರ ಆಧೀನನಾದ ಶಿವನು ಭೂಪತಿಯ ಇಚ್ಛೆಯಂತೆ ಲಿಂಗವನ್ನು ಧರಿಸಿಕೊಂಡು ಅವನ ಮನವನ್ನು ತೃಪ್ತಿಗೊಳಿಸಿ ಅವನಿಗೆ ಗಣಪದವಿ ಯನ್ನು ದಯಪಾಲಿಸಿದನು.

ಅಣಿಯುರದ ಭಕ್ತಿ ಧಾರುಣಿಗೆ ಪೊಸತಾಗಿ ಮ ।
ನ್ನಣೆಯೊಳೀಶಂಗೆ ಶಿವಲಿಂಗ ಮಿತ್ತ ಕಲಿ ।
ಗಣನಾಥನೆನ್ನ ಕುಲಗುರುವು ॥

— ಶ್ರೀ. ನಿಜಗುಣ ಶಿವಯೋಗಿಗಳು.

# ೨. ರುದ್ರಪಶುಪತಿ

ಚೋಳದೇಶದಲ್ಲಿ ಶವಭಕ್ತರಿಂದ ತುಂಬಿದ ತಿರುಮಲೆಯೆಂಬ ಊರಲ್ಲಿ ರುದ್ರಪ್ರಭವ ಹಾಗು ಶುಚಿದೇವಿಯರೆಂಬ ಸಾತ್ವಿಕ ಬ್ರಾಹ್ಮಣರಿದ್ದರು. ಅವರು ಮಹಾ ಶಿವಭಕ್ತರು. ಆ ದಂಪತಿಗಳ ಉದರದಲ್ಲಿ ಮಹಾನಿಷ್ಠನಾದ ರುದ್ರಪಶುಪತಿಯು ಜನಿಸಿದನು. ಈತನು ಬಾಲ್ಯದಿಂದಲೇ ಶಿವನಲ್ಲಿ ಅನನ್ಯ ಭಕ್ತಿಯುಳ್ಳವನಾಗಿದ್ದನು.

ಮಾನವರಲ್ಲಿಯ ಮಾಲಿನ್ಯವನ್ನು ಹೋಗಲಾಡಿಸಿ ಅವರನ್ನು ಸನ್ಮಾರ್ಗಕ್ಕೆ ಹಚ್ಚಲೋಸುಗ ಆ ಊರಲ್ಲಿಯ ಶಿವಾಲಯವೊಂದರಲ್ಲಿ ಪ್ರತಿದಿನವೂ ಶಿವಚರಿತೆಯನ್ನು ತಿಳಿಸಿ ಹೇಳಲಾಗುತ್ತಿದ್ದಿತು. ಪುರಾಣಿಕರು ತಮ್ಮ ಸುಲಲಿತವಾದ ವಾಕ್ಸರಣಿಯಿಂದ ಪಂಡಿತ ಪಾಮರರಿಬ್ಬರಿಗೂ ತಿಳಿಯುವಂತೆ ವಿಭೂತಿ, ರುದ್ರಾಕ್ಷ, ಗುರು, ಲಿಂಗ, ಜಂಗಮ, ಮಂತ್ರ, ಪಾದೋದಕ ಹಾಗು ಪ್ರಸಾದ ಮುಂತಾದ ಗಹನವಾದ ವಿಷಯಗಳನ್ನು ತಿಳಿಸಿ ಹೇಳುತ್ತಿದ್ದನು.

ಈ ರೀತಿ ಹೇಳುತ್ತಿರುವಾಗ ಒಂದು ದಿವಸ ಶಿವನು ಲೋಕ ಕಲ್ಯಾಣಾರ್ಥವಾಗಿ ವಿಷವನ್ನು ಕುಡಿಯಬೇಕಾಯಿತು, ಎಂಬ ವಿಷಯವನ್ನು ಪುರಾಣಿಕರು ರಸವತ್ತಾಗಿ ಬಣ್ಣಿಸುತ್ತಿರುವಾಗ ರುದ್ರ ಪಶುಪತಿಗೆ ಕಸವಿಸಿಯಾಯಿತು. ಆ ವಿಷವನ್ನು ಕುಡಿಯುವಾಗ ತನ್ನ ಆರಾಧ್ಯ ದೇವನಿಗೆ ಎಷ್ಟೊಂದು ಸಂಕಟವಾಗಿರಬಹುದು, ಎಂಬುದನ್ನು ಯೋಚಿಸಿಕೊಂಡೇ ಅವನಿಗೆ ಮೂರ್ಛೆಬಂದುಬಿಟ್ಟಿತು. ಕೂಡಿದವರೆಲ್ಲರೂ ಸೇರಿಕೊಂಡು ರುದ್ರಪಶುಪತಿಯನ್ನು ಉಪಚರಿಸಲು ಅವನು ಎಚ್ಚತ್ತನು.

ಎಚ್ಚರ ಬರುವದೇ ತಡ, ರುದ್ರಪಶುಪತಿಯು " ಓ ದೇವದೇವಾ ! ನೀನು ವಿಷವನ್ನು ಕುಡಿಯುವಾಗ ಜಗನ್ಮಾತೆಯು ಸುಮ್ಮನೆ ನೋಡುತ್ತ ಕುಳಿತುಕೊಂಡಿದ್ದಳೇ ? ನಿನ್ನ ಕುಮಾರರು ಆ ಸಮಯದಲ್ಲಿ ಅಲ್ಲಿರಲಿಲ್ಲವೇ ? ಅಥವಾ ಅಲ್ಲಿದ್ದರೂ ನೀನು ಕುಡಿಯುವಾಗ ಕೈಕಟ್ಟಿಕೊಂಡು

ಕುಳಿತಿದ್ದರೇ? ಪ್ರಮಥರು, ಗಣಂಗಳು, ಇನ್ನಾರೂ ನಿನ್ನ ಬಳಿ ಇರಲಿಲ್ಲವೇ? ನೀನು ಮಾಡಲಿರುವ ವಿಷಪ್ರಾಶನವನ್ನು ಬಿಡಿಸಲು ಯಾರೂ ಮುಂದಾಗ ಲಿಲ್ಲವೇ? ಹೇ ಮಹಾದೇವಾ! ಆ ಕಾಲಕೂಟ ವಿಷವು ನಿನ್ನ ಗಂಟಲಿ ನೊಳಗಿಳಿಯುವಾಗ ನಿನಗೆಷ್ಟು ಸಂಕಟವಾಗಿರಬಹುದು? ಕೇವಲ ಅದರ ಕಲ್ಪನೆಮಾತ್ರದಿಂದಲೇ ನನ್ನ ಶರೀರವು ನಡುಗತೊಡಗಿರುವಾಗ ನಿನ-ಗೆಂತಹ ವೇದನೆಯಾಗಿರಬಹುದು?'' ಮುಂತಾಗಿ ಆಲಾಪಿಸಲು ಮೊದಲು ಮಾಡಿದನು.

ರುದ್ರಪಶುಪತಿಯ ಆಲಾಪವನ್ನು ಕೇಳಿ ಕೂಡಿದವರಲ್ಲಿಯ ಕೆಲವರು ಗಾಬರಿಗೊಂಡರು. ಇವನಿಗೆ ಹುಚ್ಚುಹಿಡಿದಿದೆ, ತಲೆ ತಿರುಗಿದೆ ಮುಂತಾಗಿ ಮಾತನಾಡಿಕೊಂಡು ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಆದರೆ ರುದ್ರ ಪಶುಪತಿಯು ಮಾತ್ರ ಅಲ್ಲಿಯೇ ಉಳಿದುಕೊಂಡನು. ಯಾರು ಏನು ಹೇಳಿದರೂ ಕೇಳದೆ ತನ್ನ ಮನದಲ್ಲಿ ಮನೆ ಮಾಡಿಕೊಂಡ ವಿಷಯದ ಬಗ್ಗೆ ಚಿಂತಿಸುತ್ತ ಕುಳಿತುಕೊಂಡನು.

ಆ ಬಗ್ಗೆ ಅವನು ಅಷ್ಟಕ್ಕೇ ಸುಮ್ಮನಾಗದೆ ಶಿವನನ್ನು ಕುರಿತು ಉಗ್ರ ತಪಸ್ಸನ್ನು ಮಾಡತೊಡಗಿದನು. ಆಗಂತೂ ಜನರು ಇವನ ಹುಚ್ಚುತನಕ್ಕೆ ಇನ್ನೂ ನಗತೊಡಗಿದರು. ಯಾರು ನಕ್ಕರೆ ತನಗೇನು? ತನ್ನ ಮಹಾ ದೇವನು ವಿಷವನ್ನು ಗಂಟಲಿನೊಳಗಿರಿಸಿಕೊಂಡಿರುವಾಗ ಇವರದೇನು ಹೋದೀತು? ಎಂಬ ಭಾವನೆಯಿಂದ ತನ್ನ ತಪಸ್ಸನ್ನು ಮುಂದುವರಿಸಿ ದನು. ಇವನ ಭಕ್ತಿಗೆ ಮೆಚ್ಚಿದ ಮಹಾದೇವನು, ''ವತ್ಸಾ! ನಿನ್ನ ತಪಸ್ಸಿಗೆ ಮೆಚ್ಚಿದ್ದೇನೆ. ನಿನಗೆ ಬೇಕಾದ ವರಗಳನ್ನು ಕೇಳಿಕೋ" ಎನ್ನಲು ಶಿವ ದರ್ಶನದಿಂದ ಹರ್ಷಿತನಾದ ರುದ್ರಪಶುಪತಿಯು, ''ಹೇ ಶಂಭೋಶಂಕರಾ! ನಿನ್ನದರ್ಶನದಿಂದಲೇ ನಾನು ಪುನೀತನಾಗಿರುವಾಗ ಬೇರೆ ವರಗಳನ್ನು ಬೇಡಿ ಕೊಂಡು ಏನು ಮಾಡಲಿ? ಆದರೂ ನಾನೊಂದು ಮಾತು ಕೇಳುತ್ತೇನೆ. ಅದನ್ನು ನೀನು ನಡೆಯಿಸಿ ಕೊಡಬೇಕು'' ಎಂದು ಶಂಕರನ ಪಾದಗಳ ಮೇಲೆ ಬಿದ್ದನು.

ಆಗ ಮಹಾದೇವನು ರುದ್ರಪಶುಪತಿಯ ಮೈದಡವಿ ಅವನನ್ನು ಮೇಲಕ್ಕೆತ್ತಿ,''ವತ್ಸಾ! ಯಾವ ಭಯವಿಲ್ಲದೇ ಬೇಡು ಬೇಕಾದ್ದನ್ನು ಬೇಡು.

ಕೊಡಲು ಸಿದ್ಧನಿದ್ದೇನೆ " ಎಂದನು. ಆಗ ರುದ್ರಪಶುಪತಿಯು ಪುನಕ್ಕೆ ಕೊಂಚ ನೆಮ್ಮದಿಯೆನ್ನಿಸಿದಂತಾಗಿ, " ಹೇ ಮಹಾದೇವಾ ! ನಿನ್ನ ಕಂಠ ದಲ್ಲಿರುವ ವಿಷವನ್ನು ಮೊದಲು ಉಗುಳಿಬಿಡು. ಅಂದರೆ ನನ್ನ ಮನ ಸ್ಸಿಗೆ ತೃಪ್ತಿಯಾಗುತ್ತದೆ " ಎಂದನು.

ತನ್ನ ಬಗೆಗೆ ರುದ್ರಪಶುಪತಿಯು ವ್ಯಕ್ತಪಡಿಸುತ್ತಿರುವ ಕಳಕಳಿ ಯನ್ನು ಕಂಡು ಶಂಕರನಿಗೆ ಅತ್ಯಾನಂದವಾಯಿತಾದರೂ ಅವನು, " ಭಕ್ತಶಿರೋಮಣಿಯೇ ! ಆ ವಿಷದಿಂದ ನನಗೇನೂ ಬಾಧೆಯಿಲ್ಲ. ಆ ಬಗ್ಗೆ ನೀನು ನೊಂದುಕೊಳ್ಳುವ ಕಾರಣವಿಲ್ಲ " ಎನ್ನಲು, ರುದ್ರ ಪಶುಪತಿಯು ಒಪ್ಪದೇ, "ದೇವಾ ! ಅದೊಂದು ಮಾತ್ರ ಸಾಧ್ಯವಿಲ್ಲ. ಅದೇನೋ ಹೇಳಿಕೇಳಿ ವಿಷ. ವಿಷವನ್ನು ಉಗುಳಿ ಬಿಡು " ಎಂದು ಕೇಳಿ ಕೊಂಡನು.

ಅನಂತರ ಮಹಾದೇವನು ಭಕ್ತನ ಮನದಿಚ್ಛೆಯನ್ನು ಪೂರ್ಣಮಾಡ ಲೋಸುಗ ಕಂಠದಲ್ಲಿಯ ವಿಷವು ಕಾಣದಂತೆ ಮಾಡಲು . ರುದ್ರಪಶುಪ ತಿಯು ಅದನ್ನು ಕಂಡು ಇಂದಿಗೆ ನನ್ನ ಚಿಂತೆಯು ಪರಿಹಾರವಾಯಿತು' ಎಂದು ಮನದಣಿಯ ಕುಣಿದಾಡಿದನು. ಕೊನೆಗೆ ಮಹಾದೇವನು ಮುಗ್ಧ ಮನಸ್ಸಿನ ರುದ್ರಪಶುಪತಿಗೆ ಗಣಪದವಿಯನ್ನು ಅನುಗ್ರಹಿಸಿದನು.

ಕೊರಳ ವಿಷಮಂ ಕಂಡು ಮರಣವಹುದೆಂದು ಭವ ।
ಹರನ ನಾರೈವುತಿಹ ರುದ್ರಪಶುಪತಿಗೆ ।
ಶರಣೆಂದು ಸಿದ್ಧಿಪಡೆಯುವೆನು ॥

—ಶ್ರೀ ನಿಜಗುಣ ಶಿವಯೋಗಿಗಳು.

# ೩. ಮುರುಘರು

ದಕ್ಷಿಣದ ಚೋಳರಾಜದಲ್ಲಿ ಶಿವಭಕ್ತರಿಂದ ತುಂಬಿ ತುಳುಕುವ ತಗಲ್‌ಪುರವೆಂಬುದೊಂದು ಪಟ್ಟಣವಿದ್ದಿತು. ಅಲ್ಲಿ ಮಹಾಶಿವಭಕ್ತನಾದ ಮುರುಘನೆಂಬ ಶೈವನು ಶಿವೋಪಾಸನೆಯಲ್ಲಿ ಕಾಲಕಳೆಯುತ್ತಿದ್ದನು. ಆತ ನಲ್ಲಿಯ ಶಿವಭಕ್ತಿಯು ಅತಿ ವಿಚಿತ್ರವಾದದ್ದಿತು. ಆ ಕಾಲದಲ್ಲಿ ಆತನ ಸರಿಸಮಾನನಾದವರು ಅಂದರೆ ಭಕ್ತಿಯಲ್ಲಿ, ನಿಷ್ಠೆಯಲ್ಲಿ ಆತನನ್ನು ಹೋಲು ವಂಥವರು ಯಾರೂ ಇರಲಿಲ್ಲ.

ಆತನು ವರ ಪಂಚಾಕ್ಷರವನ್ನು ಪಠಿಸುವ ರೀತಿಯು ಕೂಡ ಅಮೋಘವಾದುದಾಗಿದ್ದಿತು. ಮಲಗಿದಾಗ, ಎಚ್ಚತ್ತ ಕೂಡಲೆ, ಕೂತಾಗ ಹಾಗು ತಿರುಗಾಡುವಾಗಲೂ ಕೂಡ ಆತನು ಪಂಚಾಕ್ಷರ ಪಠಣವನ್ನು ನಿಲ್ಲಿಸುತ್ತಿದ್ದಿಲ್ಲ. ಇಷ್ಟೇ ಅಲ್ಲದೆ ಕಾರ್ಯನಿರತನಾಗಿದ್ದಾಗಲು ಕೂಡ ಅವನ ಪಠಣವು ನಿಲ್ಲುತ್ತಿದ್ದಿಲ್ಲ.

ಈ ರೀತಿಯಾಗಿ ಅತ್ಯಂತ ಮಮತೆಯಿಂದ ಪಂಚಾಕ್ಷರ ಪಠಣವು ಕೆಲವು ವರ್ಷಗಳವರೆಗೆ ನಿರಂತರವಾಗಿ ಕಳೆದವು. ಮುಂದೆ ಒಂದು ದಿನ ಅವನು ಅದೇ ನಗರದೊಳಗಿನ ಚಂದ್ರಮೌಳೀಶ್ವರನ ದರ್ಶನಕ್ಕೆಂದು ಅತ್ಯಂತ ಭಯಭಕ್ತಿಯಿಂದ ಮಿಂದು ಶುಚಿಭೂತನಾಗಿ ಭಸ್ಮ ಸ್ನಾನಗಳೇ ಮುಂತಾದ ಕರ್ಮಗಳನ್ನು ತೀರಿಸಿದ ನಂತರ ಭಸ್ಮಧಾರಣೆ ಮಾಡಿ, ರುದ್ರಾಕ್ಷಿಗಳನ್ನು ಧರಿಸಿ, ಮಂದಿರಕ್ಕೆ ಹೋಗಿ ಶಿವಮಂತ್ರದೊಂದಿಗೆ ಅರ್ಚನೆ ಮಾಡುತ್ತ ಭಕ್ತಿಯ ಆವೇಶದಿಂದ ಆನಂದಪರವಶನಾಗಿ ಅಂಗದ ಮೇಲಿನ ಅರಿವಿಲ್ಲದೆಯೇ ಪಂಚಾಕ್ಷರವನ್ನು ಪಠಿಸುತ್ತಿರುವಾಗ ಅವನ ಹಾಡುವ, ಕುಣಿಯುವ ಕಾರ್ಯವೂ ಅವ್ಯಾಹತವಾಗಿ ನಡೆದಿದ್ದಿತು.

ಮುರುಘನಲ್ಲಿಯ ಅಚಲವಾದ ಭಕ್ತಿಯನ್ನು ಕಂಡು ಪರಶಿವ ಮೂರ್ತಿಯು ಆನಂದ ತುಂದಿಲನಾಗಿ ಆ ಭಕ್ತ ಶಿರೋಮಣಿಗೆ ಲಿಂಗ ಮುಖದಿಂದಲೆ ದರ್ಶನವನ್ನಿತ್ತು ಗಣಪದವಿಯನ್ನು ಆಶೀರ್ವದಿಸಿದನು.

ಇಂಥ ಮಹಾನುಭಾವರ ದೃಷ್ಟಾಂತಗಳಿಂದಲೇ "ಮನಸ್ಸಿದ್ದಲ್ಲಿ ಮಹಾದೇವ" ಎಂಬ ಮಾತು ನಿಜವೆಂಬುದು ಸೂರ್ಯಪ್ರಕಾಶದಷ್ಟು ನಿಚ್ಚಳವಾಗಿ ಗೋಚರವಾಗುವದು.

ವರಮೂಲ ಮಂತ್ರವನೆ ಹರಣವಾಗುಚ್ಚರಿಸಿ ।
ಪರಮ ನೊಲುಮೆಯನು ಪಡೆದ ಮುರುಗರ ಚರಣ ।
ವಿರಲೆನ್ನ ಮಾನಸದೊಳೊಂಗದಿ ॥

—ಶ್ರೀ ನಿಜಗುಣ ಶಿವಯೋಗಿಗಳು

## ೪. ಚೊಕ್ಕ ನಯನಾರು

ಚೋಳ ರಾಜ್ಯದಲ್ಲಿ ಶಿವಭಕ್ತರ ಬೀಡೆನ್ನಿಸಿದ ಶೋಭನಪುರದಲ್ಲಿ ಅತೀವ ಭಕ್ತನಾದ ನಾಯನಾರನು ಜನ್ಮವೆತ್ತಿದನು. ಈತನು ಗೋಪಾಲನೆಯ ವ್ಯವಸಾಯವನ್ನು ಮಾಡುತ್ತಿದ್ದನು. ನಿಜವಾದ ಶಿವಭಕ್ತನಲ್ಲಿರಬೇಕಾದ ಉಚ್ಚ ಗುಣಗಳೆಲ್ಲವೂ ಇವನಲ್ಲಿ ಮನೆಮಾಡಿಕೊಂಡಿದ್ದವು. ಅಲ್ಲದೆ ಇವನಲ್ಲಿಯ ಪಾಂಡಿತ್ಯವು ಕೂಡ ಅತ್ಯಮೋಘವಾದುದಾಗಿದ್ದಿತು.

ಈತನು ತನ್ನ ಕಾಯಕಕ್ಕನುಗುಣವಾಗಿ ಪ್ರತಿದಿನವೂ ಬೆಳಿಗ್ಗೆ ದನಗಳನ್ನು ಅಟ್ಟಿಕೊಂಡು ಅಡವಿಗೆ ಹೋಗಿ ತನ್ನ ಕೊಳಲನ್ನೂದುತ್ತ ಅದರಲ್ಲಿಯೇ ಮಗ್ನನಾಗಿರುತ್ತಿದ್ದನು. ಕೊಳಲಿನ ನಿನಾದವನ್ನು ಆಲಿಸಿದ ಪಶುಗಳು ತಮ್ಮ ತೃಪ್ತಿಯನ್ನು ತೋರಿಸಲೋಸುಗ ಅವನ ಸುತ್ತುಮುತ್ತಲು ನಿಂತುಕೊಂಡಿರುತ್ತಿದ್ದವು. ಅವನು ಪಶುಗಳನ್ನು ಮೇಯಿಸಲು ಹೋಗುವ ಕಾನನವು ಕೂಡ ಅತ್ಯಂತ ನಯನಮನೋಹರವಾಗಿದ್ದಿತು.

ಈತನು ಇರುಳಿನ ಕೊನೆಯ ಭಾಗದಲ್ಲಿ ಶಿವಧ್ಯಾನ ಮಾಡುತ್ತಲೆ ಎದ್ದು ಶಿವಶರಣರ ಸಂತತಿಯನ್ನು ಕೊಂಡಾಡುತ್ತ, ಎಲ್ಲಕ್ಕೂ ಮಹತ್ತರವಾದ ಪಂಚಾಕ್ಷರಿ ಮಂತ್ರವನ್ನು ಹೇಳುತ್ತಿದ್ದನು. ಈ ಮಂತ್ರದ ಮಹಿಮೆಯನ್ನು ಆತನು ಚನ್ನಾಗಿ ಅರಿತವನಾಗಿದ್ದನು. ಆನಂತರವೂ ಕೂಡ ಈತನು ಕೊಳಲಿನೊಳಗೆ ಕೂಡ ಪಂಚಾಕ್ಷರವನ್ನೇ ಊದುತ್ತ ವನಕ್ಕೆ ಹೋಗಿ ಪತ್ರೆ-ಪುಷ್ಪಗಳನ್ನು ತೆಗೆದುಕೊಂಡು ಬರುತ್ತಿದ್ದನು.

ಶಿವಪೂಜಾ ದುರಂಧರನಾದ ಈತನು ಒಂದು ಸಲ ಉದ್ಯಾನವನಕ್ಕೆ ಹೋದಾಗ, ನಯನಮನೋಹರವಾದ, ಬಂಗಾರವರ್ಣದ ಹೂವಿನ ಗೊಂಚಲುಗಳಿಂದ ಅಲಂಕೃತವಾಗಿದ್ದ ಒಂದು ಮರವು ಕಾಣಿಸಿತು. ಅದನ್ನು ಕಂಡೊಡನೆ ಈತನಿಗೆ ಶಿವಲಿಂಗಾರ್ಚನೆಯ ಅಗಲುವಿಕೆಯು ತಲೆದೋರಿತು. ಇಷ್ಟೇ ಅಲ್ಲ, ನಯನಾನಂದವಾದ ಆ ಮರದಲ್ಲಿ ಅತ್ಯಂತ

ವಿಧೇಯತನದ ಶಿವಭಾವನೆಯನ್ನು ತಳೆದನು. ಅದರಲ್ಲಿಯೇ ತನ್ನ ತನು-ಮನಗಳನ್ನು ಲೀನಗೊಳಿಸಿದನು. ಆ ರೀತಿ ಪರವಶನಾದುದರ ಪರಿಣಾಮವಾಗಿ ಅವನಲ್ಲಿ ಶಿವಭಕ್ತಿಯ ರಸವು ಉಕ್ಕೇರತೊಡಗಿತು.

ಆಗ ಅವನು ಶ್ರೇಷ್ಟತಮವಾದ ಪಂಚಾಕ್ಷರ ಮಂತ್ರವನ್ನು ತನ್ನಲ್ಲಿಯ ಗಾನಪ್ರೌಢಿಮೆಯಿಂದ ಕೊಳಲಿನಲ್ಲಿ ಊದತೊಡಗಿದನು. ಆ ಸಮಯದಲ್ಲಿ ಅವನು ಪ್ರಪಂಚವನ್ನೇ ಮರೆತುಬಿಟ್ಟನು. ಪಂಡಿತ-ಪಾಮರರಿಗೂ ಅಚ್ಚರಿಯನ್ನುಂಟು ಮಾಡುವ ಆತನ ಈ ರೀತಿಯ ವಿಚಿತ್ರ ಭಕ್ತಿಯನ್ನು ಹಾಗು ಅವನ ನಿಷ್ಠೆಯನ್ನು ಕಂಡು ಭಕ್ತವತ್ಸಲನೂ, ದೇವದೇವನೂ ಆದ ಮಹಾದೇವನು ಆ ಮರದಲ್ಲಿಯೇ ಕಾಣಿಸಿಕೊಂಡು, ಆತನ ವೈದಡವಿದನು.

ಸಾಕ್ಷಾತ್ ಶಂಕರನನ್ನು ಕಂಡೊಡನೆ ಈತನು ಪುಳುಕಿತನಾಗಿ ಆತನ ಗುಣಗಾನ ಮಾಡತೊಡಗಿದನು. ಆಗ ಶಂಕರನು ಅವನನ್ನು ಪುಷ್ಪಕ ವಿಮಾನದಲ್ಲಿ ಕುಳ್ಳಿರಿಸಿಕೊಂಡು ಶಿವಲೋಕಕ್ಕೆ ಕರೆದೊಯ್ದು ಗಣಪದವಿಯನ್ನು ಅನುಗ್ರಹಿಸಿದನು.

ತಿಳಿದು ಪಂಚಾಕ್ಷರವೆ ಕೊಳಲೂದುತ್ತ ಶಿವ ।<br>
ನಿಳಯುವನು ಪೊಕ್ಕವರ ಚೊಕ್ಕ ನಯನಾರ ।<br>
ರೆಳಸಿ ಮನವಾರೆ ನೆನೆಯುವೆನು ॥

—ಶ್ರೀ ನಿಜಗುಣ ಶಿವಯೋಗಿಗಳು

## ೫. ಕಾರಿಕಾಲಾಂಬೆ

ದೇವಾಲಯಗಳೆಂದರೆ ಭಾವಿಕರಿಗೆ ಪಂಚಪ್ರಾಣ. ಶಿವಭಕ್ತರ ತವರು ಮನೆಯೆನಿಸಿದ ಕಾರಿಕಾಲ ಎಂಬ ಪಟ್ಟಣದಲ್ಲಿ ದೇವಾಲಯಗಳಿಗೆ ಕೊರತೆಯಿದ್ದಿಲ್ಲ. ಅದರಂತೆ ಮಹಾ ಮಹಿಮರೂ ಭಕ್ತರೂ ಅಲ್ಲಿ ಹೆಚ್ಚಿನಪ್ರಮಾಣದಲ್ಲಿ ವಾಸವಾಗಿದ್ದರು. ಶಿವಾನುಷ್ಠಾನಕ್ಕೆ ಅನುಕೂಲವಾಗುವಂಥ ಮಧುರ ವಾತಾವರಣವೂ ಅಲ್ಲಿದ್ದಿತು.

ಈ ರೀತಿಯಾಗಿದ್ದ ಆ ನಗರದಲ್ಲಿ ದೃಢಕಾಯದ ಲಾವಣ್ಯವತಿಯೂ, ವಿದ್ಯಾ ಸಂಪನ್ನಳೂ, ಶಿವಗಣಗಳ ಭಾವಚಿತ್ರವನ್ನು ಚಿತ್ರಿಸುವ ಕಲಾಕುಶಲತೆ ಪಡೆದವಳೂ, ಹಾಗು ಶಿವನಲ್ಲಿ ಅತ್ಯಂತ ನಿಷ್ಠೆಯನ್ನಿರಿಸಿದವಳೂ ಆದ ಕಾರಿಕಾಲಾಂಬೆ ಎಂಬ ನಾರೀಮಣಿಯು ವಾಸಿಸುತ್ತಿದ್ದಳು.

ಸದಾ ಶಿವಧ್ಯಾನದಲ್ಲಿಯೇ ಆಸಕ್ತಳಾದ ಈಕೆಯು ಯಾವಾಗಲೂ ವರಶಿವಾಕ್ಷರಗಳನ್ನೇ ಬರೆಯುತ್ತಿದ್ದಳು. ವಿಭೂತಿ, ರುದ್ರಾಕ್ಷ, ಗುರು, ಲಿಂಗ, ಜಂಗಮ, ಮಂತ್ರ ಪಾದೋದಕ, ಹಾಗು ಪ್ರಸಾದಗಳೆಂಬ ಅಷ್ಟಾವರಣಗಳಲ್ಲಿ ಆ ಶಿವಶರಣೆಯು ಇರಿಸಿದ ನಿಷ್ಠೆಯು ಹೊಗಳುವಂತಹದಿದ್ದಿತು. ಗುರುಜಂಗಮರು ಹೊದಿಸುವ ಹೊದಿಕೆ ಹಾಗು ಶಿವಪ್ರಸಾದಗಳೇ ಮುಂತಾದ ಶಿವ ಸಂಪತ್ತನ್ನು ದಾಟುತ್ತಿರಲಿಲ್ಲ.

ಶಿವ ನಿರ್ಮಾಲ್ಯವನ್ನು ದಾಟಿದ ತಪ್ಪಿಗಾಗಿ ತನ್ನಲ್ಲಿಯ ಶಕ್ತಿಯನ್ನು ಕಳೆದುಕೊಂಡು ಭಕ್ತಿಪೂರ್ವಕವಾಗಿ ಅತ್ಯುತ್ಕೃಷ್ಟವಾದ ಮಹಾದೇವನ ಪದ್ಯಗಳನ್ನು ರಚಿಸಿ, ಮತ್ತೆ ಮೊದಲಿನ ಶಕ್ತಿಯನ್ನು ಪಡೆದುಕೊಂಡಂಥ ಮಹಾ ಶಿವಭಕ್ತನಾದ ಪುಷ್ಪದಂತನ ಮಹಿಮಾ ಸ್ತೋತ್ರವನ್ನು ಈ ಶಿವ ಶರಣೆಯು ಅನವರತವೂ ಪಠಿಸುತ್ತಿದ್ದಳು. ಅಲ್ಲದೆ ಮನೆಗೆ ಅತಿಥಿಗಳಾಗಿ ಬಂದ ಶಿವಭಕ್ತರಿಗೆ ಆದರದಿಂದ ಸತ್ಕರಿಸಿ ತನಗುಂಟಾದ ಆನಂದವನ್ನೂ ಶಿವನಿಗೇ ಅರ್ಪಿಸಿ ಕಾಲಕಳೆಯುತ್ತಿದ್ದಳು.

ಹೀಗಿರಲೊಂದು ದಿನ ಭಕ್ತವತ್ಸಲನಾದ ಸದಾಶಿವನು ಜಂಗಮನ

ರೂಪದಿಂದ ಕಾರಿಕಾಲಾಂಬೆಯ ಮನೆಗೆ ಬಂದನು. ವಾಡಿಕೆಯಂತೆ ಕಾರಿಕಾಲಾಂಬೆಯು ಜಂಗಮರೂಪೀ ಶಿವನನ್ನು ಸತ್ಕರಿಸತೊಡಗಿದಳು. ಆಗ ಶಿವನು, "ಶರಣೆಯೇ! ಇನ್ನೇನೂ ಬೇಡ. ನಿನ್ನೆಯ ದಿನ ನಿನ್ನ ಪತಿಯು ತಂದಿರುವಂಥ ಎರಡೂ ಆಮ್ರಫಲಗಳನ್ನು ಕೊಟ್ಟುಬಿಡು" ಎಂದು ಕೇಳಿದನು.

ಜಂಗಮನ ಬೇಡಿಕೆಯನ್ನು ಕಂಡು ಭಾವಜೀವಿಯಾದ ಆ ಶಿವಶರಣೆಗೆ ಅತ್ಯಂತ ಆನಂದವಾಯಿತು. ಕೂಡಲೆ ಅವಳು ಮಾವಿನ ಹಣ್ಣುಗಳನ್ನು ಜಂಗಮನಿಗರ್ಪಿಸಲು ಅವನು ಅವುಗಳನ್ನು ಸ್ವೀಕರಿಸಿ ಮನೆಯಿಂದ ಹೊರ ಹೊರಟನು.

ಇದೆಲ್ಲವನ್ನೂ ದೂರದಿಂದ ವೀಕ್ಷಿಸುತ್ತಿದ್ದ ಅವಳ ಪತಿಗೆ ಬಹಳ ಕೋಪ ಬಂದಿತು. ಆದರೂ ತನ್ನ ಕೋಪವನ್ನು ಹತ್ತಿಕ್ಕಿಕೊಂಡು ಆ ಇಡೀ ದಿವಸ ಸುಮ್ಮನಿದ್ದು ಮಾರನೆಯ ದಿನ ಅವಳಿಗೆ ತಾನು ತಂದು ಕೊಟ್ಟಿರುವ ಮಾವಿನ ಹಣ್ಣುಗಳನ್ನು ತೆಗೆದುಕೊಂಡು ಬರಲು ಆಜ್ಞಾಪಿಸಿದನು. ಪತಿದೇವನ ಆಜ್ಞೆಯಿಂದ ಕೊಂಚವೂ ವಿಚಲಳಾಗದೆ ಆ ಸಾಧ್ವಿಯು ಜಗನ್ನಿಯಾಮಕನನ್ನು ಮನದಲ್ಲಿಯೇ ನೆನೆದು ಕೋಣೆಯೊಳಕ್ಕೆ ಹೋದಳು. ಮೊದಲದಿನ ತಾನಿರಿಸಿದ ಸ್ಥಾನದಲ್ಲಿಯೇ ಎರಡು ಹಣ್ಣುಗಳಿರುವದನ್ನು ಕಂಡು ಅವಳಿಗೆ ಅತೀವ ಆನಂದವಾಯಿತು. ಕೂಡಲೇ ಅವಳು ಅವುಗಳನ್ನು ಎತ್ತಿಕೊಂಡು ಹೋಗಿ ತನ್ನ ಪತಿಯೆದುರು ಇರಿಸಿದಳು. ಆ ಹಣ್ಣುಗಳನ್ನು ಕಂಡು ಅವನಿಗೆ ದಿಕ್ಕೇ ತೋಚದಂತಾಯಿತು. ಇಷ್ಟೇ ಅಲ್ಲ, ಆ ಸಾಧ್ವಿಯಲ್ಲಿಯ ಈಶ್ವರಭಕ್ತಿಯನ್ನು ಮೆಚ್ಚಿ ತನ್ನನ್ನು ಕ್ಷಮಿಸಬೇಕೆಂಬುದಾಗಿ ಅವಳಿಗೆ ಕಳಕಳಿಯಿಂದ ಕೇಳಿಕೊಂಡನು.

ತನ್ನ ಸ್ಥಿತಿಯು ಈ ರೀತಿಯಾಗಿ ಪ್ರಕಟವಾದುದನ್ನು ಕಂಡು ಆ ಸಾಧ್ವಿಗೆ ತಡೆಯದಂತಾಯಿತು. ತನಗೆ ಸಂಸಾರವೇ ಸಾಕೆಂದು ಸರ್ವವನ್ನೂ ಪರಿತ್ಯಾಗ ಮಾಡಿ ಮನೆಯಿಂದ ಹೊರಟಳು. ಇದನ್ನೆಲ್ಲ ಕಂಡು ಅವಳ ಪತಿಗೆ ಬಹಳ ದುಃಖವಾಯಿತು. ಹೇಗಾದರೂ ಮಾಡಿ ಇವಳನ್ನು ತಡೆಯಬೇಕೆಂದು ಯೋಚಿಸಿ ಹೋಗಬೇಡವೆಂದು ನಾನಾವಿಧವಾಗಿ ಪ್ರಾರ್ಥಿಸಿದನು. ಆದರೂ ಆ ಸಾಧ್ವಿಯು ಪತಿಯ ಮಾತಿನೆಡೆಗೆ ಲಕ್ಷ

ವೀಯದೆ ತನಗೆ ಈ ಸಂಸಾರವೇ ಸಾಕೆಂದು ಹೇಳಿದಳು.

ಅವಳನ್ನು ನಿಲ್ಲಿಸುವದು ತನ್ನಿಂದ ಅಸಾಧ್ಯವಾಗಲು ಅವನು ತನ್ನ ಬಂಧು-ಬಳಗದವರನ್ನು ಹಾಗು ಮಿತ್ರವರ್ಗದವರನ್ನು ಕರೆತಂದು ಅವಳ ಪ್ರಯಾಣವನ್ನು ನಿಲ್ಲಿಸಬೇಕೆಂದು ಕೇಳಿಕೊಂಡನು ಅವಳು ಸರ್ವಸಂಗ ಪರಿತ್ಯಾಗ ಮಾಡುವದು ಯಾರಿಗೂ ಬೇಕಾಗಿರಲಿಲ್ಲ. ಅಂತಹ ಒಬ್ಬ ಶಿವ ಭಕ್ತೆಯು ತಮ್ಮ ಬಳಿ ಸದಾ ಇರಬೇಕೆಂಬ ಹಂಬಲ ಉಳ್ಳ ಅವರು ಕಾರಿ-ಕಾಲಾಂಬೆಗೆ ನಾನಾವಿಧವಾಗಿ ಹೇಳಿಕೊಂಡರು. ಕಣ್ಣೀರುಕರೆದರು. ಆದರೂ ಆವಳ ಮನವು ತಿರುಗಲಿಲ್ಲ. ತನ್ನ ಮನಸ್ಸಿನೊಳಗಿದ್ದುದನ್ನೇ ಮಾಡಿದಳು.

ಈ ರೀತಿಯಾಗಿ ಅವಳು ತನ್ನ ಪತಿ, ಬಂಧು-ಬಳಗ ಹಾಗು ಮಿತ್ರ ಪರಿವಾರದ ಮಾತನ್ನು ಧಿಕ್ಕರಿಸಿ ಮನೆಯಿಂದ ಹೊರಟು ತಿರುವಾಲಂಗಾ ಪುರವನ್ನು ಪ್ರವೇಶಿಸಿ ಅಲ್ಲಿಯ ಶಿವಾಲಯವೊಂದರೊಳಗೆ ಹೋಗಿ ಅಲ್ಲಿನ ಲಿಂಗ ಮೂರ್ತಿಯನ್ನು ನಯ, ವಿನಯ, ನಲುಮೆಗಳಿಂದ ಪೂಜಿಸಿ, ಬಾರಿ ಬಾರಿಗೂ ಸ್ತುತಿಸುತ್ತಿರಲು ಸದಾಶಿವನು ತನ್ನ ನಿಜ ರೂಪವನ್ನು ತೋರಿಸಿ ಅವಳ ಮೈದಡವಿ ಭದ್ರವಾದ ಶರೀರವನ್ನು ಅನುಗ್ರಹಿಸಿ ಜೊತೆಗೆ ಎರಡು ತಾಳಗಳನ್ನೂ ಇತ್ತು ಕೈಲಾಸಕ್ಕೆ ಹೋಗಲು ಹೇಳಿದನು.

ವಿವೇಕದ ಪ್ರತೀಕಳಂತಿದ್ದ ಆ ಸದಾಚಾರೆಯು ಶಿವಶರಣರು ನಡೆ-ಯುವಂಥ ಉತ್ಕೃಷ್ಟವಾದ ಕೈಲಾಸಮಾರ್ಗದಲ್ಲಿ ಪಾದಗಳನ್ನೂರಿ ನಡೆ ಯುತ್ತ ಹೋಗುವದು ಉಚಿತವಲ್ಲವೆಂದು ಭಾವಿಸಿ, ಇಡಿಯ ಜಗತ್ತೇ ಬೆರಳು ಕಚ್ಚುವಂಥ ತಾಳಗಳನ್ನು ಬಾರಿಸುತ್ತ ತಲೆಯಿಂದ **ನಡೆಯುತ್ತ** ಶಿವಲೋಕಕ್ಕೆ ಹೋಗಿ ಗಣಪದವಿಯನ್ನು ಪಡೆದಳು.

ನೇರೀತಹ ಶರಣ ಸಂಚಾರ ಮಾರ್ಗದೊಳು ಸುವಿ ।
ಚಾರ ದಿಂದಡಿಯ ನಿಡದೆ ತಲೆಯೊಳು ನಡೆದ ।
ಕಾರಿಕಾಲಮ್ಮ ಪೊರೆಯೆನ್ನ ॥

—ಶ್ರೀ. ನಿಜಗುಣ ಶಿವಯೋಗಿಗಳು.

# ೬. ನರಸಿಂಗ ಮೊನೆಯರು

ಶಿವಭಾವನಾಯುತನೂ, ಜಂಗಮರಲ್ಲಿ ಅತ್ಯಂತ ಭಕ್ತಿಯುಳ್ಳವನೂ ಆದ ನರಸಿಂಗ ಮೊನೆಯನೆಂಬ ಭೂಪತಿಯು ದಕ್ಷಿಣ ಭಾರತದಲ್ಲಿ ಅತಿ ಪ್ರಸಿದ್ಧವಾದ ತಿರುವಾಲೂರೆಂಬ ಪಟ್ಟಣದಲ್ಲಿ ರಾಜ್ಯಭಾರವನ್ನು ನಡೆಯಿಸುತ್ತಿದ್ದನು. ಅತ್ಯಂತ ಸುಸ್ವಭಾವಿಯಾದ ಆ ಅರಸನ ರಾಜ್ಯದಲ್ಲಿ ಸುಖ ಶಾಂತಿಗಳು ಎಲ್ಲೆಡೆಗೂ ನೆಲೆಗೊಂಡಿದ್ದವು. ಪ್ರಜೆಗಳು ಯಾವುದೇ ತರಹದ ಚಿಂತೆಯಿಲ್ಲದೆ ನೆಮ್ಮದಿಯಿಂದ ಕಾಲಕಳೆಯುತ್ತಿದ್ದರು. ಪ್ರಜೆಗಳನ್ನು ಸಂತಸದಿಂದಿರಿಸಲು ಬೇಕಾಗುವ ಎಲ್ಲ ವ್ಯವಸ್ಥೆಗಳೂ ಅವನ ರಾಜ್ಯದಲ್ಲಿದ್ದವು.

ಅವನ ರಾಜ್ಯದಲ್ಲಿ ವೈರಿಗಳನ್ನು ಕ್ಷಮಿಸಿಬಿಡುವ ಪರಿಪಾಠವಿರಲಿಲ್ಲ. ಅಂಥವರನ್ನು ಕರುಣೆಯಿಲ್ಲದೆ ಶಿಕ್ಷಿಸಲಾಗುತ್ತಿತ್ತು. ಅಂದರೆ ಮಾನವನ ನಿಜವೈರಿಯಾದ ಆಲಸ್ಯವೆಂಬ ದುರ್ಗುಣದಿಂದ ತೊಳಲುವವರನ್ನು ಆ ಭೂಪತಿಯು ತನ್ನ ಒಡ್ಡೋಲಗಕ್ಕೆ ಕರೆಯಿಸಿಕೊಂಡು ಅವರಿಗೆ ಚನ್ನಾಗಿ ಬೋಧಿಸಿ ಅವರವರಿಗೆ ತಕ್ಕಂಥ ಕಾರ್ಯಗಳಲ್ಲಿ ತೊಡಗಿಸಿ ಕಾರ್ಯನಿರತರನ್ನಾಗಿ ಮಾಡುತ್ತಿದ್ದನು.

ಕಳ್ಳಕಾಕರು ಹಾಗೂ ಜಾರ ಪುರುಷರಿಗಂತೂ ಅವನ ರಾಜ್ಯದಲ್ಲಿ ಕ್ಷಮೆಯೇ ಇರಲಿಲ್ಲ. ಅಂಥವರನ್ನು ಅತ್ಯುಗ್ರ ಶಿಕ್ಷೆಗೆ ಗುರಿಪಡಿಸಲಾಗುತ್ತಿತ್ತು. ಶರೀರಬಲವನ್ನು ಹೆಚ್ಚಿಸಿಕೊಂಡು ಎಲ್ಲರೂ ಸದೃಢರೂ, ನಿರೋಗಿಗಳೂ ಆಗಿರಬೇಕೆಂಬ ಉದ್ದೇಶದಿಂದ ಸಾಕಷ್ಟು ವ್ಯಾಯಾಮ ಶಾಲೆಗಳ ವ್ಯವಸ್ಥೆಯನ್ನು ಮಾಡಿಸಿದ್ದನು. ಅಲ್ಲಿಯವರ ಆರೋಗ್ಯವನ್ನು ಈಕ್ಷಿಸಿದರೆ ವ್ಯಾಯಾಮ ಶಾಲೆಯವರ ಕರ್ತವ್ಯದಕ್ಷತೆಯು ಗೊತ್ತಾಗುತ್ತಿತ್ತು.

ರೈತರ ಸುಖ–ದುಃಖಗಳ ಕಡೆಗೂ ಅವನು ವಿಶೇಷ ಲಕ್ಷ ವಹಿಸುತ್ತಿದ್ದನು. ಒಕ್ಕಲತನಕ್ಕೆ ಬೇಕಾಗುವ ಸಕಲ ಸಲಕರಣೆಗಳು ಯಾವಾಗಲೂ ಸರಿಯಾದ ಹಾಗು ಸುಲಭ ಬೆಲೆಗೆ ದೊರೆಯುವ ವ್ಯವಸ್ಥೆ ಮಾಡಿಸಿದ್ದನು.

ಕೈಗಾರಿಕೆಯವರನ್ನು ಕೂಡ ಕಡೆಗಾಣಿಸದೆ ಅವರಿಗೆ ಪ್ರೋತ್ಸಾಹವೀಯು ತ್ತಿದ್ದನು. ಇಷ್ಟಾದರೂ ಪ್ರಜೆಗಳಿಗೆ ಭಾಸವಾಗದಷ್ಟು ಅವರಿಂದ ಕರ—ಕಂದಾಯಗಳನ್ನು ಪಡೆಯುತ್ತಿದ್ದನು.

ಇಷ್ಟೇ ಅಲ್ಲದೆ ಅವನ ರಾಜ್ಯದಲ್ಲಿ ಸರಸ್ವತಿಯು ಕೂಡ ಕಾಲು ಮುರಿದುಕೊಂಡು ಬಿದ್ದಿದ್ದಳು. ಎಲ್ಲ ಕಡೆಗೂ ಪಾಠಶಾಲೆಗಳ ಏರ್ಪಾಡ ಲ್ಲದೆ ಮಹಿಳೆಯರಿಗೆ ಶಿಕ್ಷಣ ದೊರೆಯುವಂತೆಯೂ ಮಾಡಿದ್ದನು. ವಿವಿಧ ಕಲಾ ಕೇಂದ್ರಗಳಿಗೂ ಅವನ ಪ್ರೋತ್ಸಾಹನೆಯಿದ್ದಿತು. ವಿದ್ವಾಂಸರು, ಅಧ್ಯಾಪಕರುಗಳಿಗೆ ಮನ್ನಣೆಯಿತ್ತಂತೆ ಉಪಯುಕ್ತವಾದ ಗ್ರಂಥಭಾಂಡಾರ ಗಳನ್ನು ಕೂಡ ತೆರೆದಿದ್ದನು.

ಅಲ್ಲದೆ ಶಿವಶರಣರಿಗೆ ಧರ್ಮಜಿಜ್ಞಾಸುಗಳಿಗೆ ಕೂಡ ಉಪಯೋಗ ನಾಗುವಂತೆ ನಗರದ ಹೊರಗಿನ ಪಟಾಂಗಣವೊಂದರಲ್ಲಿ ಒಂದು ಭವ್ಯವಾದ ಕಟ್ಟಡವನ್ನು ನಿರ್ಮಿಸಿದ್ದನು. ಅಲ್ಲಿ ಎಲ್ಲ ಯೋಗಿಗಳು ಸೇರಿಕೊಂಡು ತಮ್ಮಲ್ಲಿಯ ವಿದ್ಯೆಯ ಪ್ರಯೋಜನವನ್ನು ಮಾಡಿಕೊಳ್ಳುವಂತೆ ಸಮ್ಯಕ್ ಜ್ಞಾನವನ್ನು ಪಡೆದುಕೊಳ್ಳಲೂ ಸೌಕರ್ಯವಿದ್ದಿತು. ಅಲ್ಲಿಯ ಮಠಾಧಿ ಪತಿಗಳು ಭಕ್ತಿ—ಜ್ಞಾನಗಳಿಂದ ತುಂಬಿದವರಾಗಿ, ತಮ್ಮಲ್ಲಿಯ ನೈಸರ್ಗಿ ಕವಾದ ವೈರಾಗ್ಯಕಾಂತಿಯಿಂದ ಮೆರೆಯುತ್ತಿದ್ದರು ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಪ್ರತಿಯೊಬ್ಬರೂ ತಮ್ಮ ಅರಸನನ್ನು ಹಾಡಿ ಹರಸು ವವರೇ ಆಗಿದ್ದರು.

ಈ ಅರಸನಿಗೆ ಉತ್ತುಂಗ ಚೋಳನೆಂಬ ಹೆಸರೂ ಇದ್ದಿತು. ಈತನು ತನ್ನ ಪ್ರಜಾಕೋಟಿಗೆ ಇಷ್ಟೆಲ್ಲ ಅನುಕೂಲಗಳನ್ನು ಮಾಡಿಕೊಟ್ಟಂತೆ ತಾನು ಕೂಡ ಅಷ್ಟೇ ಸುಶೀಲನೂ, ದಯಾವಂತನೂ, ಗುರು-ಲಿಂಗ-ಜಂಗಮ ರಲ್ಲಿ ಭಯಭಕ್ತಿಯುಳ್ಳವನೂ ಆಗಿದ್ದನು. ಜಂಗಮರಿಗೆ ದಾನ ಕೊಡುವ ದರಲ್ಲಿ ಇವನದು ಎತ್ತಿದ ಕೈ ಆಗಿದ್ದಿತು. ಹೀಗಿರಲು ಅವನ ಕೀರ್ತಿಯು ಕೈಲಾಸದವರೆಗೂ ಹೋಯಿತು. ಉತ್ತುಂಗ ಚೋಳನ ಕೀರ್ತಿಯನ್ನು ಕೇಳಿ ಪಾರ್ವತೀರಮಣನಿಗೆ ಅಚ್ಚರಿಯ ಜೊತೆಗೆ ಆನಂದವೂ ಆಯಿತು.

ಕೂಡಲೇ ಪರಶಿವನು ಜಂಗಮ ವೇಷವನ್ನು ಧರಿಸಿ ಕೈಯೊಳ ಗೊಂದು ವೀಣೆಯನ್ನು ಹಿಡಿದುಕೊಂಡು ಶಿವಸ್ತೋತ್ರವನ್ನು ಪಠಿಸುತ್ತ,

ಕೇಳುವವರ ಎದೆಗಳು ತುಂಬಿಬರುವಂತೆ ವೀಣೆಯನ್ನು ಮೀಟುತ್ತ ಅರಸನ ಓಡ್ಡೋಲಗವನ್ನು ಪ್ರವೇಶಿಸಿದನು. ತನ್ನಲ್ಲಿಗೆ ಆಗಮಿಸಿದ ಜಂಗಮರೂಪಿ ಶಂಕರನನ್ನು ಅರಸನು ಬಹು ಆದರದಿಂದ ಸತ್ಕರಿಸಿ ರತ್ನಖಚಿತವಾದ ಸಿಂಹಾಸನದ ಮೇಲೆ ಕುಳ್ಳಿರಿಸಿದನು.

ಅರಸನಿಂದ ಆದರಾತಿಥ್ಯವನ್ನು ಹೊಂದಿದ ನಂತರ ಜಂಗಮನು ಅರಸನನ್ನು ಕುರಿತು, "ಹೇ ಭುವನಿಪಾಲನೇ! ನಾನೊಂದು ವ್ರತವನ್ನು ಕೈಕೊಂಡಿದ್ದು ಅದು ಪೂರ್ಣವಾಗಬೇಕಾದರೆ ಕಂಟಲಿಗಟ್ಟಲೆ ಹೊನ್ನು ಬೇಕಾಗುತ್ತದೆ. ಅದಕ್ಕಾಗಿ ನೀನು ಅಷ್ಟು ಹೊನ್ನನ್ನು ಇತ್ತು ನನ್ನ ವ್ರತವನ್ನು ಪೂರ್ಣಮಾಡಿಕೊಡಬೇಕು" ಎಂದನು.

ಆಗ ಅರಸನು ಏನೊಂದೂ ವಿಚಾರ ಮಾಡದೆ ಜಂಗಮನು ಬೇಡಿದಷ್ಟು ಬಂಗಾರವನ್ನು ಅವನೆದುರು ತಂದಿರಿಸಿದನು, ಆರಸನ ಭಕ್ತಿಗೆ ಮೆಚ್ಚಿದ ಜಂಗಮರೂಪಿ ಶಂಕರನು ಅತ್ಯಂತ ಹರ್ಷಿತನಾಗಿ ತನ್ನ ನಿಜರೂಪವನ್ನು ತೋರಿ, ಅವನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ಅನುಗ್ರಹಿಸಿದನು.

ಮನಸಿ ಜಾರಿಯು ಭಕ್ತನೆನಿತು ।
ಧನಮುಂ ಬೇಡ ।
ಲನಿತುಂ ಕೊಟ್ಟ ಕಡುಚಾಗಿ ನರಸಿಂಗ ।
ಮೊನೆಯಾಂಡ ಶಾಂತ ವಿರಿಸೆನ್ನ ॥

—ಶ್ರೀ ನಿಜಗುಣ ಶಿವಯೋಗಿಗಳು

# ೭. ಕಡವೂರ ಕಾರಿಯು

ಬಹು ಪ್ರಾಚೀನ ಕಾಲದ ಮಾತು. ಆಗ ಕಡವೂರು ಎಂಬ ಗ್ರಾಮ ದೊಳಗೆ ಓರ್ವ ಶಿವಭಕ್ತನು ವಾಸಿಸುತ್ತಿದ್ದನು. ಆತನು ಕಟ್ಟಾ ಶಿವಭಕ್ತ ನಾಗಿದ್ದು, ಗುರು–ಜಂಗಮರಲ್ಲಿ, ದೇವತೆಗಳಲ್ಲಿ ಅತ್ಯಂತ ಭಕ್ತಿವುಳ್ಳವನಾಗಿ ದ್ದನು. ತನ್ನ ನಿತ್ಯಕರ್ಮಗಳ ಜೊತೆಗೆ ಅವನು ಶಿವಸತ್ಕ್ರಿಯೆಗಳನ್ನೂ ಆಚರಿಸುತ್ತ ಶಿವಾಚಾರ ಸಂಪನ್ನನಾಗಿದ್ದನು.

ಈ ರೀತಿಯಾಗಿ ತನ್ನಲ್ಲಿಯ ಕಾಯಕದಿಂದ ಅಪಾರ ಪುಣ್ಯವನ್ನು ಆ ಶಿವಭಕ್ತನು ಗಳಿಸುತ್ತಿರಲು ಅವನ ಒಲವು ಹಾಸ್ಯರಸದ ಕಡೆಗೆ ಹೊರ ಳಿತು. ಕೂಡಲೆ ಅವನು ಆ ಕಲೆಯನ್ನೂ ತನ್ನ ಅಳವಡಿಸಿಕೊಂಡು ಅದ ರಲ್ಲಿಯೂ ಅಪಾರವಾದ ಭಕ್ತಿಯುತವಾದ ಪಾಂಡಿತ್ಯವನ್ನು ಪಡೆದನು. ಶಂಕರನ ಕೈಲಾಸ ಮಂದಿರದಲ್ಲಿ ಭೃಂಗಿಯು ಅಲ್ಲಿಯುವರನ್ನು ಹಾಸ್ಯರಸ ದಲ್ಲಿ ಮುಳಿಗೇಳಿಸಿ ಅವರನ್ನು ನಗಿಸಿ ಅದರಿಂದಾಗುವ ಆನಂದವನ್ನು ಶಿವಾರ್ಪಣೆ ಮಾಡುವಂತೆ ಈ ಶಿವಭಕ್ತನೂ ಮಾಡತೊಡಗಿದ್ದನು.

ವಿಚಿತ್ರ ರೀತಿಯ ಹಾಸ್ಯದಿಂದ ತನಗಾದ ಆನಂದವನ್ನು ಶಿವಾರ್ಪಣ ಮಾಡುತ್ತ ಆನಂದದಲ್ಲಿ ಕಾಲಕಳೆಯುತ್ತಿರಲು ಈ ಸಂಗತಿಯು ಶಿವನ ಕಿವಿಗೂ ತಲುಪಿತು. ಅದನ್ನಾತನು ಜಗನ್ಮಾತೆಯಾದ ಗಿರಿಜಾ ದೇವಿಗೂ ಉಸುರಲು ಮಾತೆಯು ಅವನ ಪರೀಕ್ಷೆಯನ್ನು ಮಾಡೋಣ ವೆಂದಳು. ಆ ಮಾತಿಗೆ ಮೃತ್ಯುಂಜಯನು ಒಪ್ಪಿಕೊಂಡನು.

ಒಂದು ದಿನ ಹಾಸ್ಯಕಲೆಯಲ್ಲಿ ಪಾರಂಗತನಾದ ಈ ಶಿವಭಕ್ತನು ಪ್ರಾಶಸ್ತವಾದುದೊಂದು ಸ್ಥಾನದಲ್ಲಿ ರುದ್ರಾಕ್ಷಿಯ ಮಾಲೆಗಳನ್ನು ಧರಿಸಿ, ಭಸ್ಮದೂಳಿಯಿಂದ ಆವೃತನಾಗಿ ಶಿವಧ್ಯಾನದಲ್ಲಿ ಕುಳಿತುಕೊಂಡಿದ್ದನು. ಆಗ ಶಂಕರನು ಜಗನ್ಮಾತೆಯೊಂದಿಗೆ ಜಂಗಮ ಡಂಪತಿಗಳ ವೇಷದೊಂದಿಗೆ ಅಲ್ಲಿಗೆ ಬಂದು ಅವನ ಎದುರಿಗೆ ಕುಳಿತುಕೊಂಡರು.

ತನ್ನೆದುರಿಗೆ ಕುಳಿತುಕೊಂಡಿದ್ದ ಜಂಗಮ ದಂಪತಿಗಳನ್ನು ಕಂಡು

ಆ ಶಿವಭಕ್ತನು ತನ್ನಲ್ಲಿಯ ಕಲಾಪ್ರೌಢಿಮೆಯಿಂದ ಅವರನ್ನು ನಗಿಸಲು ಪ್ರಯತ್ನಿಸಿದನು. ತನ್ನ ಶಕ್ತಿಮೀರಿ ಕಲೆಯನ್ನು ವ್ಯಕ್ತಪಡಿಸಿದರೂ ಆ ದಂಪತಿಗಳು ನಗದೆ ಸುಮ್ಮನೆ ಕುಳಿತಿರುವದನ್ನು ಕಂಡು ಈತನಿಗೆ ಯೋಚನೆಗಿಟ್ಟುಕೊಂಡಿತು. ತನ್ನ ಸಮುಖದಲ್ಲಿ ಕುಳಿತು ನಗದಂಥವರು ಯಾರೂ ಇರಲಿಲ್ಲ. ಅಂದಮೇಲೆ ಈಗ ಬಂದಿರುವಂಥ ಅತಿಥಿಗಳು ಸಾಮಾನ್ಯವಾಗಿರಲಾರರು. ಎಂದು ಮನದೊಳಗೆ ಅಂದುಕೊಂಡನು.

ಇಷ್ಟೇ ಅಲ್ಲ. ಈ ನೂತನ ಅತಿಥಿಗಳು ಇನ್ನಾರೂ ಆಗಿರದೆ ಸಾಕ್ಷಾತ್ ಪಾರ್ವತಿ ಪರಮೇಶ್ವರರೇ ಆಗಿದ್ದಾರೆಂದೂ ಅರಿತುಕೊಂಡನು. ಆಗ ಅವನು ಮನದಲ್ಲಿಯೇ ಅರ್ಧನಾರೀಶ್ವರನನ್ನು ಏಕಚಿತ್ತನೆನೆದನು. ಅನಂತರ ಇವರ ಪರೀಕ್ಷೆ ತಾನು ಮಾಡಬೇಕೆಂದು ನಿರ್ಧರಿಸಿ ಎದುರಿಗೆ ಕುಳಿತ ಜಂಗಮರೂಪೀ ಶಂಕರನನ್ನುದ್ದೇಶಿಸಿ— "ಜಂಗಮ ಶ್ರೇಷ್ಠರೇ! ತಮ್ಮ ಪಕ್ಕದಲ್ಲಿ ಕುಳಿತ ಮಹಿಳೆಯು ತಮಗೆ ಅಕ್ಕನಾಗಬೇಕೋ?" ಎಂದು ಪ್ರಶ್ನಿಸಿದನು.

ಅವನ ವಿಚಿತ್ರ ಪ್ರಶ್ನೆಯನ್ನು ಕೇಳಿ ಜಗಜ್ಜನನೀ ಜನಕರಾದ ಶಿವಪಾರ್ವತಿಯರು ಅವನೆದುರು ಅವನ ಭಕ್ತಿಯೆದುರು ಸೋತು ಹೋಗಿ ನಕ್ಕು ಬಿಟ್ಟರು. ಅಲ್ಲದೆ ಅವನು ನಿತ್ಯವೂ ಮಾಡುವ ಶಿವಾರ್ಪಣದ ಕಾಯಕವನ್ನು ಮೆಚ್ಚಿ ಅವನಿಗೆ ಅಮರವಾದ ಶಿವಗಣಪದವಿಯನ್ನು ಅನುಗ್ರಹಿಸಿದರು.

ಈ ಮಹಾಮಹಿಮನಿಂದ ಒಂದು ಮಾತು ವ್ಯಕ್ತವಾಗುವದೇನಂದರೆ,– "ನೀತಿಯನ್ನು ಬೋಧಿಸಲಿ, ಹಾಸ್ಯವನ್ನು ಮಾಡಲಿ, ಶಿವಪೂಜೆಯನ್ನು ಮಾಡಲಿ. ಆದರೆ ಅದರಿಂದಾಗುವ ಅಪರಿಮಿತಾನಂದವನ್ನು ಶಿವಾರ್ಪಣ ಮಾಡಿದರೆ ಶಿವಸಾನ್ನಿಧ್ಯವು ಕಟ್ಟಿಟ್ಟ ಬುತ್ತಿ" ಎಂಬುದು ಸಾರಿ ಸಾರಿ ಹೇಳಬಹುದು.

ಧಾರುಣಿಗೆ ಬರಿಸಿ ಮದನಾರಿಯನ್ನಗಿಸಿ ಮನ।
ವಾರೆ ಗಣಪದವನೊಳಕೊಂಡ ಕಡವೂರ।
ಕಾರಿ ಸಹಕಾರಿ ಯೆನಿಸೆನ್ನ॥

—ಶ್ರೀ ನಿಜಗುಣ ಶಿವಯೋಗಿಗಳು.

# ೮. ತಿರುನೀಲಕಂಠ ಪಾಣರು

ಗಾನಕಲಾವಿಶಾರದರೂ ಸತ್ಕೀರ್ತಿಯುಳ್ಳವರೂ, ಮಹಾ ಶಿವ ಭಕ್ತರೂ ಆದ ತಿರುನೀಲಕಂಠ ಪಾಣರು, ಸುಭಿಕ್ಷೆಯ ನಾಡೆಂದು ಹೆಸರು ವಾಸಿಯಾದ ಚೇರರಾಜ್ಯದ ತಿರುವಂಜಕಳ ಎಂಬ ನಗರದ ನಿವಾಸಿಗಳಾಗಿದ್ದರು. ಆ ನಗರವು ಶಿವಭಕ್ತರಿಂದ ತುಂಬಿದ ಭವನಗಳಿಂದೊಪ್ಪುವಂತೆ, ನಗರದ ಸುತ್ತುಮುತ್ತಲಿನ ತೋಟಗಳು, ವನಗಳು, ಪುಷ್ಪವಾಟಿಕೆಗಳು, ಕೆರೆ–ಪುಷ್ಕರಿಣಿಗಳೇ ಮೊದಲಾದ ಜಲಾಶಯಗಳು ಅಲ್ಲಿಯ ಸೌಂದರ್ಯವನ್ನು ಹೆಚ್ಚಿಸಿದ್ದವು. ಅಲ್ಲದೆ ಪ್ರಾಣಿಮಾತ್ರಗಳ ಜೀವನಾಧಾರಕ್ಕೆ ಬೇಕಾಗುವ ಎಲ್ಲ ಸಾಮಗ್ರಿಗಳನ್ನು ಒದಗಿಸುತ್ತಿದ್ದವು.

ತಿರುನೀಲಕಂಠ ಪಾಣರಲ್ಲಿಯ ಗಾನ ಪ್ರೌಢಿಮೆಯು ಅಸಾಧಾರಣವಾಗಿದ್ದಂತೆ ಅಪ್ಯಾಯಮಾನವೂ ಆಗಿತ್ತು. ಇವರು ವೀಣಾಪಾಣಿಯಾಗಿ ಹಾಡಲುಪಕ್ರಮಿಸಿದರೆಂದರೆ ಕೇಳುವವರು ಮೈಮರೆತು ಬಿಡುತ್ತಿದ್ದರು. ಗಾಯನಕಲೆಯಲ್ಲಿ ಅಷ್ಟೊಂದು ಸಾಧನೆಯನ್ನು ಪಡೆದಿದ್ದರು. ಈ ರೀತಿಯ ಮನೋಹರ ಹಾಡುಗಳಿಂದ ತಮಗುಂಟಾದ ಆನಂದವನ್ನು ಶಿವನಿಗರ್ಪಿಸುತ್ತ ಕಾಲಯಾಪನೆ ಮಾಡುತ್ತಿದ್ದರು.

ಕಲ್ಲನ್ನುಕೂಡ ಕರಗಿಸಬಲ್ಲ ಶಕ್ತಿಯು ಸಂಗೀತದಲ್ಲಿದೆಯೆಂದು ಹೇಳುವದು ಕೇವಲ ಕೇಳುವ ಮಾತಾಗದೆ ನಿಜಸಂಗತಿಯಾಗಿದೆ. ಆದರೆ ಹಾಡುವವನು ಮಾತ್ರ ಅಂತಹ ಸಾಧಕನೇ ಆಗಿರಬೇಕಾಗುತ್ತದೆ. ಇಂಪಾದ ಸಂಗೀತವನ್ನು ಕೇಳಿ ತಲೆ ತೂಗಿಸದ, ಅದನ್ನು ಪ್ರೀತಿಸದ ಮಾನವನನ್ನು ಕಾಣುವದು ದುರ್ಲಭವೆಂದೇ ಹೇಳಬೇಕು. ಕ್ರಿಮಿ-ಕೀಟಕ, ಪಶು–ಪಕ್ಷಿಗಳು ಕೂಡ ಸಂಗೀತದೆದುರು ಬಾಗುತ್ತವೆಂದಾಗ ಮನುಷ್ಯನ ಬಗೆಗೆ ಹೇಳುವದೇ ಬೇಡ.

ತಿರುನೀಲಕಂಠ ಪಾಣರ ಭಕ್ತಿರಸ ಪೂರ್ಣವಾದ ಸಂಗೀತವನ್ನು ಕೇಳಿ ಆನಂದಿಸಿ, ತಲೆತೂಗಿಸಿದವರಲ್ಲಿ, ಕರ್ತವ್ಯ ಬಾಹಿರರಾದಂಥವರು

ತಾವು ಮಾಡಿದ ಅಪರಾಧವನ್ನು ತಾವೇ ಒಪ್ಪಿಕೊಂಡು ಕಾರ್ಯತತ್ಪರರಾಗುತ್ತಿದ್ದರು. ಸಂಸಾರಿಗಳು ಹಾದಿ ಬಿಟ್ಟು ನಡೆಯದೆ ಗೃಹಸ್ಥ ನಿಯಮದಂತೆ ಚಾಚೂ ತಪ್ಪದೆ ನಡೆದುಕೊಳ್ಳುತ್ತಿದ್ದರು. ಶಿವಭಕ್ತರಾದ ಸಜ್ಜನರು, ಪರಮಪಾವನಮೂರ್ತಿಗಳಾದ ಪಾಣರನ್ನು ಒಳ್ಳೇ ಗೌರವದಿಂವ ಕಾಣುತ್ತಿದ್ದರು. ಅಲ್ಲದೆ ಅವರ ( ಪಾಣರ ) ಪ್ರತಿಭೆಯು ಎಲ್ಲ ಕಡೆಗೂ ಬೆಳೆಯುವದೆಂದು ಸಂತಸದಿಂದ ಉಬ್ಬಿ ಹೋಗುತ್ತಿದ್ದರು.

ಈ ರೀತಿಯಾಗಿ ದಿನಗಳುರುಳುತ್ತಿರಲೊಂದು ದಿನ ಭಕ್ತಶಿರೋಮಣಿಗಳಾದ ತಿರುನೀಲಕಂಠ ಪಾಣರು ಆ ನಗರದಲ್ಲಿಯ ತಿರುವಂಜಿ ಕಳಕೇಶ್ವರಾಲಯಕ್ಕೆ ಹೋಗಿ ಮಹಾದೇವನಾದ ಸಾಂಬ ಮೂರ್ತಿಯನ್ನು ತಮ್ಮಲ್ಲಿಯ ಗಾನಪ್ರೌಢಿಮೆಯಿಂದ ಸಂತಸಗೊಳಿಸುತ್ತಿರುವ ಸಮಯದಲ್ಲಿ ನಾಡಿನ ದೊರೆಯಾದ ಚಾರಮನು ಅಲ್ಲಿಗೆ ಬಂದು ಅವರ ವೀಣಾವಾದನಕ್ಕೆ ಮೆಚ್ಚಿ ಅವರಿಗೆ ರತ್ನಪೀಠವನ್ನು ಕೊಟ್ಟು ಹೋದನು. ಪಾಣರ ಈ ಕಾಯಕವು ಇದೇರೀತಿ ಅವ್ಯಾಹತವಾಗಿ ನಡೆಯಿತು.

ಸಂಗೀತದಲ್ಲಿಯೇ ಮೈಮರೆತು ತನ್ನಲ್ಲಿಯ ಅತುಲವಾದ ಭಕ್ತಿಯಿಂದ ಶಿವನನ್ನು ಮೆಚ್ಚಿಸುತ್ತಿರಲೊಂದು ದಿನ ಪಾಣರು ಆ ಶಿವಾಲಯದಲ್ಲಿ ಕುಳಿತುಕೊಂಡು ಶಿವಭಕ್ತಿಯ ರಸಾಯನವನ್ನು ವಿವಿಧ ರಾಗಗಳಿಂದ ಹಾಡುತ್ತ ಪರಮಾನಂದದಿಂದ ವೀಣೆಯನ್ನು ಮೀಟುತ್ತ ತನ್ನ ಕಾಯಕವನ್ನು ಮುಂದುವರಿಸುತ್ತಿರಲು ಶಿವಭಕ್ತಿಯು ಅತ್ಯಧಿಕವಾಗತೊಡಗಿತು. ಅತುಲವಾಗಿ ಪರಿಣಮಿಸತೊಡಗಿತು.

ಆಗ ದೇವದೇವನಾದ ಮಹಾದೇವನು ಮಂದಿರದೊಳಗಿಣ ಲಿಂಗಮೂರ್ತಿಯೊಳಗಿಂದ ಉದ್ಭವಿಸಿ ತನ್ನ ನಿಜ ರೂಪವನ್ನು ಅವರಿಗೆ ತೋರಿಸಿದನು. ತನ್ನೆದುರು ನಿಂತುಕೊಂಡಿರುವ ಸದಾಶಿವನನ್ನು ಕಂಡು ಪಾಣರು ಆನಂದಾಶ್ಚರ್ಯಗಳ ಅತಿರೇಕತೆಯಿಂದ ಅರೆಕ್ಷಣ ಮೂಕರಂತಾದರೂ ಮರುಕ್ಷಣವೇ ಅವನನ್ನು ನಾನಾವಿಧವಾಗಿ ಸ್ತುತಿಸತೊಡಗಿ, ಭಯ-ಭಕ್ತಿ ವಂದಿಸಿದರು.

ಜಗನ್ನಿಯಾಮಕನಾದ ಶಂಕರನು ತನ್ನ ಭಕ್ತನ ಭಕ್ತಿಗೆ ಮೆಚ್ಚಿ ಅವ

ರನ್ನು ಪುಷ್ಪಕ ವಿಮಾನದಲ್ಲಿ ಕುಳ್ಳಿರಿಸಿಕೊಂಡು ಕೈಲಾಸಕ್ಕೆ ಕರೆದೊಯ್ದು ಅವರಿಗೆ ಶಾಶ್ವತವಾದ ಗಣಪದವಿಯನ್ನು ಅನುಗ್ರಹಿಸಿದನು.

ಸರಸಮಯ ಗಾನದಿಂದುರುಗ ಕುಂಡಲನೊಪ್ಪ ।
ಶಿರೆ ಪಾಡಿ ಮೆರೆದ ತಿರುನೀಲಕಂಠ ಪಾ ।
ಣರು ನೆಲೆಸಲೆನ್ನ ಭಾವದೊಳು ॥

—ಶ್ರೀ. ನಿಜಗುಣ ಶಿವಯೋಗಿಗಳು.

# ೪. ಚಿರುಪುಲಿಯಾಂಡರು

ಕಣ್ಮನ ಮನಗಳಿಗೆ ಆನಂದವೀಯುವಂಥ ಮನೋಹರವಾದ ತೆಂಗು, ಮಾವು, ಬಾಳೆ, ಹಲಸು ಹಾಗು ದ್ರಾಕ್ಷೆ ಮುಂತಾದ ವನಗಳಿಂದಲೂ, ಭೂದೇವಿಯು ಹಸಿರು ಬಣ್ಣದ ಮೇಲ್‌ಹೊದಿಕೆಯನ್ನು ಹೊದ್ದುಕೊಂಡಿರುವಳೇನೋ ಎಂಬಂತೆ ಗೋಚರಿಸುವ ಹೊಲಗದ್ದೆಗಳಿಂದಲೂ ತುಂಬಿ ತುಳುಕುವ ಚೋಳ ರಾಜ್ಯವು ದಕ್ಷಿಣ ಭಾರತದಲ್ಲಿ ತಾನೇ ತಾನಾಗಿ ರಾರಾಜಿಸುತ್ತಿತ್ತು.

ಆ ರಾಜ್ಯದೊಳಗೆ ಅಗಣಿತ ಶಿವಭಕ್ತರಿಂದಲೂ, ಮನೋಲ್ಹಾದಗೈಯುವ ನೋಡಲತಿಸುಂದರವಾದ ವಿಶಾಲ ಪ್ರಾಸಾದಗಳಿಂದಲೂ, ಅನವರತವೂ ಸತ್ಕರ್ಮಗಳಲ್ಲಿಯೇ ನಿರತರಾದ ಸತ್‌ಶೀಲ ಜನತೆಯಿಂದಲೂ ಕೂಡಿದ ಚಿರುಪುತ್ತೂರು ಎಂಬ ನಗರವಿದ್ದಿತು. ಆ ನಗರದಲ್ಲಿ ಪಂಚಾಚಾರ ನಿರತನೂ, ಸದಾಚಾರಿಯೂ, ಸದ್ಭಕ್ತನೂ ಆದ ಪುಲಿಯಾಂಡನೆಂಬ ಶಿವಭಕ್ತನು ವಾಸಿಸುತ್ತಿದ್ದನು. ಆತನನ್ನು ಕಂಡರೆ ಸದ್ವರ್ತನೆಯೇ ವ್ಯೆವೆತ್ತು ಮಾನವನ ರೂಪತಾಳಿ ಬಂದಿದೆಯೇನೋ ಎಂದು ಯಾರಿಗಾದರೂ ಅನ್ನಿಸುತ್ತಿತ್ತು.

ತನ್ನಲ್ಲಿಯ ಸದಾಚಾರದಿಂದಲೂ, ಈಶಚಿಂತನೆಯಿಂದಲೂ, ಅವನು ಕಾಲಯಾಪನೆ ಮಾಡುತ್ತಿರಲೊಂದುಸಲ ಅವನ ಮನದಲ್ಲಿ ಗುರುವಿನ ಕರುಣೆಯಿಂದ ಅತ್ಯಂತ ಉಜ್ವಲವಾದ, ಮಹತ್ತರವಾದ, ಜಂಗಮ ಭಕ್ತಿಯು ಅಪರಿಮಿತವಾಗಿ ಅಂಕುರಿಸಿತು. ಆಗ ಅವನು ಜಂಗಮರಿಗೆ ಧನಕನಕ, ಅನ್ನ ವಸ್ತ್ರಾದಿಗಳನ್ನು ಕೊಟ್ಟು ತೃಪ್ತಿಪಡಿಸತೊಡಗಿದನು.

ಜನನ, ಗಮನ, ಮರಣರಹಿತನಾದವನೇ ಜಂಗಮನು. ಸಾಕ್ಷಾತ್ ಪರಮೇಶ್ವರನ ಪ್ರತಿರೂಪವೇ ಜಂಗಮನು, ಮುಕ್ತಿಪದವು ದೊರಕಲು ಕೈವಾರವಾದವನೇ ಜಂಗಮನು, ಮತ್ತೆ ಮತ್ತೆ ಹುಟ್ಟಿಬರುವ ತೊಂದರೆಗಳನ್ನು ನಿವಾರಿಸುವವನೇ ಜಂಗಮನು, ಎಂಬುವನ್ನವನು ಮನದಲ್ಲಿ

ಖಚಿತಪಡಿಸಿಕೊಂಡು ಭೂಮಂಡಲದೊಳಗಿನ ತೀರ್ಥಗಳೆಲ್ಲ ಜಂಗಮನ ಪಾದದಡಿಗಳಲ್ಲಿಯೆ ಅಡಗಿವೆ ಯೆಂದು ಭಾವಿಸಿಕೊಂಡನು. ಅಲ್ಲದೆ ಅಂಥ ಪುಣ್ಯ ಕ್ಷೇತ್ರಗಳೆಲ್ಲ ಜಂಗಮನಲ್ಲಿಯೆ ಬೆರೆತಿರುವೆಂದು ನಿರ್ಧರಿಸಿಕೊಂಡನು.

ಈ ರೀತಿಯಾಗಿ ನಿರ್ಧರಿಸಿದ ಅವನು ಪ್ರತಿ ದಿನವೂ ಜಂಗಮನನ್ನು ಕರೆತಂದು ಪೂಜಿಸಿ, ಉಪಚರಿಸಿ, ಪಾದೋದಕ ಪ್ರಸಾದಗಳನ್ನು ಸೇವಿಸಿ ಕೃತಾರ್ಥನಾಗುತ್ತಿದ್ದನು. ಈ ರೀತಿಯಾಗಿ ಅವನು ದಿನದಿನಕ್ಕೆ ಪುಣ್ಯದ ಖಣಿಯಾಗತೊಡಗಿದನು. ಆಗ ಮಹಾದೇವನ ಮನದಲ್ಲಿ ಇವನ ಭಕ್ತಿಯನ್ನು ಪರೀಕ್ಷಿಸಬೇಕೆಂಬ ಇಚ್ಛೆಯುತ್ಪನ್ನವಾಗಿ ಅವನಿಗೆ ಜಂಗಮರೇ ದೊರೆಯದಂತೆ ಮಾಡಿದನು.

ತನ್ನ ನಿತ್ಯದ ಕಾಯಕಕ್ಕೆ ಜಂಗಮರು ದೊರೆಯದಂತಾಗಲು ಆ ಭಕ್ತ ವರೇಣ್ಯನು ನಾನಾ ವಿಧವಾಗಿ ಚಿಂತಿಸಿದನು. ಎಲ್ಲ ಕಡೆಗೂ ಅಲೆದಾಡಿದನು. ಒಬ್ಬ ಜಂಗಮನೂ ಸಿಗದೆ ಇರಬೇಕಾಹರೆ ತಾನೆಂಥ ಪಾಪಿ, ಎಂದು ತನಗೆ ತಾನೇ ಹಳಿದುಕೊಂಡನು. ಜಂಗಮ ಪೂಜೆಯಿಲ್ಲದೆ ಪ್ರಸಾದವನ್ನು ಸ್ವೀಕರಿಸುವದು ಅವನ ಕಾರ್ಯಕ್ಕೆ ವಿರೋಧವಾಗಿತ್ತು. ಈ ರೀತಿಯಾಗಿ ಆ ಭಕ್ತಶಿರೋಮಣಿಯು ಅನ್ನ-ನೀರುಗಳಿಲ್ಲದೆ ಮೂವತ್ತೆಂಟು ದಿನಗಳವರೆಗೆ ಜಂಗಮರಿಗಾಗಿ ಕಾಯ್ದನು.

ಅಷ್ಟೊಂದು ದಿನಗಳವರೆಗೆ ಕಾಯ್ದರೂ ಯಾವನೊಬ್ಬ ಜಂಗಮನು ಅವನತ್ತ ಸುಳಿಯದಿರಲು ತನ್ನ ಜನ್ಮಕ್ಕೆ ಹಳಿದುಕೊಂಡು ಓರ್ವ ಜಂಗ-ಮನು ನನಗೆ ಸಿಗದಿರುವಾಗ ಈ ಜನ್ಮವನ್ನು ಇರಿಸಿಕೊಂಡು ಮಾಡತಕ್ಕದ್ದಾದರೂ ಏನು? ಈಗಿಂದೀಗಲೇ ಈ ಪ್ರಾಣವನ್ನು ಕಳೆದುಕೊಂಡು ಬಿಡುತ್ತೇನೆ, ಎಂದು ಆತ್ಮಹತ್ಯವನ್ನು ಮಾಡಿಕೊಳ್ಳಲು ಉದ್ಯುಕ್ತನಾದನು.

ಆಗ ಜಗನ್ಮಾತೆಯಾದ ಭವಾನಿಯು 'ಭಕ್ತರನ್ನು ಇಷ್ಟೊಂದು ಪರೀಕ್ಷಿಸುವದು ತರವಲ್ಲವೆಂದು ಹೇಳಲು ಶಂಕರನಿಗೂ ಅವನಲ್ಲಿಯ ನಿಷ್ಠೆಯ ಬಗೆಗೆ ತುಂಬಾ ಸಂತೋಷವಾಯಿತು. ಆಗ ಅವನು ಜಂಗಮ ರೂಪವನ್ನು ಧರಿಸಿ ಭೂಲೋಕಕ್ಕೆ ಬಂದು ಆ ಶಿವಭಕ್ತನ ಮನೆಯೆದುರು ನಿಂತುಕೊಂಡನು.

ಬಾಗಿಲ ಬಳಿ ಜಂಗಮನನ್ನು ಕಂಡೊಡನೆ ಪುಲಿಯಾಂಡನಿಗೆ ಒಂದು

ದೊಡ್ಡ ನಿಧಿಯನ್ನೇ ಕಂಡಂತಾಯಿತು. ಸಾಕ್ಷಾತ್ ಪರಮಾತ್ಮನನ್ನೇ ಕಂಡಂತಾಯಿತು. ಹುಟ್ಟುಕುರುಡನಿಗೆ ಕಣ್ಣು ಬಂದಂತಾಯಿತು. ಕೂಡಲೆ ಅವನು ಜಂಗಮರೂಪೀ ಶಿವನನ್ನು ನಾನಾವಿಧವಾಗಿ ಸತ್ಕರಿಸಿ, ಪೂಜಿಸಿ ಪಾದೋದಕವನ್ನು ಸೇವಿಸಲು, ಭಕ್ತವತ್ಸಲನಾದ ಮಹಾದೇವನು ತನ್ನ ನಿಜರೂಪವನ್ನು ತೋರಿಸಿದನು.

ಆಗ ಪುಲಿಯಾಂಡನಿಗೆ ಅತ್ಯಂತ ಆನಂದವಾಗಿ ಶಂಕರನ ಪಾದಗಳ ಮೇಲೆ ಬಿದ್ದು ಹೊರಳಾಡತೊಡಗಿದನು. ಕರುಣಾನಿಧಿಯಾದ ಚಂದ್ರ ಮೌಳಿಯು ಅವನ ಮೈದಡವಿ, ಪುಷ್ಪಕ ವಿಮಾನದಲ್ಲಿ ಕೈಲಾಸಕ್ಕೆ ಕಳು ಹಿಸಿ ಗಣಪದವಿಯನ್ನಿತ್ತನು.

ಸಲೆ ಚರ ಪದಾಂಬುಜವ ನೊಲಿದು ಪೂಜಿಸಲು ಮಾ।
ಲಲನೇಶನೊಪ್ಪಿ ನಿಜಪದವನಿತ್ತ ಚಿರು ।
ಪುಲಿಯಾಂಡರೆನ್ನ ಸುಖದಾಗು ॥

—ಶ್ರೀ. ನಿಜಗುಣ ಶಿವಯೋಗಿಗಳು.

# ೧೦. ಸೋಮಾಸಿ ಮಾರರು

ಸುವಿಚಾರಿಯೂ, ಸದಾಶಿವಧ್ಯಾನನಿರತನೂ, ಆರೋಗ್ಯ ಸಂಪನ್ನನೂ ಆದ ಸೋಮಾಸಿಮಾರನೆಂಬ ಬ್ರಾಹ್ಮಣನು ತಿರುವಂಬರವೆಂಬ ಗ್ರಾಮದೊಳಗೆ ವಾಸಿಸುತ್ತಿದ್ದನು. ಸದಾಚಾರಿಗಳೂ, ಶಿವಭಕ್ತರೂ ಆದ ಬ್ರಾಹ್ಮಣ ದಂಪತಿಗಳ ಉದರದಲ್ಲಿ ಜನಿಸಿದ ಈತನು ಮಹಾಶಿವಭಕ್ತನೂ, ವಿಭೂತಿಯಲ್ಲಿ ಪರಮವಿಶ್ವಾಸವುಳ್ಳವನೂ ಆಗಿದ್ದನು.

ರುದ್ರಾಕ್ಷಗಳಲ್ಲಿ ಹಾಗು ಶರಣರಲ್ಲಿ ಈತನು ಚಿಕ್ಕಂದಿನಲ್ಲಿಯೇ ತೋರುವ ಆದರವನ್ನು ಕಂಡು ಬಂಧು-ಬಾಂಧವರು ಅಚ್ಚರಿಯಿಂದ ಬೆರಳು ಕಚ್ಚುತ್ತಿದ್ದರು. ಆತನ ತಂದೆಯು ಕೂಡ ಬಾಲ್ಯದಲ್ಲಿಯೇ ರುದ್ರಾಕ್ಷಿಗಳನ್ನು ಧರಿಸುವ ಕ್ರಮವನ್ನು ತಿಳಿಸಿಕೊಟ್ಟಿದ್ದನು. ಅಂದರೆ ರುದ್ರಾಕ್ಷಿಗಳನ್ನು ಧರಿಸುವ ವಿಧಾನವು ಈ ರೀತಿಯಾಗಿದೆ—

"ಒಂದು ಮುಖದ ರುದ್ರಾಕ್ಷಿಯೊಂದನ್ನು ಶಿಖೆಯಲ್ಲಿ, ಎರಡು, ಮೂರು ಮತ್ತು ಹನ್ನೆರಡು ಮುಖದ ಮೂರು ರುದ್ರಾಕ್ಷಿಗಳನ್ನು ಒಂದೊಂದರಂತೆ ಶಿರಸ್ಸಿನಲ್ಲಿ; ಹನ್ನೊಂದು ಮುಖದ ಮೂವತ್ತಾರು ರುದ್ರಾಕ್ಷಿಗಳನ್ನು ತಲೆಯ ಸುತ್ತ ಮುತ್ತು; ಹತ್ತು, ಏಳು ಹಾಗು ಐದು ಮುಖಗಳ ಎರಡೆರಡು ರುದ್ರಾಕ್ಷಿಗಳನ್ನು ಎರಡೂ ಕಿವಿಗಳಲ್ಲಿ; ಆರು ಹಾಗು ಎಂಟು ಮುಖದ ಹದಿನಾರು ರುದ್ರಾಕ್ಷಿಗಳನ್ನು ಕಂಠದಲ್ಲಿ; ನಾಲ್ಕು ಮುಖದ ಐವತ್ತು ರುದ್ರಾಕ್ಷಿಗಳನ್ನು ಹೃದಯದಲ್ಲಿ; ಹದಿಮೂರು ಮುಖದ ಹದಿನಾರು ರುದ್ರಾಕ್ಷಿಗಳನ್ನು ಎರಡೂ ಮುಂಗೈಗಳಲ್ಲಿ, ಹಾಗು ಹದಿನಾಲ್ಕು ಮುಖದ ಒಂದು ನೂರಾ ಎಂಟು ರುದ್ರಾಕ್ಷಿಗಳನ್ನು ಜನಿವಾರದಂತೆ ಧರಿಸತಕ್ಕದ್ದು"

ಸೋಮಾಸಿ ಮಾರನು ಅನುಕೂಲಸ್ಥರ ಮನೆತನದಲ್ಲಿಯೇ ಜನಿಸಿದವನಾದುದರಿಂದ ಹೊಟ್ಟೆಯ ಪಾಡಿಗಾಗಿ ಅವನು ಕಷ್ಟಪಡಬೇಕಾಗಿರಲಿಲ್ಲ. ಆದಕ್ಕಾಗಿ ಅವನು ಶಿವಪ್ರೀತಿಗೆ ಪಾತ್ರನಾಗುವ ಯಾವುದೊಂದು ಕಾಯಕವನ್ನು ಕೈಕೊಳ್ಳಬೇಕೆಂದು ಯೋಚಿಸಿ ಕೊನೆಗೆ ದಿನಂಪ್ರತಿ ಶಿವಶರಣರಿಗೆ

ಪುಷ್ಪಗಳನ್ನು ತಂದುಕೊಡುವ ಕಾಯಕವನ್ನು ಕೈಕೊಂಡು ಕಾಲಯಾಪನೆ ಮಾಡತೊಡಗಿದನು.

ತನ್ನ ಈ ಕಾಯಕಕ್ಕಾಗಿ ಸೋಮಾಸಿ ಮಾರನು ತನ್ನ ಗ್ರಾಮಕ್ಕೆ ಅನತಿ ದೂರದಲ್ಲಿಯೇ ಇರುವ ತಿರುಮರೂರ ಪಟ್ಟಣದ ಸೌಂದರನಂಬಿ ಎಂಬ ಶಿವಭಕ್ತನನ್ನು ಆರಿಸಿಕೊಂಡಿದ್ದನು. ಈ ಸೌಂದರನಂಬಿಯು ತನ್ನ ಭಕ್ತಿಯ ಮಹಿಮೆಯಿಂದ ಈಶ್ವರನನ್ನು ತನ್ನ ಛಾಯಾನುವರ್ತಿಯಾಗಿಸಿ ಕೊಂಡಿದ್ದಾನೆಂಬುದನ್ನು ಅವನು ಅರಿತಿದ್ದನು. ಅಲ್ಲದೆ ತಾನೊಂದು ಶಿವಯಾಗವನ್ನು ಮಾಡಬೇಕು. ಆ ಯಾಗಕ್ಕೆ ಪನ್ನಗಧರನನ್ನು ಕರೆತಂದು ಆತನ ಪಾದೋದಕವನ್ನು ಸೇವಿಸಬೇಕು. ಎಂಬ ಅಭಿಲಾಷೆಯೂ ಸೋಮಾಸಿ ಮಾರನ ಮನದಲ್ಲಿದ್ದಿತು.

ಈ ರೀತಿಯಾಗಿ ತನ್ನ ಮನದೊಳಗೆ ನಿರ್ಧರಿಸಿಕೊಂಡ ಅವನು ಸೌಂದರ ನಂಬಿಗೆ ಪುಷ್ಪಗಳನ್ನು ಒದಗಿಸುವ ಕಾಯಕವನ್ನು ಕೈಕೊಂಡಿರಲು ಒಂದು ದಿನ ಅವನು ಎಂದಿನಂತೆ ಸುಮಧುರ ವಾಸನೆಗಳುಳ್ಳ ಪುಷ್ಪಗಳನ್ನು ಕೊಯಿದು ತಂದು ಸೌಂದರನಂಬಿಯೆದುರು ಇರಿಸಿದನು. ಆಗ ಅವನು ತನ್ನ ಅರ್ಧಾಂಗಳಾದ ಪರುನಾಚಿಯನ್ನು ಈ ಹೂಗಳನ್ನು ತಂದ ಇವನು ಯಾರು ?' ಎಂದು ಕೇಳಿದನು.

ಆಗ ಅವಳು ಇವನೊಬ್ಬ ಶಿವಭಕ್ತನೆಂತಲೂ, ಕಳೆದ ಮೂರು ವರುಷ ಗಳಿಂದ ಪ್ರತಿದಿನವೂ ತಪ್ಪದೆ ಹೂವುಗಳನ್ನು ತಂದು ಕೊಡುತ್ತಿದ್ದಾನೆಂದೂ ಉಸುರಿದ್ದಲ್ಲದೆ ಅವನು ಈ ರೀತಿ ಏತಕ್ಕೆ ಮಾಡುತ್ತಿರುವನೆಂಬುದನ್ನೂ ಹೇಳಿದಳು. ಅಂದರೆ ಸೋಮಾಸಿ ಮಾರನು ಒಂದು ಯಾಗವನ್ನು ಮಾಡ ಲಿರುವನೆಂದೂ ಆ ಯಾಗಕ್ಕೆ ಶಂಕರನನ್ನು ನೀವು ಕಳುಹಿಸಿಕೊಡಬೇಕೆಂದೂ ನುಡಿದಳು. ಆಗ ಸೌಂದರ ನಂಬಿಯು ಹಾಗೆಯೇ ಆಗಲೆಂದು ಒಪ್ಪಿ ಕೊಂಡನು.

ಸೌಂದರ ನಂಬಿಯು ಒಪ್ಪಿಕೊಂಡೊಡನೆ ಆನಂದ ತುಂದಿಲನಾದ ಸೋಮಾಸಿಮಾರನು ತನ್ನ ಗ್ರಾಮಕ್ಕೆ ಒಂದು ಯಾಗದ ಸಿದ್ಧತೆಗಳನ್ನು ಮಾಡಿ ಶಂಕರನನ್ನು ನಿರೀಕ್ಷಿಸುತ್ತ ಕುಳಿತುಕೊಂಡನು. ಆಗ ಗಿರಿಜಾ ಪತಿಯು ಒಬ್ಬ ಹೊಲೆಯನ ವೇಷವನ್ನು ಧರಿಸಿ ಯಾಗ ಮಂಟಪದ ಕಡೆಗೆ

ಬರಲು ಸೋಮಾಸಿಮಾರನು ಎದ್ದು ಹೋಗಿ ಹೊಲೆಯನ ರೂಪದಲ್ಲಿ ಬಂದಿರುವ ಶಂಕರನ ಪಾದಗಳಿಗೆರಗಲು, ಶಂಕರನು— "ಅಯ್ಯಾ ವಿಪ್ರೋತ್ತಮಾ! ನಾನೋರ್ವ ಹೊಲೆಯನು. ನನ್ನ ಪಾದಗಳಿಗೆ ಕೈ ಬೀಳುವೆ. ನನ್ನ ಕಾಲುಗಳನ್ನು ಬಿಡು." ಎಂದು ಹೇಳಿದರೂ ಕೇಳದೆ ಸೋಮಾಸಿ ಮಾರನು ಅವನನ್ನು ನಾನಾ ವಿಧವಾಗಿ ಸ್ತುತಿಸತೊಡಗಿದನು. ಇದನ್ನು ಕಂಡು ಯಾಗದೊಳಗಿದ್ದವರಿಗೆಲ್ಲ ಸಿಟ್ಟು ಬಂದು "ಹೊಲೆಯನ ಪಾದಗಳನ್ನು ಹಿಡಿದುಕೊಳ್ಳುವವನ ಯಾಗದಲ್ಲಿ ನಾವು ನಿಲ್ಲುವದು ತರವಲ್ಲ" ಎಂದುಕೊಂಡು ಅವನನ್ನು ಹೊಲೆಯರೂಪೀ ಶಿವನನ್ನೂ ತುಚ್ಛ ಭಾವದಿಂದ ನೋಡುತ್ತ ಹೋಗಿಬಿಟ್ಟರು.

ಎದ್ದು ಹೋಗುವವರ ಕಡೆಗೆ ಗಮನವೀಯದೆ ಸೋಮಾಸಿ ಮಾರನು ಅವನನ್ನು ಕೊಂಡಾಡುತ್ತಿರಲು ಭಕ್ತ ವತ್ಸಲನಾದ ಶಂಕರನು ಅವನಿಗೆ ತನ್ನ ನಿಜರೂಪವನ್ನು ತೋರಿ ಆನಂದಗೊಳಿಸಿ ಶಾಶ್ವತವಾದ ಗಣಪದವಿಯನ್ನು ಅನುಗ್ರಹಿಸಿದನು.

ವಾಸವಾದಿಗಳರಿಯದೀಶನಂ ನಿಜಯಾಗ ।
ವಾಸಕ್ಕೆ ಬರಿಸಿಧರೆಗೆ ತೋರಿಸಿದ ಸೋ ।
ಮಾಸಿ ಮಾರರನೆ ಬಲಗೊಂಬೆ ॥

—ಶ್ರೀ ನಿಜಗುಣ ಶಿವಯೋಗಿಗಳು.

# ೧೧. ಅಚ್ಯುತರು

ಶಿವಭಕ್ತ ನೆಲೆವೀಡಾದ ದಕ್ಷಿಣಭಾರತದ ತಿರುಚನ್ನಾಡು ಎಂಬ ಪಟ್ಟಣದೊಳಗೆ, ಮಹಾದೇವನ ಭಕ್ತನಾದ ಅಚ್ಯುತನೆಂಬುವವನು ವಾಸಿಸುತ್ತಿದ್ದನು. ಈತನು ಗುರುವಿನಲ್ಲಿ ನಂಬುಗೆಯುಳ್ಳ ಸದ್ಗುಣಿ ದಂಪತಿಗಳ ಉದರದಲ್ಲಿ ಜನಿಸಿದ್ದನು. ಹೀಗಾಗಿ ಈತನ ಚಿತ್ತವು ಬಾಲ್ಯದಿಂದಲೇ ಶಿವೋಪಾಸನೆಯತ್ತ ಹೊರಳಿದ್ದು ಅಚ್ಚರಿಯ ಸಂಗತಿಯಲ್ಲ.

ಇವನು ಐದನೆಯ ವಯಸ್ಸಿನೊಳಗೆ ಕಾಲಿರಿಸಲು ಮಾತಾಪಿತರು ತಮ್ಮ ಕುವರನ ಜೀವನವು ಕೃತಕೃತ್ಯವಾಗಲೆಂಬ ಸದುದ್ದೇಶದಿಂದ ಅವನನ್ನು ಶಿವಯೋಗಿಗಳ ಮಠದ ಗುರುಕುಲವಾಸಕ್ಕೆ ಅರ್ಪಿಸಿಬಿಟ್ಟರು. ಅಲ್ಲಿ ಇವನು ಗುರುಹಿರಿಯರಲ್ಲಿ ಭಯಭಕ್ತಿಯಿಂದ ನಡೆದುಕೊಂಡು ಶಿವೋಪಾಸನೆಯ ಮಾರ್ಗವನ್ನು ಅರಿತುಕೊಳ್ಳುತ್ತ ಕಾಲಯಾಪನೆ ಮಾಡತೊಡಗಿದನು.

ಅನಂತರ ಅಚ್ಯುತನು ಶ್ರೇಷ್ಠಗುರುಗಳ ಸಾನ್ನಿಧ್ಯದಲ್ಲಿ ಶಿವಾಧ್ಯಯನ ಸಂಪನ್ನನಾಗಿ ಮನೆಗೆ ಮರಳಿದ ಮೇಲೆ ಯಾವಾಗಲೂ ಸತ್ಕರ್ಮಗಳಲ್ಲಿಯೇ ನಿರತನಾಗಿದ್ದನು. ಗುರು, ಲಿಂಗ, ಜಂಗಮರಲ್ಲಿ ಸೇವಾತತ್ಪರನಾಗಿ, ಶಿವಭಕ್ತರು ಬೇಡಿದ ಎಂಥ ವಸ್ತುಗಳನ್ನೂ ಅವನಿಗೆ ಸಂತೋಷದಿಂದ ಕೊಟ್ಟು ಕಳುಹಿಸುತ್ತಿದ್ದನು. ಇವನಲ್ಲಿ ಬೇಡಲಿಕ್ಕೆ ಬಂದವರು ಬರಿಗೈಯಿಂದ ಮರುಳುತ್ತಿದ್ದಿಲ್ಲ. ಅಷ್ಟೊಂದು ಕೊಡುಗೈ ದೊರೆಯಾಗಿದ್ದನು.

ಈತನು ತನ್ನ ಈ ರೀತಿಯ ಕಾಯಕಕ್ಕೆ ಬೇಕಾಗುವ ಅಪಾರ ಧನವನ್ನು ಜೂಜಿನಿಂದ ಸಂಪಾದಿಸುತ್ತಿದ್ದನು. ಶಿವಭಕ್ತರು ತಾವು ಮಾಡುವದೆಲ್ಲ ಶಿವಾರ್ಪಿತವೆಂಬ ಭಾವನೆಯಿಂದ ಮಾಡುತ್ತಿದ್ದುದರಿಂದಲೇ ಅವರು ಕೈಕೊಂಡ ಕಾರ್ಯಗಳು ಎಂಥದಿದ್ದರೂ ಕೈಗೂಡುತ್ತಿದ್ದವು. ಸುಖಪ್ರದವಾಗಿ ಪರಿಣಮಿಸುತ್ತಿದ್ದವು. ಅದೇ ರೀತಿಯಾಗಿ ಅಚ್ಯುತನು ದ್ಯೂತದೊಳಗೆ ಗೆದ್ದ ಹಣದಿಂದ ಮನೆಗೆ ಬಂದ ಅತಿಥಿಗಳಿಗೂ, ಶಿವಭಕ್ತರಿಗೂ

ಅವರವರ ಇಚ್ಛೆಯ ಪ್ರಕಾರ ತೃಪ್ತಿಪಡಿಸುತ್ತಿದ್ದನು.

ಈ ರೀತಿಯ ಧಾರಾಳತೆಯಿಂದ ನಾಲ್ಕೂ ಕಡೆಗೂ ಅವನ ಕೀರ್ತಿಯು ಗಾಳಿಯಂತೆ ಪಸರಿಸಿಬಿಟ್ಟಿತು. ಸುತ್ತು ಕಡೆಯಿಂದಲೂ ಜಂಗಮರು ಬಂದು ಅವನ ಆತಿಥ್ಯವನ್ನು ಸ್ವೀಕರಿಸಿ ಬಾಯಿತುಂಬಾ ಹೊಗಳಿ ಹೋಗುತ್ತಿದ್ದರು. ಇವನ ಕೀರ್ತಿಯನ್ನು ಕೇಳಿದ ಸದಾಸಿವನಿಗೆ ಇವನೊಂದಿಗೆ ದ್ಯೂತವಾಡ ಬೇಕೆಂಬ ಹಂಬಲವುಂಟಾಯಿತು.

ಪ್ರತಿದಿನದಂತೆ ಒಂದು ಸಲ ಅಚ್ಯುತನು ಜೂಜಾಟದ ಸ್ಥಳಕ್ಕೆ ಹೋಗಿ ಕುಳಿತುಕೊಂಡಿರಲು ಪರಮೇಶ್ವರನು ತನ್ನ ರೂಪವನ್ನು ಮರೆಯಿಸಿಕೊಂಡು, ಬೆಲೆ ಬಾಳುವ ವಸ್ತ್ರಗಳನ್ನೂ ಧರಿಸಿಕೊಂಡು ಕುಬೇರನಂತೆ ಅಲ್ಲಿಗೆ ಬಂದು ಅಚ್ಯುತನನ್ನು ಜೂಜಾಟಕ್ಕೆ ಕರೆದನು. ವಿಭೂತಿ, ರುದ್ರಾಕ್ಷ ಮಾಲೆಗಳಿಂದ ಶೋಭಿಸುವ ಅಚ್ಯುತನು ಅವನ ಕರೆಯನ್ನು ಸ್ವೀಕರಿಸಿ ಆತನನ್ನು ಸನ್ಮಾನಿಸಿ ಉಚಿತಾಸನದಲ್ಲಿ ಕುಳ್ಳಿರಿಸಿದನು.

ಆಡಲು ಬಂದವನ ಯೋಗಕ್ಷೇಮಗಳನ್ನು ವಿಚಾರಿಸಿದ ನಂತರ ಅಚ್ಯುತನು— "ಅಯ್ಯಾ ಸಿರಿವಂತನೇ! ನೀನೇನೋ ನನ್ನೊಂದಿಗೆ ಜೂಜನ್ನಾಡಲು ಬಂದಿರುವೆ. ಆದರೆ ಮೃತ್ಯುಂಜಯನ ಕೃಪಾಕಟಾಕ್ಷವನ್ನು ಪಡೆದ ನಾನು ದ್ಯೂತದಲ್ಲಿ ಸೋಲುವವನ್ನು ಕಲಿತಿಲ್ಲ. ಈ ಆಟದಲ್ಲಿ ಗೆದ್ದಂಥ ಧನಕನಕವನ್ನೆಲ್ಲ ಅತಿಥಿಗಳಿಗೆ ಜಂಗಮರಿಗೆ ಹಂಚಿಬಿಡುತ್ತೇನೆ. ಅರ್ಥಾತ್ ಶಿವಾರ್ಪಣ ಮಾಡುತ್ತೇನೆ. ಅದಕ್ಕಾಗಿ ನೀನು ಆಟವಾಡಲು ಪ್ರಾರಂಭಿಸುವದಕ್ಕೆ ಮುನ್ನ ಸಂಪೂರ್ಣವಾಗಿ ಯೋಚಿಸಿ ಸಿದ್ಧನಾಗು" ಎಂದು ಹೇಳಿದನು.

ಆಗ ಸಿರಿವಂತನ ವೇಷದಲ್ಲಿದ್ದ ಭಗವಂತನು— "ಅಯ್ಯಾ ಆಟವಾಡುವದಕ್ಕೇ ಬಂದಿರುವಾಗ ನೀನು ಈ ರೀತಿ ಮಾತನಾಡುವದು ಉಚಿತವಲ್ಲ. ಸೋಲು-ಗೆಲುವುಗಳು ಯಾರಿಗೂ ನಿಶ್ಚಿತವಲ್ಲ. ಅದಕ್ಕಾಗಿ ಯಾವುದನ್ನೂ ವಿಚಾರ ಮಾಡುವ ಗೋಜಿಗೆ ಹೋಗದೆ ಆಟವಾಡಲು ಸಿದ್ಧನಾಗು" ಎಂದು ಹೇಳಿದನು.

ಅಚ್ಯುತನು ಅವನೊಂದಿಗೆ ಆಟವನ್ನು ಪ್ರಾರಂಭಿಸಿದನು. ಆಟವು ಒಳ್ಳೇ ಭರದಿಂದ ಸಾಗಿತು. ಯಾರ ಕೈ ಮೇಲಾಗುತ್ತದೆಂದು ಹೇಳಲು

ಸಾಧ್ಯವಾಗದಂಥ ಪರಿಸ್ಥಿತಿ ಉತ್ಪನ್ನವಾಯಿತು. ಈರ್ವರೂ ಒಳ್ಳೇ ಜಾಗರೂಕತೆಯಿಂದ ಆಡತೊಡಗಿದರು. ನೆರೆದವರು ಕೂಡ ಒಳ್ಳೇ ಕುತೂಹಲದಿಂದ ಆಟವನ್ನು ನಿರೀಕ್ಷಿಸತೊಡಗಿದರು. ಹಿಂದೆಂದೂ ಸೋಲನ್ನೇ ಕಂಡರಿಯದ ಅಚ್ಯುತನಿಗೆ ಇಂದು ಒಳ್ಳೆಯ ಆಟಗಾರ ಸಿಕ್ಕಿದ್ದಾನೆ ಎಂದೂ ಕೆಲವರು ಮಾತನಾಡಹತ್ತಿದರು.

ಕೊನೆಗೆ ಅಚ್ಯುತನ ಕೈ ಮೇಲಾಯಿತು. ಭಗವಂತನು ಸೋತು ಹೋದನು. ಆಗ ಸದಾಶಿವನು ಅವನಿಗೆ ತನ್ನ ನಿಜರೂಪವನ್ನು ತೋರಿಸಲು ಭಯಚಕಿತನಾದ ಅಚ್ಯುತನು, “ ಮಹಾಪ್ರಭೋ ! ನನ್ನದು ತಪ್ಪಾಯಿತು. ಈ ದೀನನ ಅಕ್ಷಮ್ಯ ಅಪರಾಧಗಳನ್ನು ಕ್ಷಮಿಸು ” ಎಂದು ಕಾಲಿಗೆ ಬಿದ್ದು ಬೇಡಿಕೊಳ್ಳತೊಡಗಿದನು. ಆಗ ಪರಮೇಶ್ವರನು ಅವನನ್ನು ಸಂತೈಸಿ ತತ್‍ಕ್ಷಣವೇ ಪುಷ್ಪಕ ವಿಮಾನದಲ್ಲಿ ಅವನನ್ನು ಕುಳ್ಳಿರಿಸಿಕೊಂಡು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನಿತ್ತನು.

ಜಗವರಿಯ ಜೂಜಿನಿಂದೊಗೆದರ್ಥವನೆ ಶರಣ ।
ರುಗಳಿಗಿತ್ತ ಭವನೊಡನಾಡಿಗೆಲೆದೊಸಗೆ ।
ಮಿಗೆ ಯಚ್ಯುತರ್ಗೆ ಶಿಶುಪಾಸು ॥

—ಶ್ರೀ. ನಿಜಗುಣ ಶಿವಯೋಗಿಗಳು.

# ೧೨. ಮೊನೆಯಾಂಡರು

ಬಹುಕಾಲದ ಹಿಂದೆ ಚೋಳ ರಾಜ್ಯದಲ್ಲಿ ಸತ್ಕೀರ್ತಿಯುತನೂ, ಮಹಾಶಿವಭಕ್ತನೂ, ಗುರುಲಿಂಗ ಜಂಗಮರಲ್ಲಿ ಭಯಭಕ್ತಿಗಳನ್ನಿರಿಸಿ, ಅವರನ್ನು ಮನ್ನಿಸುವವನೂ ಆದ ಮೊನೆಯಾಂಡನೆಂಬ ಅರಸನು ಆಳುತ್ತಿದ್ದನು. ವಿಭೂತಿ ರುದ್ರಾಕ್ಷಗಳಿಲ್ಲದೆ ತಿರುಗುವವರ ರುಂಡವನ್ನು ಚಂಡಾಡುವೆನೆಂದು ಹೇಳುತ್ತಿದ್ದನು. ಸಮರಾಂಗಣದಲ್ಲಿ ಕೂಡ ಅದೇ ರೀತಿ ತನ್ನ ಶೌರ್ಯವನ್ನು ವ್ಯಕ್ತ ಮಾಡಿ ಅರಿಗಳನ್ನು ಯಮಸದನಕ್ಕಟ್ಟಿ, ಅವರಿಂದ ದೊರೆತ ಧನಕನಕಗಳನ್ನು ಶಿವಭಕ್ತರಿಗೆ ಹಂಚಿ ಶಿವಚಿಂತನೆಯಲ್ಲಿ ಮಗ್ನನಾಗಿರುತ್ತಿದ್ದನು.

ಸದಾಚಾರಿಯಾದ ಮೊನೆಯಾಂಡನು ಬೆಳಗಿನ ಜಾವದೊಳಗೆದ್ದು, ಶುದ್ಧವಾದ ಹವೆಯೊಳಗೆ ಅಂಗಸಾಧನೆಯನ್ನು ಮಾಡುತ್ತಿದ್ದನು. ಅನಂತರ ಅರಮನೆಗೆ ಬಂದು ಪ್ರಾತಃವಿಧಿಗಳನ್ನು ತೀರಿಸಿಗೂಂಡು, ಭಸ್ಮವಿಭೂಷಿತ, ರುದ್ರಾಕ್ಷಮಾಲಾ ಭರಣಾಲಂಕೃತನಾಗಿ ಶಿವಾರ್ಚನೆಯನ್ನು ಪೂರೈಸಿ, ಶಿವಕವಚಗಳನ್ನು ಪಠಿಸಿ, ಶಿವಭಕ್ತರ ಚರಿತ್ರೆಗಳನ್ನು ಅಕ್ಕರೆಯಿಂದ ಓದುತ್ತಿದ್ದನು. ಈ ರೀತಿಯಾಗಿ ಕಾಲಯಾಪನೆ ಮಾಡುತ್ತಿರಲು ಅವನಿಗೆ ಮಂಡಲಾಧಿಪನಾದ ಪಗಲ್ಚೋಳ ರಾಜನಲ್ಲಿಗೆ ಹೋಗಬೇಕೆಂಬ ಇಚ್ಛೆಯುಂಟಾಯಿತು.

ಮಹಾಶಿವಭಕ್ತನಾದ ಪಗಲ್ಚೋಳ ರಾಜನು ಕರಿಯೂರೆಂಬ ಪಟ್ಟಣವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಶಿವಚಿಂತನೆಯಲ್ಲಿ ನಿರತನಾಗಿದ್ದನು. ಅವನ ಬಳಿ ಮೊನೆಯಾಂಡನು ಹೋಗಿ ತನ್ನ ಕಾಯಕವನ್ನು ಅರುಹಿದನು. ಅದು ಈ ರೀತಿಯಾಗಿತ್ತು—

"ಧರ್ಮಧುರಂಧರನಾದ ನೃಪತಿಯೇ! ನನಗೆ ಶ್ರೀ ಗುರುಗಳು ಮೊನೆಯಾಂಡನೆಂದು ನಾಮಕರಣ ಮಾಡಿರುವರು. ನಾನು ತುರಂಗಿಯು. ಯುದ್ಧರಂಗದಲ್ಲಿ ಲಿಂಗರಹಿತರ ಹಾಗು ವಿಭೂತಿ, ರುದ್ರಾಕ್ಷಿ ರಹಿತರ

ರುಂಡಗಳನ್ನು ಚಂಡಾಡುವೆನು. ಒಡೆಯರಿಂದ ಬಹುಮಾನರೂಪವಾಗಿ ಬರುವ ಧನಧಾನ್ಯಗಳನ್ನೇ ಶಿವಭಕ್ತರಲ್ಲಿ ಹಂಚುವೆನು. ದೇವದೇವನಾದ ಮಹಾದೇವನನ್ನು ನನ್ನ ಪ್ರಾಣದ ದೇವರೆಂದು ಭಾವಿಸಿದ್ದೇನೆ. ಶಿವಭಕ್ತರನ್ನು ಕೂಡ ಅಷ್ಟೇ ಗೌರವದಿಂದ ಕಾಣುತ್ತೇನೆ.

ಮೊನೆಯಾಂಡನು ಹೇಳಿದ ಮಾತುಗಳನ್ನು ಕೇಳಿ ಶಿವಭಕ್ತಾಗ್ರಣಿಯಾದ ಪಗಲ್ಪೋಳ ಮಹಾರಾಜನಿಗೆ ಅತ್ಯಂತ ಆನಂದವಾಯಿತು. ಅಲ್ಲದೆ ಇನ್ನು ಮುಂದೆ ತನಗೆ ಶುಭ ಕಾಲವು ಸನ್ನಿಹಿತವಾಯಿತು ಎಂದು ಭಾವಿಸಿಕೊಂಡು— "ವೀರಶ್ರೇಷ್ಠನಾದ ಶಿವಭಕ್ತ ಪುಂಗವನೇ! ನಿನ್ನ ಮಾತುಗಳನ್ನು ಕೇಳಿ ನಮಗೆ ಅತ್ಯಂತ ಆನಂದವಾಯಿತು. ನಿನ್ನಂಥ ಶ್ರೇಷ್ಠ ಅಶ್ವಾರೋಹಿಯು ನನ್ನ ಬಳಿ ಇರುವದು ಸರ್ವಥಾಯೋಗ್ಯವಾದುದಾಗಿದೆ. ಆದಕ್ಕಾಗಿ ನೀನು ಇಂದಿನಿಂದ ನನ್ನ ಸೈನ್ಯಾಧಿಕಾರಿಗಳಲ್ಲಿ ಒಬ್ಬನಾಗಿ ಇರು. ನಿನಗೆ ಬೇಕಾದಷ್ಟು ಧನವನ್ನು ತೆಗೆದುಕೊಂಡು ಧಾರಾಳವಾಗಿ ನಿನ್ನ ಕಾಯಕವನ್ನು ನಡೆಯಿಸಿಕೋ'' ಎಂದು ಹೇಳಿದನು.

ಈ ಮೇರೆಗೆ ಅರಸನಿಂದ ಮನ್ನಣೆ ಪಡೆದ ಮೊನೆಯಾಂಡನು ಅಲ್ಲಿಯೇ ಇದ್ದು ತನ್ನ ಕಾಯಕವನ್ನು ನಡೆಯಿಸುತ್ತಿರಲೊಂದು ದಿನ ಅರಸನಾದ ಪಗಲ್ಪೋಳನು - ಅಶ್ವಾರೋಹಿಯೇ! ನಮ್ಮ ಮಾಂಡಲಿಕನಾದ ಪಾಂಡ್ಯರಾಜನು ನಮಗೆ ಕೊಡತಕ್ಕ ಕಪ್ಪವನ್ನು ಕೊಡದೆ ಮೇಲೆ ನಮ್ಮೊಂದಿಗೆ ಯುದ್ಧಕ್ಕೆ ಬಂದಿದ್ದಾನೆ. ಅವನನ್ನು ನಿಗ್ರಹಿಸಿ ಬಾ." ಎಂದು ಆಜ್ಞಾಪಿಸಿ ಕಳುಹಿಸಿದನು.

ಆಗ ಮೊನೆಯಾಂಡನು ಪಾಂಡ್ಯರಾಜನೊಡನೆ ಯುದ್ಧವನ್ನು ಪ್ರಾರಂಭಿಸಿದನು. ಪ್ರತ್ಯಕ್ಷ ಯಮನಂತೆ ಆ ರಾಜನ ಸೇನೆಯನ್ನು ಸಂಹರಿಸುತ್ತಿರಲು ಇವನ ಅಬ್ಬರಕ್ಕೆ ತಡೆಯಲಾರದೆ ಪಾಂಡ್ಯರಾಜನ ಸೈನಿಕರು ಪಲಾಯನ ಮಾಡತೊಡಗಿದರು. ಇದನ್ನೆಲ್ಲ ಅಂತರಿಕ್ಷದಲ್ಲಿಂದ ನೋಡುತ್ತಿದ್ದ ಮೃತ್ಯುಂಜಯನು ಮೊನೆಯಾಂಡನನ್ನು ಪರೀಕ್ಷಿಸಬೇಕೆಂದು ನಂದಿಯನ್ನು ತುರಗವನ್ನಾಗಿಸಿ ತಾನು ಯೋಧನಂತೆ ತ್ರಿಪುಂಡ್ರ, ರುದ್ರಾಕ್ಷಗಳನ್ನು ಧರಿಸಿ ದಿಕ್ಕೆಟ್ಟು ಓಡಿಹೋಗುತ್ತಿರುವ ಆ ಸೈನ್ಯವನ್ನು ಒಟ್ಟುಗೂಡಿಸಿ ಮತ್ತೆ ಕಾಳಗಕ್ಕೆ ಅಣಿಗೊಳಿಸಿ ಮೊನೆಯಾಂಡನಿಗೆದುರಾಗಿ ನಿಂತುಕೊಂಡು ಸಿಂಹನಾದ

ಮಾಡಿದನು.

ಆ ಸಿಂಹನಾದವು ದಿಗಂತದವರೆಗೂ ಮೊಳಗಿತು. ತನ್ನ ಎದುರಾಳಿಯು ತ್ರಿಪುಂಡ್ರ, ರುದ್ರಾಕ್ಷ ಧಾರಿಯಾಗಿರುವದನ್ನು ಕಂಡ ಮೊನೆಯಾಂಡನು ಅವನ ಮೇಲೆ ಕೈಮಾಡದೆ ಸುಮ್ಮನೆ ನಿಂತುಕೊಂಡನು. ಆಗ ಅವನ ಭಕ್ತಿಗೆ ಮೆಚ್ಚಿದ ಭಗವಂತನು ತನ್ನ ನಿಜ ರೂಪವನ್ನು ತೋರಿಸಿ ಅವಯವಗಳನ್ನು ಮುಂಚಿನಂತೆ ಮಾಡಲು ದೇವದುಂದುಭಿಗಳು ಮೊಳಗಿದವು. ದೇವತೆಗಳು ಉಭಯತರ ಮೇಲೆ ಪುಷ್ಪಗಳ ಮಳೆಗರೆದರು.

ಆಗ ಗಿರಿಜಾಪತಿಯಾದ ಶಂಕರನು ಮೊನೆಯಾಂಡನನ್ನು ಪುಷ್ಪಕ ವಿಮಾನದಲ್ಲಿ ಕುಳ್ಳಿರಿಸಿಕೊಂಡು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ಅನುಗ್ರಹಿಸಿದನು.

ಜನರ್ಬೈದೆ ಬವರಕ್ಕೆ ತನಗಿತ್ತ ಧನವನೆ ।
ಳ್ಪನಿತನುಳಹಿಸದೆ ಚರಸೇವೆ ಗೈದಧಿಕ ।
ಮೊನೆಯಾಂಡ ರೆನ್ನೊಡೆಯ ನೆಂಬೆ ॥

—ಶ್ರೀ ನಿಜಗುಣ ಶಿವಯೋಗಿಗಳು

# ೧೩. ಮಾನಕಂಜರರು

ದಕ್ಷಿಣಭಾರತದಲ್ಲಿ ಆಗಿ ಹೋದ ಅನೇಕ ಮಹಾನುಭಾವರಲ್ಲಿ ಮಾನ ಕಂಜರನೂ ಒಬ್ಬನಾಗಿದ್ದಾನೆ. ಈತನು ಮಹಾ ಶಿವಭಕ್ತನಿದ್ದಂತೆ ಈತನ ಪತ್ನಿಯೂ ಶರಣೆಯಾಗಿದ್ದಳು. ಪತಿಯ ಪ್ರತಿಯೊಂದು ಕಾರ್ಯಗಳಲ್ಲಿ ತನ್ನ ಸಹಕಾರವನ್ನಿತ್ತು ಪತಿಗೆ ತಕ್ಕ ಪತ್ನಿ ಎನ್ನಿಸಿಕೊಂಡಿದ್ದಳು.

ಒಂದು ದಿನ ಬೆಳಗಿನ ಜಾವದೊಳು ನಿತ್ಯದಂತೆ ಮಾರಕಂಜರನು ಕಂಜಾರವುರಾಧೀಶ್ವರನ ದೇವಾಲಯಕ್ಕೆ ಹೋಗಿ ಮಹಾದೇವನನ್ನು ಪೂಜಿಸಿ ಆನಂದದೊಳು ತಲ್ಲೀನನಾಗಿ ಮನೆಗೆ ಬಂದನು. ಅವನ ಪತ್ನಿಯು ಜೋಲು ಮುಖ ಹಾಕಿಕೊಂಡು ಕುಳಿತಿರುವದನ್ನು ಕಂಡು ಅವನಿಗೆ ಆಶ್ಚರಿಯಾಯಿತು. ಆಗ ಅವನು, " ವಲ್ಲಭೇ ! ಎಂದೂ ಇಲ್ಲದ ನಿನ್ನ ಮುಖ ಕಮಲವು ಇಂದೇಕೆ ಬಾಡಿದೆ? ಶಿವಭಕ್ತರ ಮುಖದ ಮೇಲೆ ಗೋಚರ ವಾಗದಂಥ ಚಿಂತೆಯು ನಿನ್ನ ಮುಖದ ಮೇಲೇಕೆ ಕಾಣಿಸತೊಡಗಿದೆ? ಜಂಗಮರ ಸತ್ಕಾರ ಕಾರ್ಯವು ನಿಯಮಪೂರ್ವಕವಾಗಿ ನಡೆಯುವದಿಲ್ಲವೇ ? ಅಥವ ಗುರು-ಜಂಗಮರು ಬೇಡಿದುದನ್ನು ನೀಡಲು ನಮ್ಮಲ್ಲಿ ಧನ-ಕನಕದ ಕೊರತೆಯಿದೆಯೇ ? ಇಲ್ಲವೆ ನಮ್ಮಲ್ಲಿಯವರಾರಾದರೂ ನೀತಿ ಮಾರ್ಗವನ್ನು ಬಿಟ್ಟು ನಡೆಯುತ್ತಿರುವರೇ ? ಹೀಗೇಕೆ ಕುಳಿತಿರುವೆ. ನಿನ್ನ ಮುಖದ ಮೇಲಿನ ಚಿಂತೆಯ ಕಳೆಯನ್ನು ಕಂಡು ನನಗೆ ವ್ಯಸನವಾಗುತ್ತಿದೆ" ಎಂದನು.

ಪತಿಯು ಹೇಳಿದುದನ್ನೆಲ್ಲ ಕೇಳಿದ ನಂತರ ಆ ಗುಣವತಿಯು ಅವನಿಗೆ ಪ್ರತ್ಯುತ್ತರ ರೂಪವಾಗಿ, " ಪ್ರಾಣಪ್ರಭುವೇ ! ನಮಗೆ ಯಾವುದರ ಕೊರತೆಯೂ ಇಲ್ಲ. ನಮ್ಮ ಜನಗಳ ನೀತಿಯೂ ಕೆಟ್ಟಿಲ್ಲ. ಆದರೆ ನನ್ನನ್ನು ಬಾಧಿಸುತ್ತಿರುವ ಚಿಂತೆಯೇ ಬೇರೆಯಾಗಿದೆ. ನಾವು ಇಷ್ಟೊಂದು ಭಕ್ತಿ ವಂತರಾಗಿದ್ದರೂ ನಮ್ಮ ವಂಶದ ಉದ್ಧಾರಕ್ಕೆ ಒಬ್ಬ ಮಗನಿಲ್ಲವಲ್ಲ ! ಎಂಬ ಚಿಂತೆಯು ನನ್ನನ್ನು ಸದಾ ಬಾಧಿಸುತ್ತಿದೆ. ಅದಕ್ಕಾಗಿ ನೀವು ಮಹಾ ಮಹಿಮನಾದ ದುಹಾದೇವನನ್ನು ಪ್ರಾರ್ಥಿಸಿ ಪುತ್ರರತ್ನವನ್ನು ಕೊಡುವಂತೆ

ಬೇಡಿಕೊಳ್ಳಿರಿ'' ಎಂದಳು.

ಪತ್ನಿಯ ಮನದಲ್ಲಿದ್ದ ಚಿಂತೆಯ ಕಾರಣವು ಮಾನಕಂಜರನಿಗೆ ತಿಳಿದುಬಂದಿತು. ಆಗ ಅವನು ತನ್ನ ಅವಿವೇಕತನಕ್ಕೆ ನಕ್ಕು, '' ಹುಚ್ಚಿ ! ಇಷ್ಟಕ್ಕಾಗಿ ನೀನು ಇಷ್ಟೊಂದು ಕೊರಗುವದೇ? ಪುತ್ರರಿಲ್ಲದವರಿಗೆ ಮುಕ್ತಿಯಿಲ್ಲವೆಂಬ ಮಾತು ಶಿವಭಕ್ತರಿಗೆ ಸರ್ವಥಾ ಅನ್ವಯಿಸುವದಿಲ್ಲ. ಎಂದಾದರೊಂದು ದಿನ ನಾಶಹೊಂದುವ ಸಂತತಿಗಿಂತ ಅವಿನಾಶಿಯಾದ ಭಕ್ತಿಯೇ ಮೇಲು. ಈಶ್ವರನ ಭಾವನೆಗಳನ್ನು ಅಳವಡಿಸಿಕೊಂಡಿರುವ ನಾನು ಇಂತಹ ಕ್ಷುಲ್ಲಕ ಸಂಗತಿಗಳನ್ನು ಅವನಲ್ಲಿ ಕೇಳಲಾರೆ. ಕೇವಲ ಇಷ್ಟಕ್ಕಾಗಿ ನೀನೂ ಚಿಂತಿಸಬೇಡ. ಈ ಚಿಂತೆಯನ್ನು ನಿನ್ನ ಮನದೊಳಗಿಂದ ತೆಗೆದು ಹಾಕಿಬಿಡು '' ಎಂದನು.

ಆದರೆ ಆ ಗುಣವಂತಿಯೂ ಅಜ್ಞಳಿರಲಿಲ್ಲ. ಇವೆಲ್ಲ ಸಂಗತಿಗಳು ಅವಳಿಗೂ ಗೊತ್ತಿದ್ದವು. ಆದರೂ ಜಗತ್ತಿನವರಿಂದ ಬಂಜೆ ಎನ್ನಿಸಿಕೊಂಡು ಕಾಲಯಾಪನೆ ಮಾಡುವದು ಹೇಗೆಂದು ಕೇಳಲು ನಿರುತ್ತರನಾದ ಮಾನ-ಕಂಜರನು ಕಂಜರಾಧೀಶನಲ್ಲಿಗೆ ಹೋಗಿ ಅವನನ್ನು ಪೂಜಿಸಿ ತನ್ನ ಪತ್ನಿಗಾಗಿ ಓರ್ವ ಕುವರಿಯನ್ನು ಕರುಣಿಸಲು ಬೇಡಿಕೊಂಡನು. '' ಶಿವಲಿಂಗದ ಅನುಗ್ರಹದಿಂದಲೇ ನಿನ್ನ ಸತಿಯು ಸಂತಾನವತಿಯಾಗುವಳು" ಎಂದು ಆ ಶರೀರವಾಣಿಯೊಂದು ಕೇಳಿಸಿತು.

ಅದನ್ನು ಕೇಳಿದ ಅವನು ಅತ್ಯಂತ ಹರ್ಷಚಿತ್ತನಾಗಿ ಮನೆಗೆ ಬಂದು ಪತ್ನಿಯದುರು ಎಲ್ಲ ಸಂಗತಿಗಳನ್ನು ಹೇಳಿದನು. ಅವಳಿಗೂ ಸಂತೋಷವಾಗಿ ಮತ್ತೆ ಮೊದಲಿನಂತೆ ತನ್ನ ಕಾರ್ಯವನ್ನು ಪ್ರಾರಂಭಿಸಿ ಜಂಗಮನೇ ಸಾಕ್ಷಾತ್ ಲಿಂಗವೆಂದು ಭಾವಿಸುತ್ತ ಕಾಲ ಕಳೆಯತೊಡಗಿದಳು. ದಿನಗಳೆದಂತೆ ಕೈಲಾಸಪತಿಯ ಅನುಗ್ರಹದಿಂದ ಗರ್ಭವತಿಯೂ ಆದಳು.

ನವಮಾಸಗಳು ತುಂಬಿ ಅವಳು ಒಂದು ಕನ್ಯಾರತ್ನಕ್ಕೆ ಜನ್ಮವಿತ್ತಳು. ಆ ಕುಮಾರಿಯಲ್ಲಿಯ ತೇಜಗಳು ಜನ್ಮಾವಸ್ಥೆಯಲ್ಲಿಯೇ ಗೋಚರವಾದವು. ಆ ಕೂಸು ಶಿವಭಕ್ತೆಯೋ ಪುಷ್ಪವೋ ಎಂಬಂತೆ ನೋಡುವವರ ಮನವನ್ನು ಸೆಳೆಯುವಂತಿತ್ತು. ಅದಕ್ಕಾಗಿ ದಂಪತಿಗಳು ಆ ಕನ್ಯಾರತ್ನಕ್ಕೆ ಸೋಮಪ್ರಭೆಯೆಂದು ನಾಮಕರಣ ಮಾಡಿದರು. ಅಂಥ ಶಿವಭಕ್ತ ದಂಪತಿಗಳ

ಪೋಷಣೆಯಲ್ಲಿದ್ದ ಆ ಕನ್ಯಾರತ್ನವು ಬಿದಿಗೆಯ ಚಂದ್ರನಂತೆ ಬೆಳೆಯುತ್ತ ಯೌವನದಲ್ಲಿ ಕಾಲಿರಿಸಿದಳು. ದಿನಗಳೆದಂತೆ ಸ್ವಾಭಾವಿಕವಾಗಿ ಅವಳಲ್ಲಿ ಜಂಗಮಾರಾಧನೆಯು ನೆಲೆಯೂರಿತು. ಅಲ್ಲದೆ ತನ್ನ ತಂದೆಯು ಮಾಡುತ್ತಿರುವ ಜಂಗಮಾರಾಧನೆಯನ್ನು ಕಂಡು ಹಿಗ್ಗುತ್ತಿದ್ದಳು.

ಪ್ರಜೆಗಳ ಹಿತವೇ ತನ್ನ ಹಿತವೆಂದು ಬಗೆದು ಧರ್ಮಮಾರ್ಗವನ್ನು ಬಿಡದೆ ರಾಜ್ಯವನ್ನು ಪರಿಪಾಲಿಸುವ ಕರಿಯೂರ ಪುರದರಸು ವಿಕ್ರಮ ಚೋಳ ನಿಗೆ ಪಗಲ್ಚೋಳನೆಂಬ ಕುಮಾರನೊಬ್ಬನಿದ್ದನು. ಆ ಯುವರಾಜನು ಸಹಿತ ಸಕಲವಿದ್ಯೆಗಳಲ್ಲಿ ಪಾರಂಗತನಾಗಿದ್ದನು. ತನ್ನ ಮಗನಿಗನುರೂಪ ಳಾದ ಕನ್ಯೆಗಾಗಿ ವಿಕ್ರಮ ಚೋಳನು ಎಲ್ಲ ಕಡೆಗೂ ಶೋಧಿಸತೊಡಗಿ ದನು. ಇಷ್ಟೇ ಅಲ್ಲ, ಈ ಕಾರ್ಯಕ್ಕಾಗಿ ತನ್ನ ಪ್ರಧಾನಿಯಾದ ಗಾಂಗೇ ಯನನ್ನೂ ಕಳುಹಿಸಿದನು.

ಗಾಂಗೇಯನು ಅರಸನಿಗೆ ತಕ್ಕ ಪ್ರಧಾನಿಯಾಗಿದ್ದನು. ಅವನು ಅರಸನ ಆಜ್ಞೆಯಂತೆ ನಾನಾನಗರಗಳನ್ನು ಸಂಚರಿಸುತ್ತ ಕಂಜಾರಪುರದ ಮಾನಕಂಜರನಲ್ಲಿಗೂ ಬಂದನು. ಅವನಲ್ಲಿಯ ಅಪಾರವಾದ ಶಿವಭಕ್ತಿ ಯನ್ನು ಕಂಡು ಸಂತಸಬಟ್ಟನು. ಅವನ ಮಗಳನ್ನು ನೋಡಿದಮೇಲಂತೂ ಗಾಂಗೇಯನಿಗೆ ಅತ್ಯಂತ ಆನಂದವಾಯಿತು. ಆವಳಲ್ಲಿಯ ತೇಜ, ಸುಲ ಕ್ಷಣಗಳು ಅವನ ಮನಸೆಳೆದವು. ತಮ್ಮ ಯುವರಾಜನಿಗೆ ಇವಳು ತಕ್ಕವ ಳೆಂಬುದನ್ನು ಮನದಲ್ಲಿಯೇ ನಿರ್ಧರಿಸಿ, ತನ್ನ ಒಡೆಯನಲ್ಲಿಗೆ ಹೋಗಿ ಎಲ್ಲ ಸಂಗತಿಗಳನ್ನು ನಿವೇದಿಸಿದನು.

ಗಾಂಗೇಯನು ತಂದ ಸುದ್ದಿಯಿಂದ ಭುವನೀಶನಾದ ವಿಕ್ರಮ ಚೋಳನಿಗೆ ಸಂತೋಷವಾಯಿತು. ಆಗ ಅವನು, “ಪ್ರಧಾನಿಯೇ! ಆ ಮಹಾ ಶಿವಭಕ್ತನಾದ ಮಾನಕಂಜರನು ತನ್ನ ಕುವರಿಯನ್ನು ನನ್ನ ಮಗನಿಗೆ ಕೊಡಲು ಒಪ್ಪಬಹುದೇ? ನೀನೇ ಹೋಗಿ ಈ ಕಾರ್ಯವನ್ನು ಹೇಗಾದರೂ ಮಾಡಿ ತೀರಿಸಿಕೊಂಡು ಬರಬೇಕು” ಎನ್ನಲು ಗಾಂಗೇಯನು ಹಾಗೆಯೇ ಆಗಲೆಂದು ಕಂಜಾರಪುರಕ್ಕೆ ತೆರಳಿದನು.

ಅಮಾತ್ಯನು ತಾನು ಹೋದ ಕಾರ್ಯವನ್ನು ಪೂರ್ಣ ಮಾಡಿದನು. ಮಾನಕುಂಜರನು ತನ್ನ ಕುವರಿಯನ್ನು ಪಗಲ್ಚೋಳನಿಗೆ ಕೊಡಲು ಒಪ್ಪಿ

ಕೊಂಡನು. ಈ ಸಂಗತಿ ಗೊತ್ತಾದ ನಂತರ ವಿಕ್ರಮಚೋಳನಿಗೆ ಅತ್ಯಂತ ಆನಂದವಾಯಿತು. ಲಗ್ನದ ಸಿದ್ಧತೆಗಳು ಜೋರಿನಿಂದಲೇ ನಡೆದವು. ಕೊನೆಗೆ ವಿಕ್ರಮಚೋಳನು ಪರಿವಾರ ಸಹಿತನಾಗಿ ಸುಮುಹೂರ್ತದಲ್ಲಿ ಕಂಜಾರಪುರಕ್ಕೆ ಆಗಮಿಸಿದನು.

ವಿವಾಹ ಮಂಟಪವು ಸಿದ್ಧವಾಯಿತು. ಅಕ್ಷತಾರೋಪಣದ ಸಮಯಕ್ಕೆ ಮಾನಕಂಜರನು ತನ್ನ ಕುವರಿಯಾದ ಸೋಮಪ್ರಭೆಯನ್ನು ಮಹೇಶ್ವರನ ಸಾಕ್ಷಿಯಾಗಿ ವಿಕ್ರಮಚೋಳನ ಕುವರನಾದ ಪಗಲ್ಚೋಳನಿಗೆ ಕೊಟ್ಟು ಕಾರ್ಯವನ್ನು ಸಾಂಗಗೊಳಿಸಿದನು. ಮಂಗಳ ವಾದ್ಯಗಳು ಮೊಳಗಿದವು. ವಿವಾಹ ಕಾರ್ಯಕ್ಕಾಗಿ ಆಗಮಿಸಿದ್ದ ಸಕಲರೂ ಆನಂದಭರಿತರಾದರು.

ಈ ರೀತಿಯಾಗಿ ಅಕ್ಷತಾರೋಪಣ ಕಾರ್ಯವು ನಿರ್ವಿಘ್ನವಾಗಿ ನೆರವೇರುತ್ತಿರುವ ಸಮಯದಲ್ಲಿ ಈಶ್ವರನು ಮಾನಕಂಜರನ ಭಕ್ತಿಯನ್ನು ಪರೀಕ್ಷಿಸಲೋಸುಗ ಓರ್ವವೃದ್ಧ ಜಂಗಮನ ವೇಷದಿಂದ ವಿವಾಹ ಮಂಟಪ ದೊಳಗೆ ಆಗಮಿಸಿದನು. ವಿವಾಹದಂಥ ಶುಭ ಸಮಯದಲ್ಲಿ ಅತ್ಯಂತ ತೇಜಸ್ವಿನೊಡಗೂಡಿದ ಜಂಗಮನು ಬಂದುದನ್ನು ಕಂಡು ಮಾನಕಂಜರ ನಿಗೆ ಅತೀವ ಆನಂದವಾಯಿತು.

ಆಗ ಅವನು ಆ ವೃದ್ಧ ಜಂಗಮನನ್ನು ನಾನಾವಿಧವಾಗಿ ಉಪಚರಿಸಿ ಉಚಿತಾಸನದಲ್ಲಿ ಕುಳ್ಳಿರಿಸಿ— "ಶಿವಸಮಾನನಾದ ಜಂಗಮ ಮೂರ್ತಿಯೇ ನೀನು ಇಂತಹ ಸಮಯದಲ್ಲಿ ಬಂದಿರುವದು ನನ್ನ ಹಾಗು ನನ್ನ ಮಗಳ ಭಾಗ್ಯವೆಂದೇ ಹೇಳಬೇಕು. ನಿನ್ನ ಆಗಮನ ಮಂತ್ರದಿಂದಲೇ ನಾವು ಧನ್ಯರಾದೆವು. ನಿನಗೆ ಬೇಕಾದುದನ್ನು ಬೇಡು. ನಿನ್ನ ಇಚ್ಛೆಯನ್ನು ನೆರವೇರಿಸಲು ನಾನು ಸಿದ್ಧನಿದ್ದೇನೆ." ಎಂದನು.

ಮಾನಕಂಜರನ ಮಾತುಗಳನ್ನು ಕೇಳಿ ಜಂಗಮನಿಗೆ ನಗುಬಂದಿತು. ಕೂಡಲೇ ಅವನು— "ಅಯ್ಯಾ ಮಾನಕಂಜರಾ! ನೀನು ಕಟ್ಟಾ ಶಿವ ಭಕ್ತನೆಂಬುದು ನನಗೂ ಗೊತ್ತಿದೆ. ಜಂಗಮರು ಬೇಡಿದ್ದನ್ನು ಹಿಂದೆ ಮುಂದೆ ನೋಡದೆ ಕೊಡುವಿ ಯೆಂಬುದನ್ನೂ ನಾನು ಕೇಳಿದ್ದೇನೆ. ಆದರೆ ನಾನು ಕೇಳಲಿರುವ ದಾನವು ಅತಿ ವಿಚಿತ್ರವಾಗಿದೆ. ಅದಕ್ಕಾಗಿ ನನಗೆ ಮಾತು ಕೊಡುವ ಮುನ್ನ ಪೂರ್ಣವಿಚಾರಮಾಡು. ಇಲ್ಲದಿದ್ದರೆ ಆ ಮೇಲೆ

ಪರಿತಪಿಸುವದು ಬೇಡ'' ಎಂದನು.

ಜಂಗಮನ ಮಾತುಗಳನ್ನು ಕೇಳಿ ಮಾನಕಂಜರನಿಗೆ ಅತಿ ಕಸಿವಿಸಿ ಯಾಯಿತು. ಈವರೆಗೆ ಅವನಿಗೆ ಯಾರೂ ಈರೀತಿ ನುಡಿದಿರಲಿಲ್ಲ. ಅದ ಕ್ಕಾಗಿ ಅವನು ಕೈಜೋಡಿಸಿ— "ಜಂಗಮ ಪ್ರಭುವೇ ! ಮಾನಕಂಜರನು ತಾವು ತಿಳಿದುಕೊಂಡಿರುವಷ್ಟು ಹೇಡಿಯಲ್ಲ. ತಾವು ಬೇಕಾದುದನ್ನು ಬೇಡಬಹುದು. ಬೇಡಿದ್ದನ್ನು ನೀಡಲು ನಾನು ಸದಾ ಸಿದ್ಧನಿದ್ದೇನೆ. ಈ ಬಗ್ಗೆ ಎಳ್ಳಷ್ಟೂ ಚಿಂತಿಸುವ ಕಾರಣವಿಲ್ಲ. ತಮ್ಮ ಇಚ್ಛೆಯನ್ನು ಪೂರ್ಣ ಮಾಡುವ ಹೊಣೆ ನನ್ನದು'' ಎಂದನು.

ಆಗ ಜಂಗಮನು ಮುಖದ ಮೇಲೆ ಕೃತಕ ನಗುವನ್ನು ತಂದು ಕೊಂಡು— "ಅಯ್ಯಾ ಭಕ್ತಶ್ರೇಷ್ಠಾ ! ನೀನು ಇಷ್ಟೊಂದು ಜುಲುಮೆ ಮಾಡುವೆ ಯೆಂದಾಗ ಹೇಳುತ್ತೇನೆ ಕೇಳು. ನನಗೆ ಧನ-ಧನಕಗಳೇನೂ ಬೇಕಿಲ್ಲ. ಆದರೆ ನಿನ್ನ ಮಗಳಾದ ಸೋಮಪ್ರಭೆಯ ಅತಿ ರಮಣೀಯ ವಾದ ಮುಡಿ........'' ಎಂದು ನುಡಿಯುತ್ತಿರುವಂತೆಯೇ ಆ ಜಂಗಮನು ಏನು ಬೇಡುತ್ತಿರುವನೆಂಬುದರ ಅರಿವು ಮಾನಕಂಜನಿಗಾಯಿತು.

ಲಗ್ನ ಮಂಟಪದಲ್ಲಿ ಕುಳಿತ ತನ್ನ ಒಬ್ಬಳೇ ಒಬ್ಬಳಾದ ಮಗಳ ಮಂಗಲ ಸೂಚಕವಾದ ಮುಡಿಯನ್ನು ಆ ಜಂಗಮನು ಕೇಳಿದಾಗ ಮಾನ ಕಂಜರನಿಗೆ ವ್ಯಥೆಯಾಗಲಿಲ್ಲ. ಕೋಪವೂ ಬರಲಿಲ್ಲ. ಕೂಡಲೇ ಅವನು ತನ್ನ ಮಗಳ ಮುಡಿಯನ್ನು ಕೊಯ್ದು ಜಂಗಮನ ಪಾದಗಳಡಿಯಲ್ಲಿರಿಸಿ ದನು. ಲಗ್ನಮಂಟಪದಲ್ಲೆಲ್ಲ ಹಾಹಾಕಾರವೆದ್ದಿತು. ಎಲ್ಲರೂ ಜಂಗಮನ ಮೇಲೆ ಸಿಟ್ಟಾದರು. ತಂದೆ-ಮಗಳು ಮಾತ್ರ ಅದಾವುದನ್ನೂ ಗಮನಕ್ಕೆ ತಂದುಕೊಂಡಿರಲಿಲ್ಲ.

ಆಗ ಪರಮೇಶ್ವರನಿಗೆ ಅತ್ಯಂತ ಆನಂದವಾಗಿ ತನ್ನ ನಿಜರೂಪವನ್ನು ತೋರಿಸಿ, ಸೋಮಪ್ರಭೆಗೂ ಅವಳ ಪತಿಗೂ ಆಶೀರ್ವದಿಸಿ ಮಾನಕಂಜರ ನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನಿತ್ತನು.

ಧರೆನೋಡೆ ಹಸನಿಂದ ವರಸುತೆಯ ಮುಡಿಯನು ।
ತ್ತರಿಸಿ ಭವನಂಘ್ರಿ ದೊಲಿದಿತ್ತ ಮಾನಕಂ ।
ಜರನೊಪ್ಪಿ ಸಲಹುತಿರಲೆನ್ನ ।

—ಶ್ರೀ ನಿಜಗುಣ ಶಿವಯೋಗಿಗಳು.

# ೧೪. ಪಗಲ್ಚೋಳನು

ಚೋಳ ಮಂಡಲದ ಮಂಡಲಾಧಿಕನಾದ ವಿಕ್ರಮ ಚೋಳನು ಕಂಜಾರಪುರದ ಮಾನಕಂಜರನ ಮಗಳನ್ನು ತನ್ನ ಮಗ ಪಗಲ್ಚೋಳನಿಗೆ ತೆಗೆದುಕೊಂಡ ಹಾಗು ಮದುವೆಯ ಮಂಟಪದಲ್ಲಿ ಜರುಗಿದ ಸಂಗತಿಯನ್ನೂ ಹಿಂದೆ ಹೇಳಲಾಗಿದೆ. ಕಂಜಾರಪುರದಿಂದ ವಿಕ್ರಮಚೋಳನು ತನ್ನ ನಿಜ ನಗರಿಯಾದ ಕರಿಯೂರಿಗೆ ಆಗಮಿಸಿದ ನಂತರ ಆ ಅರಸನಿಗೆ ಮಾನಕಂಜರ ನಲ್ಲಿಯ ಈಶಭಕ್ತಿಯು ಬಗೆಗೆ ಗೌರವವು ಮೂಡಿ ಬಂದಿತು. ಅವನಲ್ಲಿಯ ಶಿವಭಕ್ತಿಯನ್ನು ಮೆಚ್ಚಿ ಇನ್ನು ಮುಂದೆ ತಾನೂ ಈಶಚಿಂತನೆಯಲ್ಲಿಯೇ ಕಾಲಕಳೆಯಬೇಕೆಂದು ನಿರ್ಧರಿಸಿ ತನ್ನ ಮಗ ಪಗಲ್ಚೋಳನಿಗೆ ಪಟ್ಟಾಭಿಷೇ ಕವನ್ನು ಮಾಡಿಸಿ ತನ್ನ ಪ್ರಧಾನಿ ಗಾಂಗೇಯನನ್ನು ಮಗನ ಬಳಿ ಬಿಟ್ಟು ತಾನು ಈಶ ಚಿಂತನೆಯಲ್ಲಿ ನಿರತನಾದನು.

ತಂದೆಯ ನಂತರ ಪಗಲ್ಚೋಳನು ಪ್ರಧಾನಿಯಾದ ಗಾಂಗೇಯನು ಹೇಳಿದಂತೆ ಚಾಚೂ ತಪ್ಪದೆ ಉತ್ತಮರೀತಿಯಿಂದ ರಾಜ್ಯಭಾರ ಮಾಡುತ್ತಿದ್ದನು. ಶಿವಭಕ್ತಳಾದ ಸೋಮಪ್ರಭೆಯನ್ನು ಮದುವೆಯಾದ ನಂತರ ಮೊದಲೇ ಶಿವಭಕ್ತನಾದ ಇವನಲ್ಲಿ ಮತ್ತಿಷ್ಟು ಭಕ್ತಿರಸವು ಉಕ್ಕತೊಡಗಿತು. ಅಲ್ಲದೆ ಈತನು ಹುಟ್ಟಾ ಶೈವನಾದುದರಿಂದ ಆ ಕಡೆಗೆ ಒಲಿಯುವದು ಕೂಡಾ ಸ್ವಾಭಾವಿಕವೇ ಆಗಿತ್ತು.

ಭಕ್ತಿಯಲ್ಲಿ ಆ ರೀತಿಯಿದ್ದರೂ ಪರಾಕ್ರಮದಲ್ಲಿ ಮಾತ್ರ ಇವನನ್ನು ಸರಿಗಟ್ಟುವವರು ಯಾರೂ ಇರಲಿಲ್ಲ. ರಣರಂಗದಲ್ಲಿ ಶತ್ರುಗಳಿಗೆ ಅತಿ ಭಯಂಕರನಾಗಿ ಸಾಕ್ಷಾತ್ ಯಮನಂತೆ ಅವರನ್ನು ತುಂಡರಿಸುತ್ತಿದ್ದನು. ವಿಭೂತಿ-ರುದ್ರಾಕ್ಷಧಾರಿಗಳನ್ನು ಮಾತ್ರ ಅತ್ಯಂತ ಗೌರವದಿಂದ ಆದರಿಸಿ ಸತ್ಕರಿಸಿ ಕಳುಹಿಸುತ್ತಿದ್ದನು. ಈ ರೀತಿ ಕಾಲಯಾಪನೆ ಮಾಡುತ್ತಿರುವಾಗ ಮೊನೆಯಾಂಡನೆಂಬ ಓರ್ವ ಶಿವಭಕ್ತನು ಇವನಲ್ಲಿಗೆ ಬಂದು ನೆಲೆಸಿದನು.

ಈತನು ಕೂಡ ಮಹಾ ಶಿವಭಕ್ತ. (ಈತನ ಬಗೆಗೆ ಹಿಂದೆಯೇ ಹೇಳಿ

ರುವದರಿಂದ ಮತ್ತೆ ಅದು ಇಲ್ಲಿ ಅಪ್ರಸ್ತುತ) ಪಾಂಡ್ಯರೊಡನೆ ಮಾಡಿದ ಒಂದು ಯುದ್ಧದಲ್ಲಿ ಇವನು (ಮೊನೆಯಾಂಡನು) ಅವರನ್ನು ಸೋಲಿಸಿ ಅವರ ಸೈನ್ಯವು ದಿಕ್ಕೆಟ್ಟು ಓಡುವಂತೆ ಮಾಡಿ ಈಶನನುಗ್ರಹದೊಂದಿಗೆ ಗಣ ಪದವಿಯನ್ನೂ ಪಡೆದನು. ಈ ಸಂಗತಿಯನ್ನು ಕೇಳಿದ ನಂತರ ಪಗಲ್ಪೋಳ ನಲ್ಲಿಯ ಶಿವಭಕ್ತಿಯು ಇನ್ನೂ ಹೆಚ್ಚಾಯಿತು.

ಆಗ ಅವನು ಓಡಿಹೋಗುತ್ತಿರುವ ಪಾಂಡ್ಯರ ಸೇನೆಯಲ್ಲಿಯ ಸೈನಿಕರ ಒಂದೊಂದು ಶಿರವನ್ನು ತಂದವರಿಗೆ ಒಂದೊಂದು ಬಂಗಾರದ ವರಹವನ್ನು ಕೊಡುವದಾಗಿ ಸಾರಿದನು. ಕೇಳುವದೇನು? ಚೋಳ ಮಂಡಲದ ಸೈನಿಕರು ಓಡಿಹೋಗುತ್ತಿದ್ದ ಪಾಂಡ್ಯರ ಸೈನ್ಯವನ್ನು ಯಮನಂತೆ ಬೆನ್ನಟ್ಟಿ ಶಿರಗಳನ್ನು ಕತ್ತರಿಸತೊಡಗಿದರು.

ಬಂಗಾರದ ವರಹವು ದೊರೆಯುವದೆಂಬ ಲೋಭದಿಂದ ಓರ್ವ ಸೈನಿಕನು ಭಸ್ಮ-ರುದ್ರಾಕ್ಷಧಾರಿಯಾದ ಓರ್ವ ಸೈನಿಕನ ರುಂಡವನ್ನು ಕತ್ತರಿಸಿ ಕೊಂಡು ಬಂದನು. ಅರಿಗಳ ರುಂಡಗಳನ್ನು ಕತ್ತರಿಸಿ ತಂದ ತನ್ನ ಸೈನಿಕರಿಗೆ ಬಹುಮಾನ ಕೊಡಲೋಸುಗ ಪಗಲ್ಪೋಳನು ಒಡ್ಡೋಲಗವನ್ನು ನೆರೆಯಿಸಿ ಒಬ್ಬೊಬ್ಬರಿಗೆ ಬಂಗಾರದ ವರಹಗಳನ್ನು ಹಂಚತೊಡಗಿದನು. ಕೊನೆಗೆ ಪಗಲ್ಪೋಳನ ಕೈಗೆ ಭಸ್ಮ-ಹಾಗು ರುದ್ರಾಕ್ಷಗಳನ್ನು ಧರಿಸಿದ ರುಂಡವು ಬಂದಿತು.

ಅದನ್ನು ಕಂಡೊಡನೆ ಅವನೀಶನಿಗೆ ಅತಿಶಯ ದುಃಖವಾಯಿತು. ಹೊನ್ನಿನ ಆಶೆಗಾಗಿ ತನ್ನವರು ಈ ಭಕ್ತನ ರುಂಡವನ್ನು ಚಂಡಾಡಿದರಲ್ಲ! ಎಂದು ಮರಮರನೆ ಮರುಗಿದನು. ಕೊನೆಗೆ ಆ ರುಂಡವನ್ನು ಸಿಂಹಾಸನದ ಮೇಲಿರಿಸಿ ಪೂಜಿಸಿದನು. ಇದನ್ನು ಕಂಡು ಒಡ್ಡೋಲಗದಲ್ಲಿ ನೆರೆದಿರುವವರಿಗೆಲ್ಲ ಅಚ್ಚರಿಯಾಯಿತು. ಆದರೂ ಪಗಲ್ಪೋಳನು ಅವರತ್ತ ಗಮನವೀಯದೆ ತನ್ನ ಕಾರ್ಯವನ್ನು ನಡೆಯಿಸಿದನು.

ಶಿವಭಕ್ತನ ರುಂಡವನ್ನು ಕತ್ತರಿಸಿರುವದರಿಂದ ತನ್ನಲ್ಲಿಯ ಶಿವಭಕ್ತಿಗೇ ಚ್ಯುತಿ ಬಂದಿತೆಂದು ಅವನು ಭಾವಿಸಿ, ಅದಕ್ಕೆ ಪ್ರತಿಯಾಗಿ ತನ್ನ ಶಿರವನ್ನೇ ಕತ್ತರಿಸಿ ಕೊಳ್ಳುವದು ಯೋಗ್ಯವೆಂದು ತೋರಿತು. ಆ ವಿಚಾರವು ಮನದಲ್ಲಿ ಬಂದುದೇ ತಡ ಕ್ಷಣವೂ ವಿಲಂಬ ಮಾಡದೆ ತನ್ನ ಖಡ್ಗವನ್ನು ಒರೆ

ಯಿಂದ ಹಿರಿದು ತನ್ನ ಕತ್ತನ್ನೇ ಕತ್ತರಿಸಿಕೊಂಡನು. ಆ ವೀರನಲ್ಲಿಯ ಈ ರೀತಿಯ ಭಕ್ತಿಭಾವವನ್ನು ಕಂಡು ದೇವತೆಗಳು ಉಘೆ-ಉಘೆ ಎಂದು ಅವನನ್ನು ಹರಿಸಿದರು.

ಅವನ ಭಕ್ತಿಗೆ ಮೆಚ್ಚಿ ಪರಮೇಶ್ವರನೂ ಪ್ರಸನ್ನನಾಗಿ ಬೇಕಾದ ವರವನ್ನು ಬೇಡೆನ್ನಲು ಪಗಲ್ಪೊಳನು ಆ ಶಿವಭಕ್ತನನ್ನು ಬದುಕಿಸಿ ನನ್ನನ್ನೂ ನನ್ನ ಪತ್ನಿಯನ್ನೂ ಕಾಪಾಡು, ಎಂದು ಪರಮೇಶ್ವರನಲ್ಲಿ ಮೊರೆಹೊಕ್ಕನು. ಆಗ ಪರಮೇಶ್ವರನು ಶಿವಭಕ್ತನನ್ನು ಬದುಕಿಸಿ ಅವನಿಗೂ ಆ ದಂಪತಿಗಳಿಗೂ ಕೈಲಾಸಕ್ಕೆ ಕರೆದೊಯ್ದು ಶಾಶ್ವತವಾದ ಗಣಪದವಿಯನ್ನಿತ್ತು ಕಾಪಾಡಿದನು.

ಜಡತಲೆಗೆ ತನ್ನ ಶಿರ ಮುಡಿದಲೆಯನಿತ್ತು ಶಿವ ।
ನಡಿಗೆ ಸಲೆ ಸಂದಕಲಿ ಪಗಲ್ಪೊಳನೀ ।
ನೆಡೆಗೊಂಡಿರೆನ್ನ ಮನದಲ್ಲಿ ॥

—ಶ್ರೀ. ನಿಜಗುಣ ಶಿವಯೋಗಿಗಳು.

# ೧೫. ಕಲಿಕಾಮ ದೇವರು

ತಿರುನಲ್ಲೂರು ಪಟ್ಟಣವು ಶಿವಭಕ್ತರ ತವರುಮನೆಯಾಗಿತ್ತು. ಆ ನಗರವನ್ನು ಪರಿಪಾಲಿಸುವ ದೊರೆ ಕಲಿಕಾಮನಂತೂ ತುಂಬಾ ಶಿವಭಕ್ತ. ಶಿವಾರ್ಚನೆ ಗೈಯದವರನ್ನೂ ದುರ್ಮಾರ್ಗಿಗಳನ್ನೂ ಶಿಕ್ಷಿಸುವದರಲ್ಲಿ ಕಲಿ ಕಾಮನದು ಎತ್ತಿದ ಕೈ ಯಾಗಿತ್ತು. ಅದರಂತೆ ಗುರುಲಿಂಗ ಜಂಗಮರನ್ನು ಆದರಿಸಿ ಸತ್ಕರಿಸುವಲ್ಲಿಯೂ ಅವನು ಅಗ್ರಗಣ್ಯನಾಗಿದ್ದನು.

ಈ ರೀತಿಯಾಗಿ ರಾಜ್ಯಭಾರ ಮಾಡುತ್ತಿರಲು ತಿರುವಾನೂರಿನಲ್ಲಿಯ ಸೌಂದರ ನಂಬಿಯೆಂಬ ಅವನೀಶನು ತನ್ನಲ್ಲಿಯ ಭಕ್ತಿಯಿಂದ ಈಶ್ವರನನ್ನು ತನ್ನದಾಸನನ್ನಾಗಿ ಮಾಡಿಕೊಂಡಿರುವನೆಂಬ ಸಂಗತಿಯನ್ನು ಕೇಳಿ ಇವ ನಿಗೆ ಕಸಿವಿಸಿಯಾಯಿತು. ನಂಬಿಯ ದಾಸ್ಯತ್ವವನ್ನು ಸ್ವೀಕರಿಸಿದ ಶಂಕರ ನಿಗೆ ಎಷ್ಟು ಸಂಕಟವಾಗುತ್ತಿರಬಹುದು ? ಅವನ ಕಾರ್ಯಗಳನ್ನು ಮಾಡಲು ಆ ಮಹಾದೇವನ ಅಂಗಾಂಗಗಳಿಗೆ ಎಷ್ಟೊಂದು ನೋವಾಗು ತ್ತಿರಬಹುದು ಎಂದು ಮನದೊಳಗೇ ಹಲುಬಿ ಅವನೊಂದಿಗೆ ಯುದ್ಧ ಮಾಡಿ ಬುದ್ಧಿಗಲಿಸಬೇಕೆಂದು ನಿರ್ಧರಿಸಿದನು.

ಹೀಗಿರಲೊಂದು ದಿನ ಓರ್ವಯಾಂತ್ರಿಕನು ತಿರುನಲ್ಲೂರಿಗೆ ಬರಲು ಕಲಿಕಾಮನು ಅವನನ್ನು ಎಲ್ಲಿಂದ ಬಂದಿರುವದಾಗಿ ಪ್ರಶ್ನಿಸಲು ಅವನು ತಿರುವಾನೂರಿನಿಂದ ಸೌಂದರ ನಂಬಿಯ ದರ್ಶನಪಡೆದು ಬಂದಿರುವದಾಗಿ ಹೇಳಿದನು. ಅವನ ಮಾತುಗಳನ್ನು ಕೇಳಿದೊಡನೆ ಕಲಿಕಾಮನಿಗೆ ವಿಪ ರೀತ ಕೋಪ ಬಂದಿತು. ಕೂಡಲೆ ಅವನು ಹಿಂದೆ ಮುಂದೆ ವಿಚಾರ ಮಾಡದೆ ಆ ಯಾಂತ್ರಿಕನ ಶಿರವನ್ನು ಕತ್ತರಿಸಿ ಬಿಟ್ಟನು. ತಮ್ಮೊಡೆಯನ ಈ ರೀತಿಯ ವಿಚಿತ್ರ ವರ್ತನೆಯನ್ನು ಕಂಡು ಎಲ್ಲರೂ ಅಚ್ಚರಿಗೊಂಡರು.

ಇದೇ ರೀತಿಯಾಗಿ ಸೌಂದರ ನಂಬಿಯ ದರ್ಶನ ಪಡೆದು ಬಂದವರ ನ್ನೆಲ್ಲ ಕಲಿಕಾಮನು ಸಂಹರಿಸ ತೊಡಗಿದನು. ಈ ಸಂಗತಿಯು ಸೌಂದರ ನಂಬಿಗೂ ತಲುಪಿತು ಆಗ ಅವನು ಕುಪಿತನಾಗಿ ಸೇನೆಯೊಂದಿಗೆ ಬಂದು

ಕಸಕಾಮನ ನಗರ ಮುತ್ತಿದನು. ಕಲಿಕಾಮನಿಗೂ ಇದೇ ಬೇಕಾಗಿದ್ದಿತು. ಕೂಡಲೇ ಇವನೂ ತನ್ನ ಸೇನೆಯೊಂದಿಗೆ ಯುದ್ಧಕ್ಕೆ ಅಣಿಯಾದನು. ಈರ್ವರಲ್ಲಿಯೂ ತುಮುಲ ಯುದ್ಧ ನಡೆದು ಕೊನೆಗೆ ಸೌಂದರ ನಂಬಿಯು ಸೋತು ಓಡಿ ಹೋದನು.

ಇವನಲ್ಲಿಯ ಭಕ್ತಿಯನ್ನು ಪರೀಕ್ಷಿಸಲೋಸುಗ ಶಂಕರನು ಒಂದು ಸಲ ಜಂಗಮನ ವೇಷಧರಿಸಿ ಅವನ ಬಳಿಬಂದನು. ಆಗ ಕಲಿಕಾಮನು ಜಂಗಮ ರೂಪಧಾರಿಯಾದ ಶಿವನನ್ನು ಆದರೋಪಚಾರಗಳಿಂದ ಸತ್ಕರಿಸಿ ಉಡುಗೊರೆಗಳನ್ನಿತ್ತು, ಅನಂತರ ಎಲ್ಲಿಂದ ಆಗಮಿಸಿರುವಾಗಿ ಪ್ರಶ್ನಿಸಿದನು. ಆಗ ಆ ಜಂಗಮನು ಅವನಿತ್ತ ಉಡುಗೊರೆಗಳನ್ನು ಭದ್ರವಾಗಿ ಹಿಡಿದು ಕೊಂಡು ಎದ್ದು ಓಡಿಹೋಗುವ ಹವಣಿಕೆಯಲ್ಲಿ ನಿಂತುಕೊಂಡು, ಸೌಂದರ ನಂಬಿಯಲ್ಲಿರುವುದಾಗದೇ ಬಂದುಬಿಟ್ಟೆ ಎಂದು ನುಡಿದವನೇ ಓಡತೊಡಗಿದನು.

ಕಲಿಕಾಮನಿಗೆ ಜಂಗಮನ ಮೇಲೆ ಕೋಪ ಬಂದಿತು. ಖಡ್ಗವನ್ನು ಹಿಡಿದು ಅವನನ್ನು ಬೆನ್ನಟ್ಟಿದನು. ಇನ್ನೇನು ಕೈಗೆಸಿಕ್ಕುಬಿಟ್ಟ ಎನ್ನುವಷ್ಟರಲ್ಲಿ ಆ ಜಂಗಮನು ಮತ್ತೆ ದೂರಹೋಗುತ್ತಿದ್ದ ಈ ರೀತಿಯಾಗಿ ಓಡುತ್ತಿದ್ದ ಆ ಜಂಗಮನು ಸೌಂದರ ನಂಬಿಯ ಸೀಮೆಯೊಳಗೆ ಕಾಲಿರಿಸಲು ಆ ಪಾಪಿಯ ಸೀಮೆಯಲ್ಲಿ ನಾನು ಪಾದವನ್ನಿರಿಸಲಾರೆನೆಂದುಕೊಂಡು ಕಲಿಕಾಮನು ತನ್ನ ನಗರಕ್ಕೆ ಮರಳಿದನು.

ಯುದ್ಧದಲ್ಲಿ ಕಲಿಕಾಮನಿಂದ ಪರಾಭವ ಹೊಂದಿದನಂತರ ಸೌಂದರ ನಂಬಿಯು ಅತ್ಯಂತ ದುಃಖಿತನಾಗಿ ಮಹಾದೇವನಲ್ಲಿ ಮೊರೆಯಿಟ್ಟನು. ಆಗ ಭಕ್ತವತ್ಸಲನಾದ ಶಂಕರನು— "ವತ್ಸಾ ! ನೀನು ದುಃಖಿಸಬೇಡ ಕಲಿಕಾಮನ ಕಾಯಕದ ಅರಿವು ನಿನಗಿಲ್ಲ. ಅದಕ್ಕೆಂದೇ ನೀನು ಈ ರೀತಿ ದುಃಖಿಸುತ್ತಿರುವೆ. ಅವನಲ್ಲಿಯ ಭಕ್ತಿ ಯಾವರೀತಿಯಿಂದಿದೆಯೆಂಬುದನ್ನು ನೀನೇ ಕಣ್ಣಿಂದ ನೋಡುವೆಯಂತೆ. ನನ್ನ ಜೊತೆಗೆ ನಡೆ ಎಂದು ಅವನೊಂದಿಗೆ ವೇಷ ಮರೆಸಿಕೊಂಡು ಕಲಿಕಾಮನ ನಗರಕ್ಕೆ ತೆರಳಿದರು. ಕಲಿಕಾಮನನ್ನು ಭೆಟ್ಟಿಯಾಗುವ ಮುನ್ನ ಅವನಿಗೆ ತಡೆಯಲಾಗದ ಹೊಟ್ಟೆ ನೋವು ಬರುವಂತೆ ಮಾಡಿದನು.

ತನ್ನ ಉದರದಲ್ಲಿ ಅತೀವ ವೇದನೆಯಾಗುತ್ತಿದ್ದರೂ ಅದನ್ನು ಲಕ್ಷಕ್ಕೆ ತಾರದೆ ಬಾಗಿಲಿಗೆ ಬಂದ ಜಂಗಮರನ್ನು ಕಲಿಕಾಮನು ಆದರದಿಂದ ಸತ್ಕರಿಸಿ, ಉಪಚರಿಸಿ ಅವರ ಪಾದೋದಕಗಳನ್ನು ಸ್ವೀಕರಿಸಿದ ನಂತರ ಅವನು ವಾಡಿಕೆಯಂತೆ ಎಲ್ಲಿಂದ ಬಂದಿರುವದಾಗಿ ಪ್ರಶ್ನಿಸಿದನು. ಆಗ ಜಂಗಮರೂಪಿಯಾದ ಶಿವನು— "ಅಯ್ಯಾ ಕಲಿಕಾಮನೇ ! ಈತನೇ ಸೌಂದರ ನಂಬಿಯು. ಈತನ ನಗರದಿಂದಲೇ ಬಂದಿದ್ದೇವೆ'' ಎನ್ನಲು ಕಲಿಕಾಮನು ಅತ್ಯಂತ ಕುಪಿತನಾಗಿ ಖಡ್ಗವನ್ನು ಒರೆಯಿಂದ ಹಿರಿದು ನಂಬಿಯ ಶಿರವನ್ನು ಕತ್ತರಿಸಲು ಮುಂದುವರಿದನು.

ಅವನಲ್ಲಿಯ ಭಕ್ತಿಗೆ ಮೆಚ್ಚಿದ ಶಂಕರನು ತನ್ನ ನಿಜರೂಪವನ್ನು ತೋರಿಸಲು ಕಲಿಕಾಮನು ತನ್ನನ್ನು ಕ್ಷಮಿಸಬೇಕೆಂದು ಈಶ್ವರನ ಪಾದಕ್ಕೆರಗಿದನು ಆಗ ಶಂಕರನು— "ವತ್ಸಾ ! ನಿನ್ನಂತೆಯೇ ಸೌಂದರ ನಂಬಿಯೂ ನನ್ನಭಕ್ತ, ಭಕ್ತನ ಮನೆಯಲ್ಲಿ ಆಳಾಗಿರಲು ನನಗೇನೂ ನೋವಾಗುವದಿಲ್ಲ. ಆ ಚಿಂತೆಯನ್ನು ನೀನು ಬಿಡು. ನಾನು ಜಗದೊಡೆಯನಾಗಿದ್ದರೂ ಭಕ್ತರ ದಾಸನಾಗಿದ್ದೇನೆ" ಎಂದು ಹೇಳಿ ಅವನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ದಯಪಾಲಿಸಿದರು.

ಶಿವನ ಮೆಲ್ಲಡಿ ನೋಯಲವ ನಿಯೊಳು ನಡಿಸುತಿರೆ ।
ತವೆ ಮುಳಿದು ನಂಬಿಯೊಳು ಸಂಡಕಲಿಕಾಮು ।
ನವಿರತಂಲೇಸು ಗೊಡಲೆನಗೆ ॥

—ಶ್ರೀ ನಿಜಗುಣ ಶಿವಯೋಗಿಗಳು.

# ೧೬. ತಿರುಮೂಲ ದೇವರು

ಪೂರ್ವ ಕಾಲದಲ್ಲಿ ಸದೃಢನೂ, ಬಲವಂತನೂ ಆದ ಓರ್ವ ದನ ಗಾಹಿ ಯಿದ್ದನು. ಆತನೂ ದನಗಳನ್ನು ಕಾಯುವ ಹೋರೆಯನ್ನೇ ಮಾಡಿ ಕೊಂಡು ತನ್ನ ಪತ್ನಿಯೊಂದಿಗೆ ಸುಖದಿಂದಿದ್ದನು. ಒಂದು ದಿನ ಅವನು ದನಗಳನ್ನು ಮೇಯಿಸಲು ಕಾನನಕ್ಕೆ ಹೋದಾಗ ಸರ್ಪದಂಶದಿಂದ ಅಸುವ ನೀಗಿದನು.

ಅದೇ ಮಾರ್ಗವಾಗಿ ಸಂಚರಿಸುತ್ತಿದ್ದ ಓರ್ವ ಸಿದ್ಧನು ಸತ್ತುಬಿದ್ದಿ ರುವ ಆ ದನಕಾಯುವವನ ಸುಂದರ ದೇಹವನ್ನುಕಂಡು ಮೋಹಿತನಾಗಿ ತಾನೂ ಅವನ ದೇಹದೊಳಗೆ ಪ್ರವೇಶಿಸಬೇಕೆಂಬ ಇಚ್ಛೆಯುಂಟಾಯಿತು. ಪರಕಾಯ ಪ್ರವೇಶ ವಿದ್ಯೆಯಲ್ಲಿ ಪಾರಂಗತನಾದ ಸಿದ್ಧನಿಗೆ ಆ ರೀತಿಯ ಇಚ್ಛೆಯಾಮದೇ ತಡ. ತತ್ಕ್ಷಣವೇ ಅವನ ದೇಹದೊಳಗೆ ಪ್ರವೇಶಿಸಿ ತನ್ನ ಕಾಯವನ್ನು ಒಂದೆಡೆ ಬಚ್ಚಿಟ್ಟನು.

ಅವನ ದೇಹದೊಳಗೆ ಪ್ರವೇಶಿಸಿದ ನಂತರ ಚದುರಿ ಹೋದ ದನ ಗಳನ್ನೆಲ್ಲ ಒಟ್ಟುಗೂಡಿಸಿ ಊರೊಳಗೆ ಹೊಡೆದುಕೊಂಡು ಹೋದನು. ಅನಂತರ ಮುಂದೇನು ಮಾಡಬೇಕೆಂಬುದು ತಿಳಿಯದೆ ಒಂದು ಗಿಡದ ಬುಡದಲ್ಲಿ ನಿಂತುಕೊಂಡು ಯೋಚಿಸತೊಡಗಿದನು. ಇದನ್ನು ಕಂಡು ಸಿದ್ಧನ ಕಾರ್ಯಗಳನ್ನು ಅರಿಯದ ದನ ಕಾಯುವವನ ಪತ್ನಿಯು ತನ್ನ ಪತಿಯು ಮನೆಗೆ ಬಾರದೆ ಗಿಡಬಳಿ ನಿಂತಿರುವ ಕಾರಣವೇನಿರಬಹುದು ? ಬಹುಶಃ ಅವನಿಗೆ ಹುಚ್ಚು ಹಿಡಿದಿರಬೇಕೆಂದು ಯೋಚಿಸಿದಳು. ಊರೊಳ ಗಿನ ಜನರನ್ನು ಕೂಡಿಸಿ ಅವರೆದುರು ತನ್ನ ಮನದೊಳಗಿನದೆಲ್ಲವನ್ನು ತೋಡಿಕೊಂಡಳು.

ಆ ಹೆಂಗಸಿನ ಚಲನವಲನಗಳನ್ನು ಕಂಡು ಸಿದ್ಧನಿಗೆ ಗಾಬರಿಯಾ ಯಿತು. ಮುಂದೇನು ಮಾಡಬೇಕೆಂಬುದು ಗೊತ್ತಾಗದೆ ಕಾನನದ ಕಡೆಗೆ ಧಾವಿಸಿ ತನ್ನ ಕಳೇಬರವನ್ನು ಶೋಧಿಸತೊಡಗಿದನು. ಅದನ್ನು ಕಾನನ

ದೊಳಗಿನ ಹಿಂಸ್ರ ಪಶುಗಳು ನಾಶ ಮಾಡಿ ಬಿಟ್ಟಿದ್ದವು. ಸಿದ್ಧನಿಗೆ ತೊಂದರೆ ಗಿಟ್ಟಿಕೊಂಡಿತು. ಆಗ ಅವನು ಶಿವನನ್ನು ಕುರಿತು ಪ್ರಾರ್ಥಿಸತೊಡಗಲು ಅವನಿಗೆ ಪೂರ್ವದಲ್ಲಿ ಮಾಡಿದ ಪುಣ್ಯ ಬಲದಿಂದ ಶಿವಲಿಂಗದ ಭಕ್ತಿಯು ಉತ್ಪನ್ನವಾಯಿತು. ಅಗ ಅವನು ಶಿವಾಲಯಕ್ಕೆ ಹೋಗಿ ಶಿವಪೂಜೆಯನ್ನು ಪ್ರಾರಂಭಿಸಿದನು.

ಅನಂತರ ಅವನ ಮನದಲ್ಲಿ ಸುರಭಿಯ ಕ್ಷೀರದಿಂದ ಶಿವಲಿಂಗವನ್ನು ಮಜ್ಜನ ಮಾಡಿಸಬೇಕೆಂಬ ಇಚ್ಛೆಯು ಪ್ರಬಲನಾಯಿತು. ಆಗ ಅವನು ದೇವದೇವನಾದ ಮಹಾದೇವನನ್ನು ಕುರಿತು— "ಹೇ ಶಂಭೋ ಶಂಕರಾ ! ಭಕ್ತ ವತ್ಸಲಾ ! ನಿನಗೆ ಸುರಭಿಯ ಕ್ಷೀರದಿಂದ ಅಭಿಷೇಕ ಮಾಡಿಸುವ ಇಚ್ಛೆಯಾಗಿದೆ. ಅದಕ್ಕಾಗಿ ನೀನು ನನಗೊಂದು ಸುರಧೇನು ಕೊಟ್ಟು ಕಾಪಾಡು'' ಎಂದು ನಾನಾವಿಧವಾಗಿ ಬೇಡಿಕೊಳ್ಳತೊಡಗಿದನು.

ತಿರುಮೂಲನ ಬೇಡಿಕೆಯು ಶಂಕರನ ಕಿವಿಗೆ ಬಿದ್ದರೂ ಅವನು ಕೇಳ ದವರಂತೆ ಸುಮ್ಮನೆ ಕುಳಿತುಕೊಂಡಿರುವದನ್ನು ಕಂಡು ಶಂಕರಿಗೆ ಅಚ್ಚರಿ ಯಾಯಿತು. ಕೂಡಲೇ ಅವಳು, '' ಜಗನ್ನಿಯಾಮಕನೇ! ನಿನ್ನ ಭಕ್ತನು ಅಲ್ಲಿ ಸುರಧೇನುವಿಗಾಗಿ ಗೋಳಾಡುತ್ತಿರುವದನ್ನು ಕಂಡೂ ನೀನು ಈ ರೀತಿ ಸುಮ್ಮನೆ ಕುಳಿತುಕೊಳ್ಳುವದೇ ? ನನಗಂತೂ ಇದು ಸರಿ ಕಾಣುವ ದಿಲ್ಲ '' ಎಂದಳು.

ಅವಳ ಮಾತುಗಳನ್ನು ಕೇಳಿ ಶಂಕರನು ನಕ್ಕು, ಆ ಭಕ್ತನ ಮೇಲೆ ನಿನಗೆ ಅಷ್ಟೊಂದು ಕರುಣೆ ಉತ್ಪನ್ನವಾಗಿದ್ದರೆ ನೀನೇ ಅವನಿಗೊಂದು ಸುರ ಧೇನುವನ್ನು ದಯಪಾಲಿಸಿ ಬಿಡು " ಎನ್ನಲು ಆ ಜಗನ್ಮಾತೆಯು ಅದೇ ರೀತಿ ಆ ತಿರುಮೂಲನಿಗೆ ಒಂದು ಸುರಧೇನುವನ್ನು ಅನುಗ್ರಹಿಸಿದಳು.

ಆಗ ತಿರುಮೂಲನು ಭಯಭಕ್ತಿಯಿಂದ ಸುರಧೇನುವನ್ನು ಸ್ವಾಗತಿಸಿ ಪರಮೋತ್ಸಾಹದಿಂದ ಶಿವಲಿಂಗದ ಮೇಲೆ ಆ ಧೇನುವಿನ ಕೆಚ್ಚಲು ನೀಟಾ ಗುವಂತೆ ನಿಲ್ಲಿಸಿ ಹಾಲುಕರೆಯತೊಡಗಿದನು. ಹಾಲಿನ ಪ್ರಮಾಣವು ಹೆಚ್ಚಾಗಿ ಮಡುಗಟ್ಟತೊಡಗಿತು. ಉತ್ಸಾಹಿತನಾದ ತಿರುಮೂಲನು ಭಕ್ತಿ ಯುಬ್ಬರದಲ್ಲಿ ಹುಚ್ಚನಂತಾಗಿ ಆ ಹಾಲ್ಗಡಲಿನಲ್ಲೇ ಈಜಾಡತೊಡಗಿದನು.

ಭಕ್ತಿಯ ಆವೇಶದಲ್ಲಿ ಅಭಿಷೇಕ ಮಾಡುತ್ತಿದ್ದಂತೆ ವೈಮರೆತ ಭಕ್ತ

ನನ್ನು ಕಂಡು ಶಂಕರನಿಗೂ ಹರ್ಷವಾಯಿತು. ಕೂಡಲೇ ಅವನು ಸುರಭಿಯನ್ನೊದಗಿಸಿದ ತನ್ನಲ್ಲಡಗಿಸಿಕೊಂಡಿರುವೆನೆಂಬುದನ್ನು ಜಗತ್ತಿಗೆ ತೋರಿಸಲೋಸುಗವೋ ಏನೋ ಅರ್ಧನಾರೀಶ್ವರನ ರೂಪದಿಂದ ತಿರುಮೂಲನಿಗೆ ದರ್ಶನವನ್ನಿತ್ತನು. ಮಹಾಮಹಿಮನ ರೂಪವನ್ನು ಕಂಡು ಆ ಭಕ್ತಶಿರೋಮಣಿಯು ಅವನ ಪಾದಗಳ ಮೇಲೆ ಬಿದ್ದು ಹೊರಳಾಡತೊಡಗಿದನು.

ಆಗ ಮಹಾದೇವನು ಆ ಭಕ್ತನನ್ನು ಹಿಡಿದೆತ್ತಿ ಮೈದಡವಿ ಅವನನ್ನು ಕೈಲಾಸಕ್ಕೆ ಕರೆದೊಯ್ದು ಶಾಶ್ವತ ಗಣಪದವಿಯನ್ನು ಅನುಗ್ರಹಿಸಿದನು.

ಪರಮಂಗೆ ಪಾಲ್ಗರೆಯೆ ಗಿರಿಜೆ ಪಶುವೇಷವಂ ॥
ಧರಿಸಿ ಬರೆಕಾಯ್ದ ಕರುಣಸಾಗರನೆನಿಪ ॥
ತಿರುಮೂಲರೆನ್ನ ಸುರಧೇನು ॥

—ಶ್ರೀ. ನಿಜಗುಣ ಶಿವಯೋಗಿಗಳು.

## ೧೭. ಪಗಲ್ತೊಣೆಯಾಂಡರು

ದಕ್ಷಿಣ ಭಾರತದ ಚೋಳರಾಜ್ಯದಲ್ಲಿ ತಿರುವಂತಿ ಊರು ಎಂಬ ಪುರವು ಶಿವಭಕ್ತರಿಂದ ತುಂಬಿತುಳುಕುತ್ತಿತ್ತು. ಮಹಾ ಶಿವಭಕ್ತನಾದ ಪಗಲ್ತೊಣೆಯಾಂಡನು ಕೂಡ ಇದೇ ನಗರದಲ್ಲಿ ವಾಸಿಸುತ್ತಿದ್ದನು. ಈತನ ಅಭಿಷೇಕದ ವಿಧಾನವು ಎಲ್ಲಿರೂ ಅಚ್ಚರಿಪಡವಂತಹದಾಗಿತ್ತು.

ಈತನು ಪ್ರತಿ ದಿನ ಶಿವಲಿಂಗಾಭಿಷೇಕಕ್ಕಾಗಿ ಒಂದೊಂದು ಹೊಸ ಒರತೆಗಳನ್ನು ತೋಡಿಸಿ ಅದರೊಳಗಿಂದ ಶುದ್ಧ ಜಲವನ್ನು ಉಪಯೋಗಿಸಿ ಕೊಳ್ಳುತ್ತಿದ್ದನು. ಅಭಿಷೇಕಕ್ಕಾಗಿ ದಿನಂಪ್ರತಿ ಒಂದೊಂದು ಒರತೆಯನ್ನು ತೋಡುವದೆಂದರೆ ಯಾರಿಗೆ ಅಚ್ಚರಿಯಾಗಲಿಕ್ಕಿಲ್ಲ? † ಈ ರೀತಿಯಾಗಿ ಅವನು ಶಿವಪೂಜೆಯನ್ನು ಮಾಡಿ ಅದರಿಂದ ತನಗಾಗುವ ಆನಂದವನ್ನು ಶಿವಾರ್ಪಣ ಮಾಡಿ ದಿನದಿನಕ್ಕೆ ಪುಣ್ಯಸಂಚಯ ಮಾಡಿಕೊಳ್ಳುತ್ತಿದ್ದನು.

ಶಂಕರನಿಗೆ ಈ ಭಕ್ತನನ್ನೂ ಪರೀಕ್ಷಿಸಬೇಕೆಂಬ ಹಂಬಲವು ಉಂಟಾಯಿತು. ಮಾಘ ಮಾಸ. ಬಿಸಿಲು ಪ್ರಾರಂಭವಾಯಿತು. ಎಲ್ಲೆಡೆಗೂ ಉಗ್ರಶಿಖೆಯು ಪ್ರಾರಂಭವಾಯಿತು. ಮಾಘ ಮಾಸಕ್ಕೇ ಈ ರೀತಿಯಾದರೆ ಮುಂದೇನು ಗತಿ ಶಿವನೇ ಎಂದು ಜನ ಆಕಾಶವನ್ನು ನೋಡತೊಡಗಿತು.

ಫಾಲ್ಗುಣ ಮಾಸದಲ್ಲಿ ಬಿಸಿಲು ಇನ್ನೂ ಹೆಚ್ಚಾಯಿತು. ಕೆರೆಬಾವಿಗಳು ಬತ್ತ ತೊಡಗಿದವು. ದನಕರುಗಳಿಗೆ ಕುಡಿಯಲು ನೀರು ಸಿಕ್ಕದಂತಾಯಿತು. ಬಿಸಿಲಿನ ಬೇಗೆಯನ್ನು ತಾಳಲಾರದೆ ಭೂಮಿಯು ಬಿರಿಯತೊಡಗಿತು. ಜನರಲ್ಲಿ ಹಾಹಾಕಾರವು ಉತ್ಪನ್ನವಾಯಿತು. ದಾರಿಕಾರರಂತೂ, ಬಿಸಿಲಿನ ಬೇಗೆಯಿಂದ ಬಸವಳಿದು ಕುಡಿಯಲು ನೀರಿಲ್ಲದೆ ನಾಲಿಗೆ ಕಿತ್ತಿಕೊಂಡು ಪ್ರಾಣಬಿಡುವಂತಾಯಿತು. ಆದರೂ ಮೇಘರಾಜನು ಕರುಣೆ ತೋರಲಿಲ್ಲ.

---

† ಒರತೆಯ ನೀರು ಅತ್ಯಂತ ಪವಿತ್ರವಾಗಿದ್ದು ಅದು ೬೪ ಶೀಲಗಳಲ್ಲಿ ಒಂದಾಗಿದೆ.

ಚೈತ್ರ ಮಾಸವು ಬಂದಿತು. ಆದರೆ ಬಿಸಿಲು ಮಾತ್ರ ಕಡಿಮೆಯಾಗ ಲಿಲ್ಲ. ಅದರ ಬದಲು ಮೊದಲಿನ ಮೂರು ಪಟ್ಟು ಹೆಚ್ಚಾಯಿತು. ಈ ಸಲ ಮಾತ್ರ ಜನರು ಹೌಹಾರಿ ಬಿಟ್ಟರು. ಬದುಕುವ ಆಶೆಯನ್ನೂ ತೊರೆದರು. ಈ ಪರಿಸ್ಥಿತಿಯು ತಿರುವಂಜಲೂರಿಗೂ ಬಂದಿತು. ಅಲ್ಲಿಯ ಜಲಾಶಯಗ ಳೆಲ್ಲ ಬತ್ತಿ ಹೋದವು. ಆ ಶಿವಭಕ್ತರಿಗೆ ಪೂಜೆಗೋಸುಗ ಒರತೆಗಳಲ್ಲಿ ನೀರು ಸಿಗದಾಗಲು ಅವನು ತನ್ನನ್ನೇ ಲಿಂಗಕ್ಕರ್ಪಿಸಬೇಕೆಂದು ಯೋಚಿಸಿ ಶಿವ ಲಿಂಗಕ್ಕೆ ತಲೆಯನ್ನು ಅಪ್ಪಳಿಸತೊಡಗಿದನು. ಆಗ ಪರಮೇಶ್ವರನು ಪ್ರತ್ಯಕ್ಷನಾಗಿ ಭೂಮಿಗೆ ಮಳೆಬೀಳುವಂತೆ ಅನುಗ್ರಹಿಸಿ ಪಗಲ್ತೊಣೆಯಾಂಡ ನನ್ನು ಕೈಲಾಸಕ್ಕೆ ಕರೆದೊಯ್ದು ಅವನಿಗೆ ನಿಜ ಗಣಪದವಿಯನ್ನು ದಯ ಪಾಲಿಸಿದನು.

ಅಣುವಿಲ್ಲದಿರಲಗ್ಗವಣಿ ಶರ್ವ ನಂಘ್ರಿಯೊಳ ।
ಗೆಣಿಸಿ ಕೊಣ ದೊತ್ತು ಮಳೆಗಾಲಂ ಪಡೆದ ಪಗಲ್ ।
ತೊಣೆಯಾಂಡರೆನ್ನ ಸುಖಸಿಂಧು ॥

—ಶ್ರೀ. ನಿಜಗುಣ ಶಿವಯೋಗಿಗಳು.

# ೧೮. ಅರಿವಾಳ್ತಾಂಡರು

ದೈವಭಕ್ತರಿಂದ ರಾರಾಜಿಸುವ ಕಣ್ಣಮಂಗಲವೆಂಬ ಗ್ರಾಮದಲ್ಲಿ ಅರಿವಾಳ್ತಾಂಡನೆಂಬ ಶಿವಭಕ್ತನು ಶೂದ್ರರೊಳಗೆ ಜನಿಸಿ ಕೂಲಿನಾಲಿ ಮಾಡುತ್ತ ಶಿವಚಿಂತನೆಯಲ್ಲಿರುತ್ತಿದ್ದನು. ಕಣ್ಣಮಂಗಲ ಗ್ರಾಮದಿಂದ ಐದು ಮೈಲುಗಳ ಅಂತರದಲ್ಲಿರುವ ತಿರುನಲ್ಲೂರಿನ ಈಶ್ವರ ಮಂದಿರಕ್ಕೆ ಹೋಗಿಬರದ ವಿನಹ ಅರಿವಾಳ್ತಾಂಡನು ನೇವೇದ್ಯವನ್ನು ಸ್ವೀಕರಿಸು ತ್ತಿರಲಿಲ್ಲ.

ಕೂಲಿಯ ಕೆಲಸ ಮಾಡುತ್ತಿದ್ದ ಈ ಶಿವಭಕ್ತನನ್ನು ಎಲ್ಲ ಒಕ್ಕಲಿಗರೂ ಅತಿ ಆದರದಿಂದ ಕಾಣುತ್ತಿದ್ದರು. ಇವನನ್ನು ಕೆಲಸಕ್ಕೆ ಕರೆದುಕೊಂಡರೆ ಈಶನ ಅನುಗ್ರಹದಿಂದ ತಮಗೆ ಇಮ್ಮಡಿ ಲಾಭವಾಗುವದೆಂಬುದು ಎಲ್ಲ ರಿಗೂ ಗೊತ್ತಾಗಿತ್ತು. ಅದಕ್ಕಾಗಿ ಎಲ್ಲರೂ ತಮ್ಮ ಹೊಲಗಳ ಕೆಲಸಕ್ಕಾಗಿ ಅವನನ್ನೇ ಕರೆಯುತ್ತಿದ್ದರು. ಅಲ್ಲದೆ ಅವನು ಕೂಡ ಅತ್ಯಂತ ಪ್ರಾಮಾಣಿ ಕತೆಯಿಂದ ಬೆಳಗಿನಿಂದ ಸಾಯಂಕಾಲದ ವರೆಗೆ ದುಡಿಯುತ್ತಿದ್ದನು. ಈ ರೀತಿ ದುಡಿದು ಕೂಲಿಯ ನೆಲ್ಲನ್ನು ತರುವಾಗ ಅದನ್ನು ನೆಲ್ಲೂರೇಶನಿಗೂ ಅರ್ಪಿಸುತ್ತ ಸಣ್ಣಕ್ಕಿಯ ನೆಲ್ಲು ದೊರೆತರೆ ನಿನಗೇ ಅರ್ಪಿಸುತ್ತೇನೆಂದು ಪ್ರಾರ್ಥಿಸಿ ಹಿಂತಿರುಗುತ್ತಿದ್ದನು.

ಈ ರೀತಿಯ ಇವನ ಕಾಯಕವನ್ನು ಕಂಡು ಇವನನ್ನು ಪರೀಕ್ಷಿಸ ಬೇಕೆಂಬ ಇಚ್ಛೆಯು ಶಂಕರನಲ್ಲುದಿಸಿ ಪ್ರತಿದಿನವೂ ಇವನಿಗೆ ಸಣ್ಣಕ್ಕಿಯ ನೆಲ್ಲು ಕೂಲಿಯಲ್ಲಿ ಸಿಗುವಂತೆ ಮಾಡಿದನು. ಕ್ರಮೇಣ ಇಪ್ಪತ್ತು ದಿನಗಳ ವರೆಗೆ ಸಣ್ಣಕ್ಕಿಯ ನೆಲ್ಲನ್ನು ಶಿವನಿಗರ್ಪಿಸಿ ತಾನು ಉಪವಾಸವೇ ಇದ್ದ ಆ ಭಕ್ತನು ಇಪ್ಪತ್ತೊಂದನೆಯ ದಿನವೂ ದೊರೆತ ಸಣ್ಣಕ್ಕಿಯ ನೆಲ್ಲನ್ನು ನೆಲ್ಲೂ ರೇಶ್ವರನಿಗರ್ಪಿಸಲು ಹೊರಟಾಗ ಬಿರುಗಾಳಿ ಬೀಸಿ ಬತ್ತಗಳೆಲ್ಲ ಚೆಲ್ಲಾಪಿಲ್ಲಿ ಯಾದವು.

ಅರಿವಾಳ್ತಾಂಡನಿಗೆ ಮಿತಿಮೀರಿದ ದುಃಖವಾಯಿತು. ತನ್ನ ಶಿವ

ಪೂಜೆಗೆ ವಿಘ್ನ ವೊದಗಿತಲ್ಲ! ಇನ್ನೇನು ಮಾಡಲಿ? ಈ ರೀತಿಯಾಗಿ ಶಿವಪೂಜೆಯಲ್ಲಿ ವಿಘ್ನ ಬಂದ ಮೇಲೆ ಜೀವಿಸಿದ್ದು ಮಾಡುವದಾದರೂ ಏನು? ಈ ಪ್ರಾಣವನ್ನೇ ಕಳೆದುಕೊಳ್ಳಬೇಕೆಂದು ಯೋಚಿಸಿ ನಡುವಿನೊಳಗಿರಿಸಿಕೊಂಡಿದ್ದ ಕುಡುಗೋಲಿನಿಂದ ಕತ್ತನ್ನು ಕತ್ತರಿಸಿಕೊಳ್ಳಲುದ್ಯುಕ್ತನಾಗಲು ಶಂಕರನು ಪ್ರತ್ಯಕ್ಷನಾಗಿ ಅವನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನಿತ್ತನು.

ಶಶಿಭೂಷಣಂಗೆ ನೇಮಿಸಿದಕ್ಕಿ ಸೂಸೆತ ।
ನ್ನಸು ವಿತ್ತೊಲಿಸಿದರಿ ವಾಳ್ತಾಂಡ ನೀ ವು ।
ನ್ನಿಸು ಸಲೆ ಸ್ಸೈಪುದಳೆಯುವೆನು ॥

—ಶ್ರೀ ನಿಜಗುಣ ಶಿವಯೋಗಿಗಳು.

# ೧೯. ನೈಸಭಕ್ತರು

ಸಮಸ್ತ ಐಸಿರಿಯಿಂದ ಕೂಡಿದ ಚೋಳಮಂಡಲದಲ್ಲಿ ತಿರುವನಂದ ನವೆಂಬ ನಗರವು ಸಾಧುಸಜ್ಜನರೇ ಮೊದಲಾದ ಗುಣಾಢ್ಯರಿಂದಲೂ, ಎಲ್ಲ ವಿವಿಧ ಕುಶಲ ಕೆಲಸಗಾರರಿಂದಲೂ ತುಂಬಿಕೊಂಡು ಒಳ್ಳೆಯ ನಗರ ವೆಂದು ಪ್ರಸಿದ್ಧಿ ಪಡೆದಿದ್ದಿತು.

ಭೃಂಗಿಯ ಪ್ರತೀಕವಿನಿಸಿದ ಸೋಮಾರಾಧ್ಯರು ತಾವು ಆಚರಿಸಿ ತೋರಿಸಿದಂಥ ಒಳ್ಳ ಶೀಲಗಳೊಳು, ನಿಷಿದ್ಧ ಪದಾರ್ಥಗಳ ಸಂಪರ್ಕವಿಲ್ಲ ದಂಥ ಶುದ್ಧ ಬಟ್ಟೆಗಳನ್ನೇ ಶಿವಭಕ್ತನು ಧರಿಸಬೇಕೆಂದು ನಿಯಮವಿವೆ. ಕೇವಲ ವಸ್ತ್ರಗಳಷ್ಟೇ ಅಲ್ಲದೆ, ದೋಷಾಯುಕ್ತವಾದ ಯಾವವಸ್ತುಗಳನ್ನೂ ಶಿವಭಕ್ತನು ಸ್ವೀಕರಿಸಕೂಡದು. ಶಿವಭಕ್ತನು ತಾನು ಪರಿಗ್ರಹಿಸುವ ವಸ್ತುವೂ ಲಿಂಗಾರ್ಪಣ ಮೂಲಕವಾಗಿ ಬರಬೇಕಾಗುತ್ತದೆ. ಅದಕ್ಕಾಗಿ ಶಿವಾರ್ಪಣಕ್ಕೆ ಯೋಗ್ಯವಾದುದು ಯಾವುದೆಂಬುದರ ಬಗೆಗೆ ಚನ್ನಾಗಿ ವಿವೇ ಚಿಸಿ ಸ್ವೀಕರಿಸಬೇಕಾಗುವದು. ವಿಚಾರವಂತರಾದ ಕೆಲವರು ಹೊಸ ಬಟ್ಟೆ ಗಳನ್ನು ಕೊಂಡಾಗ ಅವುಗಳನ್ನು ಮೊದಲು ಗುರು-ಜಂಗಮರಿಗೆ ಅರ್ಪಿ ಸಿಯೋ ಇಲ್ಲವೆ ಗೋವು, ವೃಕ್ಷಗಳ ಮೇಲೆ ಹೊದಿಸಿದ ನಂತರವೋ ಸ್ವೀಕರಿ ಸುತ್ತಾರೆ. ಇರಲಿ.

ತಿರುವನಂದ ಪುರದ ಶಿವಭಕ್ತ ಸಮೂಹದಲ್ಲಿ ಉದ್ಯಾನವನದೊಳಗಿನ ಉತ್ತಮ ಪರಿಮಳದಿಂದ ಕೂಡಿದ ಪುಷ್ಪವು ಎದ್ದು ಕಾಣುವಂತೆ ನೇಯು ವಂಥ ಪವಿತ್ರ ಕಾಯಕವನ್ನು ಕೈಕೊಂಡ ನೈಸನೆಂಬವನು ಸರ್ವಾದರ ಣೀಯನಾಗಿದ್ದನು. ಸರೋವರಗಳಿಗೆ ಕಮಲಗಳು ಶೋಭೆಯನ್ನುಂಟು ಮಾಡುವಂತೆ ಶಿವಭಕ್ತನಾದ ನೈಸನ ಪತ್ನಿಯು ಅವನ ಪ್ರತಿಯೊಂದು ಕಾರ್ಯದಲ್ಲಿ ನೆರವಾಗಿ ಸತ್ಕಾರ್ಯಗಳಿಗೆ ಪ್ರಚೋದನೆಯನ್ನಿತ್ತು ಸಂತುಷ್ಟ ಳಾಗುತ್ತಿದ್ದಳು.

ಬಟ್ಟೆಗಳನ್ನು ನೆಯ್ದು ಉಪಜೀವಿಸುವ ನೈಸನು ತಾನು ನೆಯ್ದ ಬಟ್ಟೆ

ಗಳನ್ನು ಜಂಗಮರಿಗೆ ಸಮರ್ಪಿಸಿ ಅನಂತರ ಅವುಗಳನ್ನು ಶಿವಭಕ್ತರಿಗೆ ನಲ್ಮೆ ಯಿಂದ ಕೊಡುತ್ತಿದ್ದನು. ಬಟ್ಟೆಗಳನ್ನು ಸ್ವೀಕರಿಸಿದ ಭಕ್ತರು ಆದರದಿಂದ ಕರುಣಿಸಿದ ಧನವನ್ನು ಮಾತ್ರ ತೆಗೆದುಕೊಂಡು ಗುರು, ಲಿಂಗ, ಜಂಗಮ, ಶಿವಾರ್ಪಣ ಮೂಲಕವಾಗಿ ಆನಂದದಿಂದ ಇರುತ್ತಿದ್ದನು. ಅವನ ಈ ಕಾರ್ಯ ದಲ್ಲಿ ಪರಮ ಪತಿವ್ರತೆಯಾದ ಅವನ ಪತ್ನಿಯು ಕೂಡ ನೆರಳಿನಂತೆ ನೆರವಾ ಗುತ್ತಿದ್ದಳು. ದಂಪತಿಗಳಲ್ಲಿ ಈ ರೀತಿಯ ಅನನ್ಯಭಾವವು ನೆಲೆಗೊಂಡಿದ್ದ ರಿಂದ ಬಹು ಜನರು ನಿಸ್ಸಾರವೆಂದುಕೊಂಡಿರುವ ಸಂಸಾರವು ಸರಳವಾಗಿ ನಡೆದಿತ್ತು. ಅವರು ತಮ್ಮಜೀವನವನ್ನು ಇದೇ ರೀತಿ ಕಳೆಯತೊಡಗಿದರು. ಒಂದು ಸಲ ನೈಸನ ಮನದಲ್ಲಿ ಒಂದು ಯೋಚನೆ ಬಂದಿತು. ಬರುವದೇ ತಡ ಅದನ್ನು ಕಾರ್ಯರೂಪಕ್ಕೂ ಇಳಿಸಿದನು. ಅದು ಈ ರೀತಿಯಾಗಿತ್ತು, ತನಗಿಂತ ಮೊದಲು ಯಾರೂ ನೇಯ್ದಿರದಂತಹ ಅತ್ಯಮೌಲ್ಯವಾದ, ಅಪೂ ರ್ವವಾದ, ಅತ್ಯುತ್ತಮವಾದ ಹಾಗು ಕಲಾಕುಶಲತೆಯು ಎಳೆ ಎಳೆಗೂ ಕಂಡುಬರುವಂತಹ, ಶಿವಗಣ ಸಮೂಹದ ಚಿತ್ರಗಳಿಂದೊಡಗೂಡಿದ ಹಾಗು ಅದೇ ತರದಾದ ಭಾವನೆಗಳನ್ನು ಬೀರುವಂಥ ಅಮೃತಾಕ್ಷರಗಳಿಂದ ಶೋಭಿ ಸುವ ಅತಿ ಪವಿತ್ರವಾದ ನೂಲಿನಿಂದ ಒಂದು ಹೊದಿಕೆಯನ್ನು ತಯಾರಿಸಿ ದನು. ನಾನಾವಿಧ ಬಣ್ಣಗಳಿಂದೊಡಗೂಡಿದ ಆ ದಿವ್ಯಾಂಬರವು ಸಿದ್ಧ ವಾಗಬೇಕಾದರೆ ಒಂದು ವರ್ಷದ ಅವಧಿ ಬೇಕಾಯಿತು.

ಹಗಲಿರುಳೆನ್ನದೆ ಒಂದು ವರ್ಷದ ವರೆಗೆ ಕುಳಿತು ತಯಾರಿಸಿದ ಆ ದಿವ್ಯದುಕೂಲವನ್ನು ಕಂಡು ಅವನ ಪತ್ನಿಯು ತುಂಬಾ ಸಂತಸಬಟ್ಟಳು. ಇಂಥ ಅಮೌಲ್ಯ ದಿವ್ಯಾಂಬರವು ದೇವದೇವನಾದ ಮಹಾದೇವನ ಹೊರ್ತು ಇನ್ನಾರಿಗೂ ಸಲ್ಲತಕ್ಕದ್ದಲ್ಲವೆಂದೂ ಮನದೊಳಗೆ ಭಾವಿಸಿಕೊಂಡಳು. ಸತಿ ಯಂತೆ ಪತಿಗೂ ಆ ವಸ್ತ್ರವನ್ನು ಕಂಡು ಪರಮಾನಂದವಾಯಿತು. ಅಲ್ಲದೆ ಈ ವಸ್ತ್ರವು ವಿಷಕಂಠನಾದ ನೀಲಕಂಠನಿಗೇ ಯೋಗ್ಯವೆಂದು ಅವನ ಮನ ದಲ್ಲಿಯೂ ಮೂಡಿತು. ಈರ್ವರ ಮನದಲ್ಲಿಯೂ ಒಂದೇ ವಿಚಾರ ಬಂದೊ ಡನೆ ಅವರೀರ್ವರೂ ಏಕ ಮುಖವಾಗಿ ನಂದಿವಾಹನನನ್ನು ಸ್ತುತಿಸತೊಡ ಗಿದರು.

ದಂಪತಿಗಳ ಮನದಿಚ್ಛೆಯು ಪರಮೇಶ್ವನಿಗೂ ತಿಳಿದುಬಂದಿತು.

ಆಗ ಅವನು ಕಪಟವೇಷಧಾರಿಯಾಗಿ ಭೂಲೋಕಕ್ಕೆ ಬಂದು ನೈಸನ ಮನೆ ಯೆದುರು ನಿಂತುಕೊಂಡನು. ಬಾಗಿಲ ಬಳಿ ನಿಂತಿರುವ ತಾಂಡವ ಮೂರ್ತಿ ಯನ್ನು ಕಂಡು ಶಿವಭಕ್ತನಾದ ನೈಸನು ತನಗೆ ಬೇಕಾದ ಸಾಂಬಶಿವನೇ ಈ ರೀತಿಯಾಗಿ ಬಂದಿರುವನೆಂಬ ಭಾವನೆಯಿಂದ ಆ ವೇಷಧಾರಿಯನ್ನು ಮನೆ ಯೊಳಕ್ಕೆ ಕರೆದುಕೊಂಡು ಹೋಗಿ ಸ್ನಾನವನ್ನು ಮಾಡಿಸಿ ಪ್ರೀತ್ಯಾ ದರಗಳಿಂದ ಯೋಗ್ಯ ಆಸನದಲ್ಲಿ ಕುಳ್ಳಿರಿಸಿ ಅವನ ಪಾದಗಳಿಗೆ ಅಭಿಷೇಕ ಮಾಡಿ ಆ ತೀರ್ಥವನ್ನು ಅವರೀರ್ವರೂ ಮಹಾಪ್ರಸಾದವೆಂದು ಸ್ವೀಕರಿಸಿ ದರು. ಅನಂತರ ಅಪೂರ್ವವಾದ ಆ ದುಕೂಲವನ್ನು ಜಂಗಮರೂಪೀ ಶಿವನಿಗೆ ಸಂತೋಷದಿಂದ ಅರ್ಪಿಸಿದರು.

ಆಗ ಪರಮಾತ್ಮನಿಗೆ ಅತೀವ ಆನಂದವಾಯಿತು. ಕೂಡಲೇ ಅವನು ತನ್ನ ನಿಜರೂಪವನ್ನು ಅವರಿಗೆ ತೋರಿಸಿ ಈರ್ವರನ್ನೂ ಕೈಲಾಸಕ್ಕೆ ಕರೆ ದೊಯ್ದು ಶಾಶ್ವತವಾದ ಗಣಪದವಿಯನ್ನು ಅನುಗ್ರಹಿಸಿದನು.

ಮಸವಾರೆ ದೇವಾಂಗವನು ನೆಯ್ದು ಚಮರ್ಾಂಬ ।<br>
ರ ನ ಗಣರಿಗಿತ್ತು ಮೆರೆದನೈ ।<br>
ಸರಪಾದವನಜ ವೆನೆದೆಯೊಳಿರಿತಿಕರ್ಗ ॥

—ಶ್ರೀ. ನಿಜಗುಣ ಶಿವಯೋಗಿಗಳು.

## ೨೦. ತಿರುನೀಲ ನಕ್ಕರು

ಸದಾ ಶಿವಧ್ಯಾನದೊಳು ನಿರತರಾದ, ಶಿವಭಕ್ತರ ಸಮೂಹದಿಂದೊಡಗೂಡಿದ ಹಾಗು ಸದ್ವರ್ತನೆ, ಸದಾಚಾರ ಸಂಪನ್ನರೇ ಮೊದಲಾದ ಮಹಾಜನಗಳಿಂದ ತುಂಬಿತುಳುಕುವ ಶಾಂತಿಮಂಗಲವೆಂಬ ನಗರವು ಇಡಿಯ ಚೋಳರಾಜ್ಯದಲ್ಲಿಯೇ ಪ್ರಸಿದ್ಧಿಯನ್ನು ಪಡೆದಿದ್ದಿತು.

ಆ ಪಟ್ಟಣದೊಳಗೆ ತಿರುನೀಲನೆಂಬ ಶಿವಭಕ್ತನು ಸಲ್ಲೀಲೆಯಂಬ ತನ್ನ ಪತ್ನಿಯೊಡನೆ ವಾಸಿಸುತ್ತಿದ್ದನು. ಆತನಲ್ಲಿಯ ಭಕ್ತಿಯು ಅಮೋಘವಾದುದೂ, ಅಪೂರ್ವವಾದುದೂ ಆಗಿತ್ತು. ಸಲ್ಲೀಲೆಯು ಕೂಡ ಪತಿಗೆ ತಕ್ಕಂಥ ಪತ್ನಿಯಾಗಿದ್ದಳು. ಅವನ ಪ್ರತಿಯೊಂದು ಕಾರ್ಯದಲ್ಲಿಯೂ ತಾನು ಮುಕ್ತಹಸ್ತಳಾಗಿ ನೆರವಾಗುತ್ತಿದ್ದಳು. ಹೂವಿನೊಳಗೆ ಪರ್ಯಾಯವಾಗಿ ವಾಸನೆಯು ಅಡಗಿಕೊಂಡು ಅದಕ್ಕೊಂದು ಸೌಂದರ್ಯವನ್ನು ಮೆರಗನ್ನು, ನೋಡುವವರ ಮನವು ಆಹ್ಲಾದಕರವಾಗುವಂಥ ಆಕರ್ಷಣೆಯನ್ನು ತರುವಂತೆ ಸಲ್ಲೀಲೆಯು ತನ್ನ ಪತಿ ಶಾಂತಿಮಂಗಲಧೀಶನ ಮುಂದಿರಕ್ಕೆ ತೆರಳುವಾಗ ಅವನಿಗೆ ಬೇಕಾಗುವ ಪ್ರತಿಯೊಂದು ಸಾಮಗ್ರಿಯನ್ನೂ ಅಣಿಮಾಡಿಕೊಡುತ್ತಿದ್ದಳು.

ಈ ರೀತಿಯಾಗಿ ತಮ್ಮ ಕಾಯಕವನ್ನು ಮುಂದುವರಿಸುತ್ತಿದ್ದ ಆ ದಂಪತಿಗಳು, ಅನನ್ಯ ಭಕ್ತಿಯಿಂದುಂಟಾದ ಆನಂದವನ್ನು ಶಿವಾರ್ಪಣ ಮಾಡಿ ಪುಣ್ಯಸಂಚಾಯ ಮಾಡಿಕೊಳ್ಳುತ್ತ ಕಾಲಕಳೆಯುತ್ತಿದ್ದರು. ಆದರೆ ಒಂದು ಸಲ ಅಘಟಿತ ಘಟನೆಯು ಜರುಗಿ ಎಲ್ಲರ ಕಣ್ಣನ್ನು ತೆರೆಯಿಸಿತು.

ಒಂದುದಿನ ತಿರುನೀಲನು ಎಂದಿನಂತೆ ಶುಚಿರ್ಭೂತನಾಗಿ ಶಿವಾಲಯಕ್ಕೆ ಹೋಗಿ ಕುಳಿತುಕೊಂಡು ಪೂಜೆಗೈಯಲು ಅಣಿಯಾಗತೊಡಗಿದನು. ಆಗ ಅವನ ಪತ್ನಿಯು ಮುನ್ನಾದಿನ ತಾವು ಮುಡಿಸಿದ ಪುಷ್ಪಗಳನ್ನು ತೆಗೆಯಲೋಸುಗ ಶಿವಲಿಂಗದ ಮೇಲೆ ಕೈಯಿರಿಸಿದಳು. ಬಾಡಿದ ಪುಷ್ಪಗಳನ್ನು ತೆಗೆಯುತ್ತಿರುವಾಗ ಅವಳ ಲಕ್ಷ್ಯವು ಶಿವಲಿಂಗದ ಮೇಲೆ ಕುಳಿತ

ಜೇಡ ಹುಳುವಿನ ಕಡೆಗೆ ಹೋಯಿತು. ಆ ಹುಳುವನ್ನು ಕಂಡು ಅವಳ ಮನಕ್ಕೆ ಅತ್ಯಂತ ಖೇದವಾಯಿತು.

''ಶಿವಶಿವಾ ! ಈ ಹುಳುವು ನಿನ್ನ ತಲೆಯನ್ನು ಕುಟುಕಿದರೆ ನೋವಾಗುವದಿಲ್ಲವೇ ? ಅಲ್ಲದೆ ತಲೆಯೊಳಗೆ ಹುಳುಬೀಳುವದೂ ಉಂಟು. ಅದರಿಂದ ನಿನಗೆ ಬಹಳ ವೇದನೆಯೂ ಆದೀತು'' ಎಂದವಳು ತನ್ನ ಮನದೊಳಗೆ ಆಡಿಕೊಂಡು ಹುಳುವು ಕುಳಿತಿದ್ದ ಸ್ಥಳವನ್ನು ಮೆತ್ತಗೆ ನೇವರಿಸಿ ಊದ ತೊಡಗಿದಳು. ತನ್ನ ಪತ್ನಿಯ ಈ ರೀತಿಯ ಕಾರ್ಯವನ್ನು ಕಂಡು ಅವನಿಗೆ ಕೋಪಬಂದಿತು.

"ಮೂರ್ಖಳೇ ! ಶಿವಲಿಂಗಕ್ಕೆ ನಿನ್ನ ಉಗುಳನ್ನು ಸಿಡಿಸಿ ಅದನ್ನು ಅಪವಿತ್ರಗೊಳಿಸುವಿಯಾ ? ನನ್ನೆದುರು ಒಂದು ಕ್ಷಣವೂ ನಿಲ್ಲಬೇಡ, ಈಗಲೇ ಇಲ್ಲಿಂದ ಹೊರಟು ಹೋಗು'' ಎಂದು ಅವಳನ್ನು ಮಂದಿರದೊಳಗಿಂದ ಹೊರಗೆ ಹಾಕಿದನು. ಅವಳಿಗೆ ತನ್ನ ಪತಿಯು ಹೊರಗೆ ಹಾಕಿದುವಕ್ಕಿಂತ ಶಿವನ ತಲೆಗೆ ಎಲ್ಲಿ ಅಪಾಯವಾಗುವದೋ ಎಂಬ ಚಿಂತೆಯೇ ಹೆಚ್ಚಾಗಿ ಅನಿವಾರ್ಯವಾಗಿ ಮನೆಗೆ ಮರಳಿದಳು.

ತಿರುನೀಲನು ಪೂಜೆಯನ್ನು ತೀರಿಸಿಕೊಂಡು ಮನೆಗೆ ಬಂದನು. ಆಗಲೂ ಅವನ ಸಿಟ್ಟು ಇಳಿದಿರಲಿಲ್ಲ. ಅದಕ್ಕಾಗಿ ಪತ್ನಿಯನ್ನು ಮಾತನಾಡಿಸುವ ಗೋಜಿಗೂ ಹೋಗದೆ, ಆ ಇಡಿಯ ದಿನವನ್ನು ಹಾಗೆಯೇ ಕಳೆದು ರಾತ್ರಿ ಮಲಗಿಕೊಳ್ಳಲು ಅವನಿಗೊಂದು ಕನಸು ಬಿದ್ದಿತು. ಕನಸಿನೊಳಗೆ ಮಹಾದೇವನು ಕಾಣಿಸಿಕೊಂಡು— " ತಿರುನೀಲನೇ ! ಇಂದು ನೀನು ನಿನ್ನ ಪತ್ನಿಯನ್ನು ಮಂದಿರದಿಂದ ಹೊರಗೆ ಹಾಕಿ ಒಳ್ಳೆಯ ಕಾರ್ಯವನ್ನು ಮಾಡಲಿಲ್ಲ. ಅವಳು ನನಗೆ ನೋವಾಗದಿರಲೆಂದು ಊದಿದಳೇ ವಿನಹ ಬೇರೇನೂ ಅಲ್ಲ. ಅಂಥವಳನ್ನು ನೀನು ಜರಿದು ಹೊರಗೆ ಹಾಕಿದೆ. ತತ್ಪರಿಣಾಮವಾಗಿ ನನ್ನ ತಲೆಯೊಳಗೆ ಹುಳುಗಳು ಬಿದ್ದಿವೆ'' ಯೆಂದು ಹೇಳಿ ಅಂತರ್ಧಾನನಾದನು.

ಕೂಡಲೇ ಅವನಿಗೆ ಎಚ್ಚರವಾಯಿತು. ಒಂದು ನಿಮಿಷವೂ ವಿಲಂಬ ಮಾಡದೆ ಆ ಸಂಗತಿಯನ್ನು ತನ್ನ ಪತ್ನಿಗರುಹಿ ಮಾರನೆಯ ದಿನ ಮಂದಿರಕ್ಕೆ ಹೋಗಿ ನೋಡಲು ಲಿಂಗದ ಅಗ್ರಭಾಗದಲ್ಲಿ ನಿಜಕ್ಕೂ ಹುಳಗಳು ಕಾಣಿಸಿ

ಕೊಂಡವು. ಕನಸಿನೊಳಗೆ ಹೇಳಿದ್ದು ನಿಜವಾದುದನ್ನು ಕಂಡು ಅವನು ಬಹಳ ಹಳಹಳಿಸತೊಡಗಿದನು. ಅವನ ಪತ್ನಿಯಂತೂ ತನ್ನ ತಲೆಯೊಳಗೇ ಹುಳುಗಳು ಬಿದ್ದಿರುವವೇನೋ ಎಂಬಷ್ಟು ಶೋಕಿಸತೊಡಗಿದಳು.

ದಂಪತಿಗಳ ನಿರ್ಮಾಲ್ಯ ಪ್ರೇಮವನ್ನು ಕಂಡು ಚಂದ್ರಮೌಳಿಯು ತನ್ನ ನಿಜರೂಪವನ್ನು ತೋರಿಸಲು ಈರ್ವರೂ ಅವನ ಪಾದಗಳಿಗೆರಗಿದರು. ದಯಾಘನನು ಅವರೀರ್ವರನ್ನು ಮೇಲಕ್ಕೆತ್ತಿ ಆಶೀರ್ವದಿಸಿ ಪುಷ್ಪಕ ವಿಮಾನದಲ್ಲಿ ಕುಳ್ಳಿರಿಸಿಕೊಂಡು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ದಯಪಾಲಿಸಿದನು.

ಮುಕ್ಕಣ್ಣನಿಗೆ ಶಲದಿ ತಕ್ಕುದಲ್ಲೆಂದು ಬಗೆ ।
ಮಿಕ್ಕು ತೂಪಿರಿದ ಸತಿಗೆ ಪತಿಯುರ ನೀಲ ।
ನಕ್ಕರಿಂದ ಹಿತಪನು ಗೆಲುವೆ ॥

–ಶ್ರೀ ನಿಜಗುಣ ಶಿವಯೋಗಿಗಳು

# ೨೧. ತಿರುಕುರುಪಿ ತೊಂಡರು

ಸಾಕ್ಷಾತ್ ಇಂದ್ರನ ಅಮರಾವತಿಗಿಂತಲೂ ಮಿಗಿಲಾದ ಕಾಂಚೀಪುರ ವೆಂಬ ಪಟ್ಟಣವು ಅನೇಕ ಶಿವಾಲಯಗಳಿಂದಲೂ, ಶಿವಭಕ್ತರಿಂದಲೂ, ಸತ್ಕರ್ಮನಿರತರಾದ ಜನಗಳಿಂದಲೂ ತುಂಬಿ ತುಳುಕುತ್ತಿತ್ತು.

ಶಿವಾರ್ಪಣದ ಕಾರ್ಯಕ್ಕೆ ಮಾನವನು ಯಾವ ತರಹದ ಕಾರ್ಯವನ್ನು ಮಾಡಿದರೂ ಚಿಂತೆಯಿಲ್ಲ. ಅದು ಎಂಥ ಹೀನ ಕಾರ್ಯವಿದ್ದರೂ ಪರವಿಲ್ಲ. ಅಲ್ಲದೆ ಗುರು, ಲಿಂಗ, ಜಂಗಮರ, ಸೇವೆಗಾಗಿ ಎಂತಹ ಕೀಳತರಗತಿಯ, ಹೀನವಾದ ನೇವೇದ್ಯವನ್ನರ್ಪಿಸಿದ್ದರೂ ಆಕ್ಷೇಪಿಸಲು ಬರುವದಿಲ್ಲ. ಆದರೆ ಅವನು ಮಾಡಿದಂಥ ಕಾರ್ಯಗಳು ಶುಭವಾಗಿ ಪರಿಣಮಿಸಿ ಅವನನ್ನು ಮುಕ್ತಿಮಾರ್ಗದತ್ತ ಒಯ್ಯುವದರಲ್ಲಿ ಸಂಶಯವಿಲ್ಲ. ಕೇವಲ ಹೊಟ್ಟೆ ಹೊರೆದುಕೊಳ್ಳುವದಕ್ಕಾಗಿ ದುಡಿಯುವದು ಶ್ರೇಯಸ್ಕರವಲ್ಲ. ಆದರೆ ಶಿವಾರ್ಪಣದ ಭಾವದಿಂದ ಮಾಡುವ ಕಾಯಕವು ಮಾತ್ರ ಶ್ರೇಯಸ್ಕರವೂ, ಸಂಪತ್ಕಾರವೂ ಆದುದಾಗಿದೆ.

ಜಗತ್ತಿನ ಮಲಿನತೆಯನ್ನು ಹೋಗಲಾಡಿಸಲೋಸುಗವೋ ಏನೋ ಎಂಬಂತೆ ತಿರುಕುರುಪಿ ತೊಂಡನೆಂಬ ಶಿವಭಕ್ತನು ಅಗಸರ ಮನೆಯಲ್ಲಿ ಹುಟ್ಟಿದನು. ಆತನು ತನ್ನ ವಂಶದವರು ಮಾಡುತ್ತಬಂದ ಕಾಯಕವನ್ನೇ ಮುಂದುವರೆಸಿದನು. ಶಿವಶರಣರ ಬಟ್ಟೆಗಳನ್ನು ಅನನ್ಯಭಾವದಿಂದ ಶುಭ್ರ ವಾಗಿ ಒಗೆದು ಚನ್ನಾಗಿ ಗಳಿಗೆ ಮಾಡಿ ಅವರಿಗೆ ತಂದು ಕೊಡುತ್ತಿದ್ದನು.

ಅವರು ಮೆಚ್ಚಿ ಕೊಟ್ಟಷ್ಟನ್ನೇ ಮಹಾ ಪ್ರಸಾದವೆಂದು ಇಸಿದು ಕೊಂಡು ಬಂದು ಗುರುಲಿಂಗ ಜಂಗಮರನ್ನು ಪೂಜಿಸಿ ತನಗಾದ ಆನಂದ ವನ್ನು ಶಿವಾರ್ಪಣಮಾಡಿ ಕಾಲ ಕಳೆಯುತ್ತಿದ್ದನು. ಶಿವಶರಣರ ಬಟ್ಟೆ ಗಳಂತೆ ಸಂಸಾರಸ್ಥರ ಬಟ್ಟೆಗಳನ್ನೂ ಸಹ ಹಸನಮಾಡಿ ಕೊಡುತ್ತಿದ್ದನು.

ಸಂಸಾರಿಗಳ ವಸ್ತ್ರಗಳನ್ನು ಮುಟ್ಟಿದ ಫಲದಿಂದ ಅವನು ದಿನಂಪ್ರತಿ ನಸುಕಿನಲ್ಲೆದ್ದು ಸರೋವರಕ್ಕೆ ಹೋಗಿ ಮಿಂದು ಶುಚಿಯಾಗಿ ಮರಿದುಂಬೆ

ಗಳೆರಗದ ಬಂಗಾರ ವರ್ಣದ ಕಮಲಗಳನ್ನು ಕಿತ್ತಿಕೊಂಡು ಶಿವನಾಲಯಕ್ಕೆ ಹೋಗಿ ತದೇಕಚಿತ್ತನಾಗಿ ಪುಷ್ಪವನ್ನು ಅರ್ಪಿಸಿ ಅನನ್ಯಭಾವದಿಂದ ಪೂಜೆ ಮಾಡಿ ಮನೆಗೆ ಮರಳುತ್ತಿದ್ದನು.

ಅವನಲ್ಲಿಯ ಶಿವಭಕ್ತಿಯು ಎಂಥವರೂ ಬೆರಳು ಕಚ್ಚುವಂತಿದ್ದಿತು. ಕೊನೆಗೆ ಮೃತ್ಯುಂಜಯನಿಗೂ ಗೋಚರವಾಗಿ ಅವನು ತಿರುಕುರುಪಿಯನ್ನು ಪರೀಕ್ಷಿಸಲೋಸುಗ ಪ್ರಮಥರನ್ನು ಭೂಲೋಕಕ್ಕೆ ಕಳುಹಿಸಿದನು. ಜಂಗಮ ರೂಪಧರಿಸಿ ಬಂದಂಥ ಆ ಪ್ರಮಥರು ಹಳ್ಳದಲ್ಲಿ ಬಟ್ಟೆಗಳನ್ನು ಒಗೆಯು ತ್ತಿದ್ದ ತಿರುಕುರೂಪಿಯ ಬಳಿ ಹೋಗಿ ಬೆಟ್ಟದಷ್ಟು ಬಟ್ಟೆಗಳನ್ನೊಯ್ದು ಇವುಗಳನ್ನು ಒಗೆದು ಕೊಡು ಎಂದು ಹೇಳಿದರು.

ಆಗ ಶಿವಭಕ್ತನು ಹಾಗೆಯೇ ಆಗಲೆಂದು ಒಪ್ಪಿ ಬಟ್ಟೆಗಳನ್ನು ಒಗೆ ಯಲು ಪ್ರಾರಂಭಿಸಿದನು. ಎಷ್ಟು ಒಗೆದರೂ ತೀರದೇ ಹಾಗೆಯೇ ಗುಡ್ಡ ದಾಕಾರವಾಗಿ ಬಿದ್ದಿರುವ ಬಟ್ಟೆಗಳ ರಾಶಿಯನ್ನು ಕಂಡು ಕಂಗೆಡದೆ ಅಹೋ ರಾತ್ರಿ ಒಗೆಯತೊಡಗಿದನು. ಹತ್ತು ಉಪವಾಸಗಳ ನಂತರ ಆ ಬಟ್ಟೆಗಳು ತೀರಿದವು. ಆಗ ಅವುಗಳನ್ನು ಜಂಗಮರೂಪೀ ಪ್ರಮಥರಿಗೊಪ್ಪಿಸಲು ಅವರು ಅವನಿಗೆ ಪ್ರತಿಫಲಧನವನ್ನಿತ್ತು ಬಟ್ಟೆಗಳನ್ನು ತೆಗೆದುಕೊಂಡು ಅಲ್ಲಿಂದ ಹೊರಟು ಹೋದರು.

ಅವರು ಕೊಟ್ಟುದನ್ನು ಅತ್ಯಂತ ನಮ್ರತೆಯಿಂದ ಸ್ವೀಕರಿಸಿದ ಶಿವ ಭಕ್ತನು ತನ್ನ ಹಸಿವಿನೆಡೆಗೆ ಲಕ್ಷ್ಯವೀಯದೆ ಆ ಧನವನ್ನು ಶಿವಶರಣರಿಗೆ ದಾನ ಮಾಡಿ ತನ್ನ ಲಿಂಗಾರ್ಪಣ ಕಾರ್ಯವನ್ನು ಮುಗಿಸಿದನು. ಅತ್ತ ಪ್ರಮಥರು ಶಿವನ ಸನ್ನಿಧಿಗೆ ಹೋಗಿ ತಾವು ಮಾಡಿದನ್ನೆಲ್ಲ ವಿವರಿಸಲು ಸಾಂಬಶಿವನಿಗೆ ತನ್ನ ಭಕ್ತನ ಬಗ್ಗೆ ಇನ್ನಷ್ಟು ಅಭಿಮಾನವೆನ್ನಿಸತೊಡಗಿತು.

ಆಗ ಅವನಿಗೂ ತನ್ನ ಭಕ್ತನನ್ನು ಪರೀಕ್ಷಿಸಬೇಕೆಂಬ ಯೋಚನೆ ಯುಂಟಾಗಿ ಜಂಗಮನ ವೇಷವನ್ನು ತಳೆದು ತಿರುಕುರೂಪಿ ತೊಂಡನು ಬಟ್ಟೆಗಳನ್ನು ಒಗೆಯುತ್ತಿದ್ದ ಹಳ್ಳದ ಬಳಿ ಬಂದು ಅವನನ್ನುದ್ದೇಶಿಸಿ, ''ಅಯ್ಯಾ ಭಕ್ತನೆ! ಈ ವಸ್ತ್ರಕ್ಕೆ ಕಂಥೆಯ ಕಲೆಯು ಬಿದ್ದಿರುವದು, ಸೂರ್ಯಾಸ್ತದೊಳಗಾಗಿ ಇದನ್ನು ಹೋಗಲಾಡಿಸಿ ಬಟ್ಟೆಯನ್ನು ಸ್ವಚ್ಛ ಮಾಡಿಕೊಡು" ಎಂದು ನುಡಿದು ಒಂದು ವಸ್ತ್ರವನ್ನು ಕೊಡಲು ಅವನು ಅದನ್ನು ತೆಗೆದುಕೊಂಡನು.

ಬಟ್ಟೆಗಳ ಮೇಲೆ ಬಿದ್ದ ಕಲೆಗಳನ್ನು ಕಳೆಯಲು ಉಪಯೋಗಿಸುವಂಥ ಎಲ್ಲ ಸಾಮಗ್ರಿಗಳನ್ನು ಹಚ್ಚಿ ಉಜ್ಜಿದರೂ ಆ ಕಲೆಯು ಹೋಗಲಿಲ್ಲ. ಸಾಯಂಕಾಲದ ವರೆಗೂ ಅವನು ಆ ಕಲೆಯನ್ನು ಹೋಗಲಾಡಿಸಲೋಸುಗ ತನ್ನ ಶಕ್ತಿ ಮೀರಿ ಪ್ರಯತ್ನಿಸಿದನು. ಆದರೂ ಅದು ಹೋಗದಿರಲು ಅವನು ಚಿಂತೆಗೊಳಗಾದನು. ಸೂರ್ಯಾಸ್ತದ ಸಮಯವಾದುದರಿಂದ ಜಂಗಮರೂಪಿಯಾದ ಶಿವನು ಅಲ್ಲಿಗೆ ಬಂದು ತನ್ನ ಬಟ್ಟೆಯನ್ನು ಕೇಳಿದನು.

ತಿರುಕುರೂಪಿ ತೊಂಡನಿಗೆ ಅತೀವ ವ್ಯಥೆಯಾಯಿತು. ಕಲೆಯುಳ್ಳ ಆ ವಸ್ತ್ರವನ್ನು ಜಂಗಮನಿಗೆ ಒಪ್ಪಿಸಲು ಮನ ಒಪ್ಪಲಿಲ್ಲ. ಇಷ್ಟೊಂದು ಚಿಕ್ಕ ಕಾರ್ಯವು ತನ್ನಿಂದಾಗದಿದ್ದುದಕ್ಕೆ ತನ್ನ ಕಾಯದ ಮೇಲೆಯೇ ಅವನಿಗೆ ಕೋಪ ಬಂದು ಇಂಥ ಕಾಯದಿಂದ ಉಪಯೋಗವಾದರೂ ಏನು? ಎಂಬ ಭ್ರಾಂತಿಯಿಂದ ಬಟ್ಟೆಗಳನ್ನು ಒಗೆಯುವ ಕಲ್ಲಿಗೆ ತನ್ನ ತಲೆಯನ್ನು ಅಪ್ಪಳಿಸತೊಡಗಿದನು. ಅವನಲ್ಲಿಯ ಅಪಾರ ಭಕ್ತಿಯನ್ನು ಕಂಡು ಈಶ್ವರನು ಅನನಿಗೆ ತನ್ನ ನಿಜರೂಪವನ್ನು ತೋರಿಸಿ ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ಅನುಗ್ರಹಿಸಿದನು.

ಖಂಡ ಪಶುವಿನ ಕರಿಗೊಂಡ ಕಂತೆಯನು ಪಮೆ ।
ಗಂಡು ನಿಜ ರುಧಿರದೊಳು ತೊಳೆದ ತಿರುಕುರು ಪೆ ।
ತೊಂಡರೆ ನಗವುಳತೆಯು ನೀಗೆ ॥

—ಶ್ರೀ ನಿಜಗುಣ ಶಿವಯೋಗಿಗಳು

# ೨೨. ತಿರುನಾಳ್ಪೋವರು

ಶಿವಾರ್ಪಣದಲ್ಲಿಯೇ ಆನಂದವನ್ನು ಪಡೆಯುವಂತಹ ಶಿವಭಕ್ತರ ವಿಲಾಸಕ್ಕಾಗಿಯೇ, ಭೂಮಿತಾಯಿಯ ಶೃಂಗಾರಕ್ಕಾಗಿಯೇ, ಇಲ್ಲವೆ ಸಂಸಾರಿಗರ ಮನಾನಂದಕ್ಕಾಗಿಯೇ ನಿರ್ಮಿತವಾಗಿರುವ ಉದ್ಯಾನವನ ಗಳಿಂದಲೂ, ಫಲಗಳಿಂದ ಶೋಭಿಸುವ ವೃಕ್ಷಗಳಿಂದಲೂ ಶೋಭಿಸುವ ಚೋಳ ಮಂಡಲದಲ್ಲಿ ಪಾದನೂರು ಎಂಬ ಗ್ರಾಮವಿದ್ದಿತು. ಅಲ್ಲಿಯವರು ಉದ್ಯೋಗ ಪ್ರಿಯರೂ, ಭಾವ ಜೀವಿಗಳಾದ ಶಿವಭಕ್ತರೂ ಆಗಿದ್ದರು. ತಿರುನಾಳ್ಪೋವನೆಂಬ ಶಿವಭಕ್ತನು ಕೂಡ ಅದೇ ಗ್ರಾಮದಲ್ಲಿ ವಾಸವಾ ಗಿದ್ದನು.

ಈತನು ಒಕ್ಕಲತನವನ್ನು ಮಾಡುತ್ತಿದ್ದನು. ಮಾಡುವ ಕೆಲಸವು ಎಂಥದೇ ಇರಲಿ; ಅದು ಭಕ್ತನ ಅಳತೆಗೋಲಲ್ಲವೆಂಬುದನ್ನು ಹಿಂದೆಯೇ ಹೇಳಲಾಗಿದ್ದು ಮತ್ತೆ ಮತ್ತೆ ಹೇಳುವದು ಅನಗತ್ಯ. ಇವನು ಸರಳಸ್ವಭಾವ ದವನಿದ್ದಂತೆ, ಘಟ್ಟಿಗನೂ, ತಾನು ಮಾಡುವ ಕಾರ್ಯದಲ್ಲಿ ಉತ್ಸಾಹವು ಳ್ಳವನೂ, ಧೈರ್ಯಶಾಲಿಯೂ ಆಗಿದ್ದನು. ತಾನು ಮಾಡುವ ಕಾರ್ಯವು ಒಳ್ಳೆಯದೆಂದು ಅವನ ಅಂತರಾತ್ಮ ಹೇಳಿದರೆ ಅವನು ಕಾರ್ಯವನ್ನು ಯಾವ ಅಂಜಿಕೆಯಿಲ್ಲದೆ ಮಾಡಿ ಮುಗಿಸುವಂಥ ಧೀರನಿರ್ಧಾರವುಳ್ಳವನಾ ಗಿದ್ದನು.

ಬುದ್ಧಿವಂತರ ಮನೆಯಲ್ಲಿ ಹುಟ್ಟಿದವರು, ಮರ್ಯಾದೆಯುಳ್ಳವರ ವಂಶದಲ್ಲಿ ಜನಿಸಿದವರು ಹಾಗು ಗೌರವಸ್ಥರ ಕುಟುಂಬದಲ್ಲಿ ಜನಿಸಿದರಷ್ಟೇ ಅಲ್ಲ; ಅತಿ ದರಿದ್ರ ಮನೆತನದಲ್ಲಿ ಜನಿಸಿದರೂ, ದೇವರಲ್ಲಿ ಗೌರವ, ಅಪಾರ ವಿಶ್ವಾಸವನ್ನಿರಿಸಿ ಭಗವಂತನನ್ನು ಒಲಿಸಿಕೊಳ್ಳಲು ಸಾಧ್ಯವೆಂಬುದನ್ನು ಈತನ ದೃಷ್ಟಾಂತದಿಂದ ಅರಿತುಕೊಳ್ಳಲು ಸಾಧ್ಯವೆಂಬುವನ್ನು ಈತನ ದೃಷ್ಟಾಂತದಿಂದ ಅರಿತುಕೊಳ್ಳಬಹುದು.

ಐಶ್ವರ್ಯವಂತನಾದ ಓರ್ವ ಬ್ರಾಹ್ಮಣನ ಗದ್ದೆಯೊಳಗೆ ಕೆಲಸ ಮಾಡುವದಕ್ಕೆ ಒಪ್ಪಿಕೊಂಡು ಒಂದು ಮಾಸದ ಸಂಬಳವನ್ನೂ ಗೊತ್ತು

ಪಡಿಸಿಕೊಂಡು ಅವನಲ್ಲಿಗೆ ಕೆಲಸಕ್ಕೆ ಹೋಗುವ ಮುನ್ನ ಒಂದು ಮಾಸದ ಸಂಬಳವನ್ನು ಮೊದಲೇ ಇಸಿದುಕೊಂಡು ಕೆಲಸವನ್ನು ಪ್ರಾರಂಭಿಸಿದನು. ಅವನು ವಾಸಿಸುವ ಗ್ರಾಮಕ್ಕೆ ಅನತಿದೂರದಲ್ಲಿಯೇ ತಿರುನಾಳ್ಗಳು ಎಂಬಲ್ಲಿ ಅತಿಪ್ರಖ್ಯಾತವಾದ ಪೊನ್ನಾಂಬೇಶ್ವರಾಲಯದಲ್ಲಿ ಸಾಕ್ಷಾತ್ ಶಂಕರನೇ ವಾಸವಾಗಿರುವನೆಂಬ ಪ್ರತೀತಿಯು ಎಲ್ಲೆಡೆಗೂ ಇದ್ದಿತು. ತಾನು ಒಂದು ಸಲವಾದರೂ ಅಲ್ಲಿಗೆ ಹೋಗಿ ಆ ಮಹಾನುಭಾವನ ದರ್ಶನವನ್ನು ಪಡೆಯ ಬೇಕೆಂಬ ಲವಲವಿಕೆಯು ಅವನ ಮನದಲ್ಲಿ ಬಹುದಿನಗಳಿಂದಲೂ ಇದ್ದಿತು.

ತಿರುನಾಳ್ಪೋವನು ಆ ಬ್ರಾಹ್ಮಣನ ಗದ್ದೆಯ ಕೆಲಸದಲ್ಲಿ ಮಗ್ನನಾಗಿ ರಲು ಈ ಸಲ ಪೊನ್ನಾಂಬೇಶ್ವರನ ಸನ್ನಿಧಿಗೆ ಅವಶ್ಯ ಹೋಗಲೇಬೇಕೆಂದು ನಿಶ್ಚಯಗೊಳಿಸಿಕೊಂಡು ಅದೇ ವಿಚಾರದಲ್ಲಿ ಮಗ್ನನಾಗಿ ಸಾಯಂಕಾಲ ಮನೆಗೆ ಬಂದನು. ರಾತ್ರಿಯಲ್ಲವೂ ಅದೇ ವಿಚಾರದಲ್ಲಿ ಕಳೆದು ಬೆಳಿಗ್ಗೆ ಎದ್ದು ಕುಳಿತಿರಲು ಆ ಬ್ರಾಹ್ಮಣನು ಗದ್ದೆ ಕೆಲಸಕ್ಕೆ ಹೋಗಲು ಹೇಳಲಿಕ್ಕೆ ಬಂದನು.

ಆಗ ಇವನು ತನ್ನ ಮನದಿಂಗಿತವನ್ನು ಅಂದರೆ ಪೊನ್ನಾಂಬರೇಶ್ವರನ ದರ್ಶನ ಪಡೆಯುವ ಹಂಬಲವನ್ನು ಅವನಿಗೆ ತಿಳಿಸಿ ತನ್ನನ್ನು ಅಲ್ಲಿಗೆ ಹೋಗಲು ಅನುಮತಿಯನ್ನೀಯಲೋಸುಗ ಕೇಳಿಕೊಂಡನು. ಆಗ ಬ್ರಾಹ್ಮಣನು ತನ್ನ ಕಾರ್ಯವನ್ನು ಒಂದು ದಿವಸದೊಳಗೆ ಪೂರ್ಣ ಮುಗಿಸಿ ಕೊಟ್ಟು ಮನಸ್ಸು ಬಂದೆಡೆಗೆ ಧಾರಾಳವಾಗಿ ಹೋಗಬಹುದು ಎಂದು ಹೇಳಿ ದಾಗ ಇವನಿಗೆ ಅತೀವ ಆನಂದವಾಯಿತು. ಸಾಕ್ಷಾತ್ ಶಂಕರನನ್ನೇ ಕಂಡಷ್ಟು ತೃಪ್ತಿಯಾಯಿತು.

ಕೂಡಲೇ ಅವನು ಗದ್ದೆಗೆ ಹೋಗಿ ಹುಲ್ಲನ್ನು ಕೊಯ್ಯಲು ಪ್ರಾರಂಭಿ ಸಿದನು. ಶಿವದರ್ಶನ ಹಂಬಲದಲ್ಲಿಯೇ ಮಗ್ನನಾಗಿ ಅವನಿಗೆ ಇನ್ನಾವುದರ ಪರಿವೆಯೂ ಇರಲಿಲ್ಲ. ಒಂದೇ ಸಮನಾಗಿ ಕೊಯ್ಯತೊಡಗಿದನು. ಇವ ನಲ್ಲಿಯ ಅಪಾರ ಭಕ್ತಿಯನ್ನು ಕಂಡು ಶಂಕರನು, ತನ್ನ ಪ್ರಮಥರಿಗೆ ಹುಲ್ಲು ಕೊಯ್ಯುವ ಕಾರ್ಯದಲ್ಲಿ ಸಹಾಯ ಮಾಡಲು ಹೇಳಿದನು. ಒಂದು ತಿಂಗಳದ ಕಾರ್ಯವು ಕಣ್ಣು ಮುಚ್ಚಿ ತೆರೆಯುವಷ್ಟರೊಳಗೆ ಮುಗಿದು ಹೋಯಿತು.

ಅವನು ಮಾಡಿದ ಕಾರ್ಯವನ್ನು ಕಂಡು ಬ್ರಾಹ್ಮಣನಿಗೂ ಆಶ್ಚರಿಯಾಯಿತು. ಅಷ್ಟಕ್ಕೇ ತೃಪ್ತನಾಗದೆ ಆ ಬ್ರಾಹ್ಮಣನು ಆ ಎಲ್ಲ ಹುಲ್ಲನು ಒಂದೆಡೆ ಶೇಖರಿಸಿ ಹೊತ್ತು ಹಾಕಲು ಹೇಳಿದನು. ಶಂಕರನ ದರ್ಶನದ ಹೊರ್ತು ಇನ್ನಾವುದೂ ಮನದಲ್ಲಿರದ ಆ ಶಿವಭಕ್ತನು ಪರ್ವತಾಕಾರದಂಥ ಹೊರೆಯನ್ನು ಎತ್ತಿ ಹಾಕಿದನು. ಆಗ ಅವನಿಗೆ ದೇವದರ್ಶನಕ್ಕೆ ಹೋಗಲು ಅನುಮತಿ ದೊರೆಯಿತು.

ಹೋಗುವಾಗಲು ಕೂಡ ಅಲ್ಲಿಗೆ ಹೋಗಲಿರುವ ಬೇರೊಬ್ಬರ ಅಕ್ಕಿಯ ಮೂಟೆಗಳನ್ನು ತಲೆಯ ಮೇಲೆ ಹೊತ್ತುಕೊಂಡು ಮಂದಿರದ ವರೆಗೆ ಹೋಗಿ ಆ ಮೂಟೆಗಳನ್ನು ಬಿಸಾಕಿ ಎಡವುವ ಪರಿವೆಯಿಲ್ಲದೆ ಮುಂದುವರಿಯುತ್ತ ಶಿವಲಿಂಗದ ಎದುರಿಗೆ ಹೋಗಿ ಕೈಜೋಡಿಸಿ ನಿಂತುಕೊಂಡನು. ಅನಂತರ ಶಿವನನ್ನು ಕುರಿತು, ಅನನ್ಯಭಾವದಿಂದ ಸ್ತುತಿಸುತ್ತಿದ್ದಂತೆ ಮೈಮರೆತು ಬಿದ್ದುಬಿಟ್ಟನು.

ಇವನ ಭಕ್ತಿಗೆ ಮೆಚ್ಚಿದ ಶಂಕರನು ಅವನನ್ನು ಎಬ್ಬಿಸಿ ತನ್ನ ನಿಜ ರೂಪವನ್ನು ತೋರಿಸಿ ತನ್ನೊಡನೆ ಕೈಲಾಸಕ್ಕೆ ಕರೆದೊಯ್ದು ಶಾಶ್ವತವಾದ ಗಣಪದವಿಯನ್ನಿತ್ತನು.

ನಾಡೆ ಪೊನ್ನಾಂಬಲವ ನೋಡುವಾತುರತೆ ಯೊಡ।
ಗೂಡಿ ನಿರ್ಮಳತೆ ದಳೆದ ತಿರುನಾಳ್ಪೋವ॥
ರೀಡಾಡಲೆನ್ನ ಭವವನ್ನು॥

—ಶ್ರೀ ನಿಜಗುಣ ಶಿವಯೋಗಿಗಳು.

# ೨೩. ಏಣಾಧಿನಾಥರು

ಮೃತ್ಯುಂಜಯನ ಮೈ ಬೆಳಗು ಎಂದು ಹೆಸರುವಾಸಿಯಾಗಿರುವ, ಅತಿ ಪವಿತ್ರವಾದ ವಿಭೂತಿಯು ಅತ್ಯಂತ ಫಲದಾಯಕವಾದುದೆಂದು ಶಿವಕವಿಗಳು ಪರಂಪರಾಗತರಾಗಿ, ನಾನಾ ವಿಧವಾಗಿ ಬಣ್ಣಿಸುತ್ತ ಬಂದಿರುವದು, ಬಣ್ಣಿಸುತ್ತಿರುವದು ಸರ್ವರಿಗೂ ವಿದಿತವಿದ್ದ ಸಂಗತಿಯಾಗಿದೆ.

ಧಿಗ್ಭಸ್ಮ ರಹಿತ ಫಾಲಂ। ಧಿಗ್ರಾಮಮವ ಶಿವಾಲಯಂ॥
ಧಿಗ ನೀಶಾರ್ಚನಂ ಜನ್ಮ। ಧಿಗ್ವಿದ್ಯಾಮ ಶಿವಾಶ್ರಯಂ॥

ವಿಭೂತಿ ರಹಿತವಾದ ಹಣೆ, ಶಿವಾಲಯಗಳಿಲ್ಲದ ಗ್ರಾಮ, ಈಶಾರ್ಚನೆಯಿಲ್ಲದ ಜನ್ಮ ಹಾಗೂ ಶಿವಸಂಬಂಧವಿಲ್ಲದ ವಿದ್ಯೆಯು ವ್ಯರ್ಥವೆಂದು ಜ್ಞಾನಿಗಳು ಸಾರಿಹೇಳಿರುವರು. ಚೋಳ ಮಂಡಲದಲ್ಲಿ ಪ್ರಸಿದ್ಧವಾದ ಕರಿಯೂರು ಎಂಬ ಪಟ್ಟಣದಲ್ಲಿ ಏಣಾಧಿನಾಥನೆಂಬ ಶಿವಭಕ್ತನು ವಾಸಿಸುತ್ತಿದ್ದನು.

ಈತನು ಸದಾಚಾರ ಸಂಪನ್ನರಾದ ಮಾತಾ-ಪಿತರಿಂದ ಒಳ್ಳೆಯ ಶಿಕ್ಷಣವನ್ನು ಪಡೆದು ಗುರು-ಲಿಂಗ-ಜಂಗಮರ ಸೇವಾ ಧುರೀಣನಾಗಿದ್ದನು. ಇವನು ಸುಶೀಲನಿದ್ದಂತೆ ಅತ್ಯಂತ ದೂರದರ್ಶಿಯೂ ಆಗಿದ್ದನು. ಶಿವಭಕ್ತರಲ್ಲದವರ ಸೇವೆಯ ಬಗೆಗೆ ಕನಸಿನಲ್ಲಿಯೂ ಅವನು ಯೋಚಿಸುತ್ತಿದ್ದಿಲ್ಲ. ಯಾವ ಕಾರ್ಯದಲ್ಲಿ ತೊಡಗಲಿ ? ಶಿವಗಣ ಸಮೂಹವೇ, ನನಗೆ ಯಾವ ಕಾರ್ಯವನ್ನು ನಿಯೋಜಿಸುವಿರಿ ? ಎಂದು ಹಂಬಲಿಸುತ್ತಿದ್ದನು.

ಒಂದು ದಿನ ಅವನು ಇದೇ ಯೋಚನೆಯಲ್ಲಿ ಮಲಗಿರುವಾಗ ಕನಸಿನೊಳಗೆ ವೀರಭದ್ರನು ಬಂದು ಒಂದು ದಿವ್ಯವಾದ ಕತ್ತಿಯನ್ನಿತ್ತು ಅಂತರ್ಧಾನನಾದನು. ಕೂಡಲೇ ಅವನಿಗೆ ಎಚ್ಚರವಾಯಿತು. ಎಚ್ಚೆತ್ತು ಅಕ್ಕಪಕ್ಕಕ್ಕೆ ದೃಷ್ಟಿ ಹಾಯಿಸಲು ತನ್ನ ಹಾಸುಗೆಯ ಮೇಲೆ ಲಕಲಕನೆ ಹೊಳೆಯುತ್ತಿರುವ ಒಂದು ಖಡ್ಗವು ಬಿದ್ದುಕೊಂಡಿರುವದು ಕಾಣಿಸಿತು. ಅದನ್ನು ಕಂಡು ಅವನ ಮೈನವಿರೆದ್ದಿತು.

ಹರಪ್ರಸಾದದಿಂದ ದೊರೆತ ಖಡ್ಗದಿಂದವನು ವಿಭೂತಿ, ರುದ್ರಾಕ್ಷ ಗಳನ್ನು ಧರಿಸದವರ ಶಿರಗಳನ್ನು ಕತ್ತರಿಸುತ್ತ ತಿರುಗುವದೇ ತನ್ನ ಕಾಯ ಕವೆಂದು ಭಾವಿಸಿದನು. ಅಲ್ಲದೆ ಅದೇರೀತಿ ವರ್ತಿಸುತ್ತ, ಪೂಜ್ಯ ಗುರು-ಜಂಗಮರಿಗೆ, ಅವರವರ ಇಚ್ಛಾನುಸಾರವಾಗಿ ತೃಪ್ತಿಗೊಳಿಸಿ ತನ್ಮೂಲಕ ಉಂಟಾದ ಆನಂದವನ್ನು ಶಿವಾರ್ಪಣ ಮಾಡಿ ಕಾಲ ಕಳೆಯ ತೊಡಗಿದನು. ಇದೇ ರೀತಿ ಕೆಲಸಂವತ್ಸರಗಳುಗತಿಸಿ ಹೋದವು.

ಮುಂದೊಂದು ದಿನ ಅಂಗದ ಮೇಲೆ ಲಿಂಗವಿಲ್ಲದ ಮಾರಾಂಕನೆಂಬ ಓರ್ವ ವೀರನು ಶರಭ-ಭೇರುಂಡನೆಂಬ ಬಿರುದಾವಳಿಗಳಿಂದ ಹೊಗಳಿಸಿ ಕೊಳ್ಳುತ್ತ ತನ್ನನ್ನು ಜಯಸುವಂಥವರು ಈ ಭೂಮಿತಾಯಿ ಹೆತ್ತಿಲ್ಲ. ಒಂದು ವೇಳೆ ಯಾರಾದರೂ ನನ್ನನ್ನು ಜಯಿಸಿದಲ್ಲಿ ಏಳುನೂರು ಹೊನ್ನು ಗಳನ್ನು ಕೊಡುವದಾಗಿ ಸಾರುತ್ತ ಬಂದನು.

ಈ ವಾರ್ತೆಯನ್ನು ಕೇಳಿ ಏಣಾಧಿನಾಥನಿಗೆ ಹಬ್ಬದ ಅಡಿಗೆ ಊಟ ಮಾಡಿದಷ್ಟು ಸಂತೋಷವಾಯಿತು. ಅಲ್ಲದೆ ಸಂತೋಷದ ಜೊತೆಗೆ ಉತ್ಸಾಹ ವೀರಾವೇಶಗಳು ಕೂಡ ಏಕಕಾಲಕ್ಕೆ ಉಂಟಾದವು. ಕೂಡಲೆ ಅವನು ಮಾರಾಂಕನು ಬಡಿಗೆಯ ತುದಿಗೆ ಬಿಗಿದ ಹೊನ್ನಿನ ಚೀಲವನ್ನು ತೆಗೆದುಕೊಂಡು ಜಂಗಮರಿಗೆ ದಾಸೋಹ ಮಾಡಿಸಿ ಶಿವಶರಣರನ್ನು ತೃಪ್ತಿ ಪಡಿಸಿ ಅವನೊಡನೆ ಕಾಳಗಕ್ಕೆ ಅಣಿಯಾದನು. ಈರ್ವರಲ್ಲಿಯೂ ನಿಕರದ ಕಾಳಗವಾಯಿತು. ಕೊನೆಗೆ ಅಲಿಂಗಿಯಾದ ಮಾರಾಂಕನು ಭೂಮಿಗೆರ ಗಿದನು.

ಏಣಾಧಿನಾಥನ ಪರಾಕ್ರಮವನ್ನು ಕಂಡು ಎಲ್ಲರೂ ಬೆರಗಾದರು. ಅರಸನಾದ ಪಗಲ್ಪೋಳನಂತೂ ತುಂಬಾ ಆನಂದಿತನಾಗಿ ಅವನನ್ನು ಆನೆಯ ಮೇಲೆ ಕುಳ್ಳಿರಿಸಿ ಮೆರವಣಿಗೆ ತೆಗೆದು ಧನ-ಕನಕಾದಿಗಳನ್ನಿತ್ತು ಸತ್ಕರಿಸಿದನು. ಆಗ ಶಿವಭಕ್ತನಾದ ಏಣಾಧಿನಾಥನು ಗುರು-ಲಿಂಗ-ಜಂಗ ಮರನ್ನು ಆದರಾತಿಥ್ಯಗಳಿಂದ ಸತ್ಕರಿಸಿ ಅವರು ಬೇಡಿದುದನ್ನು ಕೊಟ್ಟು ಶಿವಚಿಂತನೆಯಲ್ಲಿಯೇ ಕಾಲವನ್ನು ಕಳೆಯತೊಡಗಿದನು.

ಈತನ ಸರಿಸಮಾನನಾದ ಭಟರು ಎಲ್ಲಿಯೂ ಇಲ್ಲವೆಂಬ ಸುದ್ದಿಯು

ನಾಡಿನ ನಾಲ್ಕು ನಿಟ್ಟಿಗೂ ಗಾಳಿಯಂತೆ ಹಬ್ಬಿತು. ಕುಟಿಲಕಾರಸ್ಥಾನಿಯೂ, ಯಂತ್ರ-ತಂತ್ರಗಳ ಬಲವುಳ್ಳವನೂ, ಅತಿಗರ್ವಿಯೂ ಆದ ರಾಜಗುರು ಎಂಬೋರ್ವ ಭಟನು ಈ ಸುದ್ದಿಯನ್ನು ಕೇಳಿ ಸಾವಿರ ಹೊನ್ನುಗಳನ್ನು ಕಟ್ಟಿಕೊಂಡು ನನ್ನ ಸಮನಾದವರು ಯಾರೂ ಇಲ್ಲವೇ ಇಲ್ಲವೆಂದು ಭಟ್ಟಂಗಿಗಳಿಂದ ಹೊಗಳಿಸಿಕೊಳ್ಳುತ್ತ ಕರಿಯೂರಿಗೆ ಬಂದನು.

ಆಗ ಏಣಾಧಿನಾಥನು ರಾಜಗುರುವಿನೊಂದಿಗೆ ಕಾದಲು ಅಣಿಯಾದನು. ಅನಂತರ ಧೈರ್ಯ ಶೌರ್ಯಗಳಿಂದ ಅವನನ್ನು ಎದುರಿಸಿ ಕಾದುತ್ತ ಕೊನೆಗೆ ಪ್ರಮಥ ಗಣಂಗಳನ್ನೂ, ತನ್ನ ನಿಜಗುರುವನ್ನೂ ಮನದಲ್ಲಿಯೇ ಧ್ಯಾನಿಸುತ್ತ ರಾಜಗುರುವಿನ ಮೇಲೆ ಸಾಕ್ಷಾತ್ ವೀರಭದ್ರನು ದಯಪಾಲಿಸಿದ ಖಡ್ಗವನ್ನು ಬೀಸಲು ಅವನ ರುಂಡವು ಮುಂಡದಿಂದ ಬೇರೆಯಾಯಿತು. ಕೂಡಿದ ಜನರೆಲ್ಲರೂ ಸಂತೋಷದಿಂದ ಕೇಕೆಹಾಕಿದರು. ಅರಸನು ಅತೀವ ಆನಂದಿತನಾದನು. ಆದರೆ ಏಣಾಧಿನಾಥನು ಮಾತ್ರ ಹಿಗ್ಗದೆ-ಕುಗ್ಗದೆ ಮತ್ತೆ ತನ್ನ ಶಿವಚಿಂತನೆಯಲ್ಲಿಯೇ ಮಗ್ನನಾಗತೊಡಗಿದನು.

ರಾಜಗುರುವಿನ ಮರಣದ ವಾರ್ತೆಯನ್ನು ಕೇಳಿ ಅವನ ಮಗನು ಬಹುವ್ಯಾಕುಲಗೊಂಡನು. ತನ್ನ ತಂದೆಯ ಸೇಡನ್ನು ಯಾವ ರೀತಿ ತೀರಿಸಿಕೊಳ್ಳಬೇಕೆಂದು ತನ್ನ ತಾಯಿಯನ್ನು ಕೇಳಿದನು. ಅದಕ್ಕೆ ಅವನ ತಾಯಿಯು, " ಮಗನೇ ! ಆ ಏಣಾಧಿನಾಥನು ಮಹಾಪರಾಕ್ರಮಿಯು. ಸಮರದಲ್ಲಿ ಅವನನ್ನು ಜಯಿಸುವವರು ಈ ಭೂಮಿಯೊಳಗೆ ಯಾರೂ ಇಲ್ಲ. ಎಂಥವರೇ ಬರಲಿ, ಅವರನ್ನು ಲೀಲಾಜಾಲವಾಗಿ ಕೊಂದು ಹಾಕುವನು. ಆದರೆ ವಿಭೂತಿ, ರುದ್ರಾಕ್ಷಗಳನ್ನು ಮಾತ್ರ ಅವನು ಶಿವನೆಂದು ಭಾವಿಸ್ಸುವನು. ಅದಕ್ಕಾಗಿ ನೀನು ಅವನನ್ನು ಗೆಲ್ಲಬೇಕಾದರೆ ಶಿವಭಕ್ತನ ವೇಷದಿಂದ ಹೋದರೆ ಸಾಧ್ಯವಿದೆಯೇ ಹೊರ್ತು ಅನ್ಯಥಾ ಇಲ್ಲ " ಎಂದು ಹೇಳಿದಳು.

ತಾಯಿಯ ಮಾತುಗಳು ಅವನಿಗೂ ಸರಿಯೆನಿಸಿದವು. ಕೂಡಲೇ ಅವನು ಅದರಂತೆಯೇ ಮಾಡಬೇಕೆಂದು ನಿರ್ಧರಿಸಿ ತನ್ನ ತಂದೆಯಂತೆ ಸಾವಿರ ಹೊನ್ನುಗಳನ್ನು ಕಟ್ಟಿಕೊಂಡು ಕರಿಯೂರಿಗೆ ಬಂದು ನಾಳಿನ ದಿವಸ ನನ್ನೊಡನೆ ಯುದ್ಧಕ್ಕೆ ಬರಬಹುದೆಂದು ಏಣಾಧಿನಾಥನಿಗೆ ಹೇಳಿಕಳುಹಿ

ಸಿದನು. ಕೂಡಲೆ ಅವನು ಆಹ್ವಾನವನ್ನು ಸ್ವೀಕರಿಸಿ ಸಾವಿರ ಹೊನ್ನು ಗಳನ್ನು ಇಸಿದಿಕೊಂಡು ಜಂಗಮರನ್ನು ತೃಪ್ತಿಗೊಳಿಸಿ ಅರಸನಾದ ಪಗಲ್ಬೋಳನಿಗೂ ಹೇಳಿಕಳಿಸಿದನು.

ಮಾರನೆಯ ದಿನ ಬೆಳಗಾಗುತ್ತಲೆ ಏಣಾಧಿನಾಥನು ಭಸ್ಮ-ರುದ್ರಾಕ್ಷ ಗಳನ್ನು ಧರಿಸಿಕೊಂಡು ಕೈಲಿದ್ದ ಕತ್ತಿಯನ್ನು ಝಳಪಿಸುತ್ತ ಕಾಲರುದ್ರ ನಂತೆ ಪಟಾಂಗಣಕ್ಕೆ ಬಂದನು. ರಾಜಗುರುವಿನ ಮಗನು ಕೂಡ ಮೈತುಂಬ ಭಸ್ಮವನ್ನು ಧರಿಸಿ ಕಾದಲಣಿಯಾಗಿ ನಿಂತುಕೊಂಡಿದ್ದನು. ಇವನನ್ನು ನೋಡಿದೊಡನೆ ಏಣಾಧಿನಾಥನು ಕೈಯಲ್ಲಿಯ ಖಡ್ಗವನ್ನು ಬಿಸಾಕಿ "ಶಿವಶಿವಾ! ಶಿವಭಕ್ತರ ಮೇಲೆ ಕತ್ತಿಯನ್ನೆತ್ತುವದೇ? ಇದು ನನ್ನಿಂದ ಸಾಧ್ಯವೇ ಇಲ್ಲ.'' ಎಂದು ಸುಮ್ಮನೆ ನಿಂತುಕೊಂಡುಬಿಟ್ಟನು.

ಆಗ ಕೃತಕ ವೇಷದ ಭಕ್ತನು ಕರುಣೆಯಿಲ್ಲದೆ ಅವನ ರುಂಡವನ್ನು ಕೊಯ್ಯತೊಡಗಲು ಏಣಾಧಿನಾಥನು ಮಿಸುಕದೆ "ಶಿವಶಿವಾ'' ಎನ್ನುತ್ತ ನಿಂತುಕೊಂಡು ಬಿಟ್ಟಿದ್ದನು. ಅದನ್ನು ಕಂಡು ಆ ವೈರಿಯು ಅಂಜಿ ಕತ್ತಿ ಯನ್ನು ಬಿಸಾಕಿ ಅಲ್ಲಿಂದ ಕಾಲುಕಿತ್ತಿದನು. ಕೂಡಲೆ ಭಕ್ತವತ್ಸಲನಾದ ಪರಮಾತ್ಮನು ತನ್ನ ಅಮೃತಹಸ್ತದಿಂದ ಅವನ ಮೈದಡವಿ ಕೈಲಾಸಕ್ಕೆ ಕರೆದೊಯ್ದು ಗಣ ಪದವಿಯನಿತ್ತನು.

ಧುರದ ಭಟನೊಳು ಭಸಿತವಿರೆ ಕಂಡು ತನ್ನೊಡಲ ।
ನಿರಿದಿತ್ತ ನಿಷ್ಠೆರೆನಿಸಿ ದೇಣಾದಿ ನಾ ।
ಥರ ಚಾರವಾಗಿ ಬದುಕುವೆನು ॥

—ಶ್ರೀ ನಿಜಗುಣ ಶಿವಯೋಗಿಗಳು.

# ೨೪. ಸೇದಿರಾಜರು

ಶಿವಭಕ್ತರ ವಂಶವೆಂದು ಕರೆಯಿಸಿಕೊಳ್ಳುವ ಚೋಳರಾಜರ ವಂಶದಲ್ಲಿ ಸೇದಿರಾಜನು ಜನಿಸಿದನು. ಈತನಲ್ಲಿಯ ಶಿವಭಕ್ತಿಯು ವರ್ಣನಾತೀತವಾಗಿತ್ತು. ಶಿವಶಾಸ್ತ್ರಗಳಲ್ಲಿ ಆಸಕ್ತನಾದ ಈತನು ಶಿವಜ್ಞಾನ ದುರಂಧರನಾಗಿದ್ದನಲ್ಲದೆ ಜಂಗಮವೇ ಪರವೈವವೆಂದು ತಿಳಿದುಕೊಂಡವನಾಗಿದ್ದನು. ಧಾರ್ಮಿಕ ವೃತ್ತಿಯಲ್ಲಿ ಈ ರೀತಿಯಾಗಿದ್ದರೂ ಸಮರಾಂಗಣದಲ್ಲಿ ಇವನ ಎದುರಿಗೆ ನಿಂತು ಯುದ್ಧಮಾಡಿ ಗೆಲ್ಲುವವರು ಯಾರೂ ಇರಲಿಲ್ಲ.

ಈ ರೀತಿ ಸೇದಿರಾಜನು ರಾಜ್ಯಭಾರ ಮಾಡುತ್ತಿರಲು ನೆರೆಯ ರಾಜ್ಯದ ಮನ್ಮೆ ಎಂಬುವವನು ಇವನ ಉತ್ಕರ್ಷೆಯನ್ನು ಸಹಿಸದೆ ಚತುರಂಗ ಬಲ ಸಮೇತನಾಗಿ ಸೇದಿರಾಜನೊಡನೆ ಯುದ್ಧಕ್ಕೆ ಬಂದನು. ಈರ್ವರಿಗೂ ತುಮುಲ ಯುದ್ಧವಾಗಿ ಕೊನೆಗೆ ಮನ್ಮೆಯು ಸೋತು ಪಲಾಯನ ಮಾಡಿದನು. ಕೊನೆಗೆ ಅವನು ಯುದ್ಧದಲ್ಲಿ ಸೋತರೂ ಮೋಸದಿಂದಲಾದರೂ ಗೆಲ್ಲಬೇಕೆಂಬ ಇಚ್ಛೆಯುಳ್ಳವನಾಗಿ ಓರ್ವಶರಣನ ವೇಷದಿಂದ ಸೇದಿರಾಜನ ಒಡ್ಡೋಲಗವನ್ನು ಪ್ರವೇಶಿಸಿದನು.

ಜಂಗಮರನ್ನು ಸಾಕ್ಷಾತ್ ಶಂಕರನಂತೆ ಕಾಣುವ ಸೇದಿರಾಜನು ಕಪಟವೇಷಧಾರಿಯಾದ ಶರಣನನ್ನು ಆದರದಿಂದ ಸ್ವಾಗತಿಸಿ ವಾಡಿಕೆಯಂತೆ ಅವನ ಪೂಜೆಯಂಗೈದು ಪ್ರಸಾದ ಸ್ವೀಕರಿಸಲು ಆ ಕಪಟ ಶರಣನು,

''ಅಯ್ಯಾ ಧೊರೆಯೇ ! ನಾವು ಶೈವದ ಬಗೆಗೆ ಕೆಲವು ಮಹತ್ವದ ವಿಷಯಗಳನ್ನು ಅರಿತುಕೊಂಡಿದ್ದು ಅವುಗಳನ್ನು ನಿಮಗೆ ಹೇಳಬೇಕೆಂದು ಇಚ್ಛೆಯಾಗಿದೆ. ಅದಕ್ಕಾಗಿ ನೀನು ಈಗಲೇ ನನ್ನ ವಾಸಸ್ಥಾನಕ್ಕೆ ಬರಬೇಕು'' ಎಂದು ಹೇಳಿ ಅವನನ್ನು ತನ್ನ ಕುಟೀರಕ್ಕೆ ಕರೆದೊಯ್ದು ಕಪಟದ ಪೂಜೆಯ ತಂತ್ರ ಹೂಡಿ ಸಾಷ್ಟಾಂಗ ನಮಸ್ಕಾರ ಮಾಡಲು ಹೇಳಿದನು. ಧೊರೆಯು ಅದರಂತೆಯೇ ಮಾಡಲು ಆ ನೀಚನು ನಿಮಿಷವೂ ತಡಮಾಡದೆ ಬೆನ್ನಲ್ಲಿ ಅಲಗನ್ನು ತಿವಿದನು. ಆದರೂ ಅರಸನು ಏನೊಂದೂ ನುಡಿಯದೇ

"ಪೂಜ್ಯರೇ ನಿಮ್ಮ ಆಶೀರ್ವಾದದಿಂದ ಇದನ್ನೂ ಕಲಿತಂತಾಯಿತು" ಎಂದು ಹೇಳಿ ಉತ್ತರೀಯವನ್ನು ತುಂಬಾ ಹೊದೆದುಕೊಂಡು ಒಡ್ಡೋಲಗಕ್ಕೆ ಬಂದು ಕಪಟಶರಣನಿಗೆ ತುಂಬಾ ಉಡುಗೊರೆಗಳನ್ನಿತ್ತು ಕಳಿಸಿದನು.

ಅನಂತರ ಉತ್ತರೀಯವನ್ನು ತೆಗೆದೊಗೆಯಲು ಆ ತೀಕ್ಷ್ಣವಾದ ಅಲಗು ಎದೆಯೊಳಗಿಂದ ಪಾರಾಗಿದ್ದನ್ನು ಕಂಡು ಜನರು ಬೆರಳುಕಚ್ಚಿದರು. ಆದರೂ ಆ ಭಕ್ತನು ವಿಚಲನಾಗದೆ ಓರ್ವ ಶಿವಶರಣನನ್ನು ಕರೆದು ಅಲಗನ್ನು ಕೀಳಲು ಹೇಳಿದನು. ಬಂದವನು ಅದರಂತೆ ತನ್ನೆಲ್ಲ ಶಕ್ತಿಯನ್ನು ಕೇಂದ್ರೀಕರಿಸಿ ಅಲಗನ್ನು ಕಿತ್ತನು. ಆಗ ಪರಮೇಶ್ವರನು ಇವನಲ್ಲಿಯ ಭಕ್ತಿಗೆ ಮೆಚ್ಚಿ ತನ್ನ ನಿಜರೂಪವನ್ನು ತೋರಿಸಿ ಅವನನ್ನು ಕೈಲಾಸಕ್ಕೆ ಕರೆದೊಯ್ದು ಶಾಶ್ವತವಾದ ಗಣಪದವಿಯನ್ನು ಕೊಟ್ಟು ಹರಿಸಿದನು.

ಮುಳಿದು ಚರವೇಷಮಂ ತಳೆದು ಬಂದಿರಿಯೆ ಖಳ ।
ನಳುಕ ದೊಲವಾಂತ ಚಲಸೇದಿರಾಜನೆ ।
ನ್ನೊಳು ಶಾಂತಿ ಸುಖವ ನೆರೆಮಾಳ್ಕೆ ॥

--ಶ್ರೀ ನಿಜಗುಣ ಶಿವಯೋಗಿಗಳು.

## ೨೫. ಪೂಸಲೆಯಾಂಡರು

ದಯಾಸಾಗರನೂ, ಸುಗುಣಾ ನಿಧಿಯೂ, ಯಾರಿಗೂ . ನೋವಾಗದಂತೆ, ದುಃಖವಾಗದಂತೆ ನಡೆದುಕೊಳ್ಳುವವನೂ, ಶಿವಯೋಗವನ್ನು ಬಲ್ಲವನೂ, ಭಾವನಾಸಾಮರ್ಥ್ಯದಲ್ಲಿ ಗಟ್ಟಿಗನೂ ಆದ ಪೂಸಲೆಯಾಂಡನೆಂಬ ಯೋಗಿಯು ಚೋಳರಾಜ್ಯದಲ್ಲಿ ವಾಸವಾಗಿದ್ದನು.

ಇವನ ಕಾಲದಲ್ಲಿ ಚೋಳರಾಜ್ಯವನ್ನು ಮಹಾ ಪರಾಕ್ರಮಿಯೂ ಅರಿಭಯಂಕರನೂ, ಶಿವಪೂಜಾ ದುರಂಧರನೂ, ಎಲ್ಲರೂ ಮೆಚ್ಚುವಂತೆ ರಾಜ್ಯವನ್ನು ಪರಿಪಾಲಿಸುವವನೂ ಆದ ಪಗಲ್ಚೋಳನೆಂಬ ಅರಸನು ಪರಿಪಾಲಿಸುತ್ತಿದ್ದನು. ಆ ಅರಸನಿಗೆ ಒಂದು ಸಲ ಉತ್ಕೃಷ್ಟವಾದ ಶಿವಾಲಯವೊಂದನ್ನು ಕಟ್ಟಿಸಬೇಕೆಂಬ ಇಚ್ಛೆಯುಂಟಾಯಿತು. ಕೂಡಲೇ ಅವನು ನಾಡಿನ ನಾಲ್ಕೂ ದಿಕ್ಕಿನಿಂದ ಕುಶಲ ಕೆಲಸಗಾರರನ್ನೂ ನುರಿತ ಉಪ್ಪಾರರನ್ನೂ ಕರಿಯೂರಿಗೆ ಕರೆಯಿಸಿಕೊಂಡನು.

ಅನಂತರ ಒಂದು ನಿಮಿಷವೂ ತಡಮಾಡದೆ ಮಂದಿರದ ಕಾರ್ಯವನ್ನು ಪ್ರಾರಂಭಿಸಿ ಎಂಥವರಲ್ಲಿಯೂ ದೈವತ್ವದ ಭಾವನೆಯುಂಟಾಗುವಂತೆ ಅತ್ಯುನ್ನತ ಶಿಖರದೊಂದಿಗೆ ಇಂದ್ರಭವನದಂತೆ ಥಂಗೊಳಿಸುವ ಮಂದಿರವೊಂದನ್ನು ಕಟ್ಟಿಸಿದನು. ಆ ಗುಡಿಯ ಸಿರಿಯನ್ನು ಕಂಡು ವರ್ಣಿಸದಂಥವರೇ ಇಲ್ಲವಾದರು, ಆ ಶಿವಾಲಯದ ಕೀರ್ತಿಯು ದಿಕ್‌ದಿಗಂತದ ವರೆಗೂ ಹಬ್ಬಿತು.

ಒಂದು ದಿನ ಪಗಲ್ಚೋಳನು ಕೂಡ ಮಂದಿರದ ಹೊರಮುಗ್ಗಲಿಗಿರುವ ಉದ್ಯಾನವನದಲ್ಲಿ ಒರಗಿಕೊಂಡು ಮಂದಿರದ ಸೌಂದರ್ಯವನ್ನು ನಿರೀಕ್ಷಿಸತೊಡಗಿದನು. ತನ್ನ ನಿರೀಕ್ಷಣೆಗೂ ಮೀರಿ ಸುಂದರವಾಗಿ ನಿಂತಿದ್ದ ಮಂದಿರವನ್ನು ಕಂಡು ಅವನ ಎದೆ ಉಬ್ಬಿತು. ಒಂದು ಗಳಿಗೆ ತನ್ನನ್ನು ತಾನೇ ಮರೆತುಬಿಟ್ಟ.

ಮರುಕ್ಷಣವೇ " ತಾನು ಎಂಥ ಮಂದಿರವನ್ನು ನಿರ್ಮಿಸಬೇಕೆಂದು ಅದನ್ನು ಮನದೊಳಗೆ ಕಲ್ಪಿಸಿಕೊಂಡಿದ್ದನೋ, ಅಂಥದೇ ಅಲ್ಲದೆ ಅದಕ್ಕೂ

ಮಿಗಿಲಾಗಿ ಸೌಂದರ್ಯವುಳ್ಳ ಮಂದಿರ ನಿರ್ಮಿತವಾದುದು ಅವನಿಗೆ ಅತೀವ ಆನಂದವನ್ನುಂಟುಮಾಡಿತು''.

ಪೂಸಲೆಯಾಂಡನು ಕೂಡ ಪರ್ಯಟನ ಮಾಡುತ್ತ ಕರಿಯೂರಿಗೆ ಬಂದು ಭವ್ಯವಾದ, ಸೌಂದರ್ಯಯುಕ್ತವಾದ ಆ ಶಿವಾಲಯವನ್ನು ಕಂಡು ಆನಂದಿತನಾಗಿ ಆ ಮಂದಿರದ ಎದುರಿಗಿನ ಮಹಾವೃಕ್ಷದ ಅಡಿಯಲ್ಲಿ ಕುಳಿತು ಕೊಂಡು ಅದರ ಸೌಂದರ್ಯವನ್ನು ನಿರೀಕ್ಷಿಸತೊಡಗಿದನು. ಕೂಡಲೆ ಅವನು ತನ್ನ ಭಾವನಾಬಲದಿಂದ ತನ್ನ ಮನೋಮಂದಿರದಲ್ಲಿ ( ಅಂದರೆ ಅದಕ್ಕೆ ತನ್ನ ಹೃದಯವೇ ಶ್ರೇಷ್ಟಸ್ಥಾನವೆಂಬುದನ್ನು ಅರಿತುಕೊಂಡು ) ಚೋಳಚಕ್ರವರ್ತಿಯಾದ ಪಗಲ್ಕೋಳನು ಕಟ್ಟಿಸಿದಂತೆ ತನ್ನದೇಹದಲ್ಲಿಯೇ ಆ ಶಿವಾಲಯವನ್ನು ನಿರ್ಮಿಸಿಕೊಂಡನು.

ಆ ರೀತಿಯಾಗಿ ತನ್ನ ಹೃದಯದೊಳಗೆ ಮಂದಿರವನ್ನು ನಿರ್ಮಿಸಿ ಕೊಂಡ ಅವನು ಎಣೆಯಿಲ್ಲದ ಸಂತೋಷವನ್ನು ಹೊಂದಿ ಬಾರಿ ಬಾರಿಗೂ ಹರ್ಷಾತಿರೇಕದ ಸಮಸ್ತ ಚಿಹ್ನಗಳನ್ನು ತೋರ್ಪಡಿಸುತ್ತ ತನ್ನ ಭಕ್ತಿ ಯಲ್ಲಿಯೇ ಪರವಶನಾಗಿ ಹೋಗಿದ್ದನು. ಇದನ್ನು ಕಂಡು ಅತ್ತ ಕಡೆಗೆ ಹೋಗಿ ಬರುವ ಜನರು ಈ ಸಂಗತಿಯನ್ನು ಥೊರೆಯಾದ ಪಗಲ್ಕೋಳನಿಗೆ ಅರುಹಿದರು.

ಕೂಡಲೆ ಅರಸನು ಒಂದು ಗಳಿಗೆಯೂ ವಿಳಂಬ ಮಾಡದೆ ಅಲ್ಲಿಗೆ ಬಂದು ಪ್ರಚಂಡಶಿವಭಕ್ತನಾದ ಪೂಸಲೆಯಾಂಡನಿಗೆ ಸತ್ಕರಿಸಿ ಅನಂತರ ಅವನೆದುರು ನಿಂತುಕೊಂಡು, " ಪ್ರಭುಗಳೇ ಇದೇನು ವಿಶೇಷ? ತಾವು ಈ ರೀತಿ ಏತಕ್ಕೆ ಮಾಡುತ್ತಿರುವಿರಿ "ಎಂದು ಕೇಳಲು ಆ ಭಕ್ತಶಿರೋಮಣಿಯು, " ಭುವನೀಶಾ ನೀನು ಕಟ್ಟಿಸಿದಂಥ ಈ ಮಂದಿರವನ್ನು ನೋಡಿ ನನ್ನೊಳಗೆ ಒಂದು ವಿಧವಾದ ಮೋಹವುಂಟಾಗಿದೆ. ಈ ಶಿವಮಂದಿರವು ನನ್ನ ಭಕ್ತಿಯ ಅಭಿಮಾನಿಯೂ, ಪುಣ್ಯಮೂರ್ತಿಯೂ ಆದ ಪರಮೇಶ್ವರನಿಂದ ರಾರಾಜಿ ಸುತ್ತಿರುವದನ್ನು ಕಂಡು ನಾನು ಸಂತೋಷ ಸಾಗರದಲ್ಲಿ ಈಜಾಡತೊಡಗಿ ದ್ದೇನೆ'' ಎಂದನು.

ಆಗ ಅರಸನು ವಿನೀತಭಾವದಿಂದ ಕೈಮುಗಿದು, " ಯತಿವರ್ಯರೇ ! ತಾವು ನಿರ್ಮಿಸಿದ ಅಪ್ರತಿಮ ಶಿವಮಂದಿರದ ಸೌಂದರ್ಯವನ್ನು ನನಗೂ

ತೋರಿಸುವ ಕೃಪೆ ಮಾಡಬೇಕೆಂದು " ಬಿನ್ನವಿಸಿಕೊಳ್ಳಲು ಆ ಶಿವಶರಣನು ಹಾಗೆಯೇ ಆಗಲೆಂದು ತನ್ನ ಎದೆಯನ್ನೇ ಬಿಚ್ಚಿ ತೋರಿಸಲು ಆ ಎದೆಯಲ್ಲಿ ಅಂಥ ಮಂದಿರವೇ ಇರುವದನ್ನು ಕಂಡು ಅರಸನು ಆನಂದಾಶ್ಚರ್ಯಗಳನ್ನು ವ್ಯಕ್ತಮಾಡಿದನು. ಆಗಲೇ ದೇವದೇವನಾದ ಮಹಾದೇವನು ಪೂಸಲೆಯಾಂಡನಿಗೆ ದರ್ಶನವನ್ನಿತ್ತು ಅವನನ್ನು ಕೈಲಾಸಕ್ಕೆ ಕರೆದೊಯ್ದು ಅಮರವಾದಂಥ ಗಣಪದವಿಯನ್ನು ದಯಪಾಲಿಸಿದನು.

ಮಿಸುಪ ಲಿಂಗಕ್ಕೆ ಮಾ ।
ನಸದಲ್ಲಿ ಗುಡಿಗಟ್ಟಿ ಒಸೆದು ಸಂಪೂಜ್ಯ ಸಹ ಪೂಸಲೆಯಾಂಡ ನೀ
ನಸಮು ಪುಣ್ಯವೆನೆ ನಳಿಮಾಳ್ಕೆ ॥

ಶ್ರೀ ನಿಜಗುಣ ಶಿವಯೋಗಿಗಳು



## ೨೬. ಕಂಗುಲಿಯ ಕಲಿಯಾಂಡರು

ಶಿವಭಕ್ತರ ತವರುಮನೆಯೆನಿಸಿದ ಚೋಳಮಂಡಲವು ನೀತಿಯ ಬೀಡಾಗಿ ಸತ್ಕಾರ್ಯನಿರತರ ನೆಲೆವೀಡಾಗಿದ್ದಂತೆ ಅಲ್ಲಿಯ ಶಿವಾಲಯಗಳು ಈಶ್ವರನ ಭೂಲೋಕದ ನಿವಾಸಸ್ಥಾನವೇನೋ ಎಂಬಷ್ಟು ರಮಣೀಯವಾಗಿದ್ದವು. ಇಂತಹ ಮನೋಹರವಾದ ನಾಡಿನಲ್ಲಿ ಕಡವೂರೆಂಬ ನಗರವು ಶಿವನ ಪ್ರೀತಿಗೆ ಪಾತ್ರನಾದ ಕಲಿಯಾಂಡನೆಂಬ ಭಕ್ತಶ್ರೇಷ್ಟನಿಂದ ಶೋಭಿಸುತ್ತಿತ್ತು.

ಆ ಕಲಿಯಾಂಡನಿಗೆ ಧನ-ಧಾನ್ಯ-ಕನಕಗಳೇ ಮೊದಲಾದ ಯಾವ ಸಂಪತ್ತಿಗೂ ಕೊರತೆಯಿರಲಿಲ್ಲ. ಅವನು ದಿನಂಪ್ರತಿ ಕಡವೂರೇಶ್ವರಾಯಲಕ್ಕೆ ಹೋಗಿ ಭಕ್ತಿರಸವೆಂಬ ಉದಕದಿಂದ ಮಜ್ಜನಮಾಡಿಸಿ ಶಾಂತಿಯೆಂಬ ಕ್ಷೀರದಿಂದ ಅಭಿಷೇಕ ಮಾಡಿಸಿ ಧೂಪವನ್ನು ಅತ್ಯಂತ ನಿರ್ಮಲ ಮನಸ್ಕನಾಗಿ ಆ ದೇವದೇವನಿಗರ್ಪಿಸಿ ಆನಂದದಿಂದ ಹಿಂತಿರುಗುವದು ಆ ಕಲಿಯಾಂಡನ ನಿಯಮವಾಗಿತ್ತು.

ಇವನಲ್ಲಿ ಮನೆಮಾಡಿಕೊಂಡಿರುವ ಅಮೋಘವಾದ ದೇವತಾಪ್ರೇಮವು, ಸದಸದ್ವಿವೇಕದಿಂದೊಡಗೂಡಿದ ಈಶಭಕ್ತಿಯು ದಿನದಿನಕ್ಕೂ ಅಭಿವೃದ್ಧಿಗೊಳ್ಳುತ್ತ ನಡೆದಂತೆ ಅವನ ಪುಣ್ಯಸಂಚಯ ಕಾರ್ಯವೂ ಅದೇ ರೀತಿ ಸಾಗಿತ್ತು. ಕಲಿಯಾಂಡನಲ್ಲಿಯ ಅಸೀಮಭಕ್ತಿಯ ಖ್ಯಾತಿಯು ಕೈಲಾಸಕ್ಕೂ ತಲುಪಿತು. ಅದನ್ನು ಕೇಳಿ ಮೃತ್ಯುಂಜಯನೂ ಗಣ ಸಮೂಹವೂ ಸಂತಸಬಟ್ಟಿತು. ಆಗ ಗಿರಿಜಾವಲ್ಲಭನಿಗೆ ಈತನ ಭಕ್ತಿಯನ್ನು ಪರೀಕ್ಷಿಸಬೇಕೆಂಬ ಇಚ್ಛೆಯು ಉತ್ಪನ್ನವಾಯಿತು.

ಪರೀಕ್ಷೆಯ ಮೊದಲಹಂತವೆನ್ನುವಂತೆ ಕಲಿಯಾಂಡನ ಬಳಿಯ ತೀರುತ್ತ ಬಂದಿತು. ಕೊನೆಗೆ ಬಡತನವೂ ಬಂದಿತು. ಆದರೂ ಆ ಧೀರನು ಎದೆಗುಂದಲಿಲ್ಲ. ಬರಬರುತ್ತ ಧನದ ಅಭಾವದಿಂದಾಗಿ ಧೂಪವೂ ಸಿಗದಂತಾಯಿತು. ಆಗ ಮಾತ್ರ ಕಲಿಯಾಂಡನು ಒತ್ತಟ್ಟಿಗೆ ಕುಳಿತುಕೊಳ್ಳುವ

ದೊಳಿತಲ್ಲವೆಂದು ಭಾವಿಸಿ ಧೂಪಕ್ಕೋಸುಗ ಹಣವನ್ನು ಕೂಡಿಸಲೋಸುಗ ಬೇರೆ ಬೇರೆ ಪಟ್ಟಣಗಳನ್ನು ಸುತ್ತತೊಡಗಿದನು. ಆ ರೀತಿ ಸುತ್ತುತ್ತಿರುವಾಗ ಅವನು ತಿರಿಪಿನಂದನ ಪುರಕ್ಕೆ ಬಂದನು. ಆ ಸಮಯದಲ್ಲಿ ಭೂಪತಿಯು ಅಲ್ಲಿಯ ಶಿವಾಲಯದ ಉತ್ಸವವನ್ನು ನಡೆಯಿಸಿದ್ದನು.

ಅದೇ ಸಮಯಕ್ಕೆ ಅಕಸ್ಮಿಕವಾಗಿ ಅಲ್ಲಿಯ ಲಿಂಗವು ಉತ್ತರದ ಕಡೆಗೆ ಕೊಂಚ ವಾಲಿತು. ಅದನ್ನು ಕಂಡು ಭಕ್ತಾಗ್ರಣಿಯಾದ ಚೋಳರಾಜನು ವಿಸ್ಮಿತನಾದನು. ಆದರೂ ಅದನ್ನು ಸರಿಯಾಗಿ ಮಾಡಬೇಕೆಂದು ಲಿಂಗುವಿಗೆ ಹಗ್ಗವನ್ನು ಬಿಗಿದು ಎತ್ತುಗಳಿಂದ ಜಗ್ಗಿಸಿದರೂ ಅದು ಸರಿಯಾಗಲಿಲ್ಲ. ಇಷ್ಟೇ ಅಲ್ಲ; ಅದು ಅಣುಮಾತ್ರವೂ ಮಿಸುಕಲಿಲ್ಲ. ಆಗ ಭೂಪತಿಯು ಇಂಥ ಮಹನ್‌ಲಿಂಗವನ್ನು ಎತ್ತುಗಳಿಂದ ನೆಟ್ಟಗೆ ಮಾಡಲು ಹೊರಟದ್ದು ತನ್ನದು ಮೂರ್ಖತನವಾಯಿತೆಂದು ಸಕಾಲದಲ್ಲಿಯೇ ಅರಿತುಕೊಂಡು "ಲಿಂಗವನ್ನು ಸರಿಪಡಿಸಿದವರಿಗೆ ನಾಲ್ಕುಸಾವಿರ ಹೊನ್ನು ಕೊಡುವದಾಗಿ" ಡಂಗುರ ಸಾರಿಸಿ ಹೊನ್ನುತುಂಬಿದ ಚೀಲವನ್ನುಮಂದಿರದ ಮಹಾದ್ವಾರಕ್ಕೆ ಕಟ್ಟಿಸಿದನು.

ಈ ಸಂಗತಿಯನ್ನು ಕೇಳಿದೊಡನೆ ಕಲಿಯಾಂಡನಿಗೆ ಅತೀವ ಆನಂದವಾಯಿತು. ಕೂಡಲೇ ಅವನು ಆ ಹೊನ್ನಿನ ಚೀಲವನ್ನು ತೆಗೆದುಕೊಂಡು ಅದರದಿಂದ ಗುಗ್ಗಳ ಹಾಗು ಧೂಪಗಳನ್ನು ಸಾಕಾದಷ್ಟು ತೆಗೆದುಕೊಂಡು ಮಂದಿರಕ್ಕೆ ಹೋಗಿ ಮೊದಲು ತನ್ನ ನಿಯಮನ್ನು ಅತ್ಯಂತ ಪ್ರೇಮದಿಂದ ಮುಗಿಸಿದನು. ಅಲ್ಲದೆ ತಾನು ತಂದಿರುವ ಗುಗ್ಗಳ ಧೂಪವನ್ನು ಭಕ್ತಿಯಿಂದ ಸಮರ್ಪಿಸಿ ಆದರ ಪರಿಮಳವನ್ನು ಸ್ವೀಕರಿಸಬೇಕೆಂದು ದಯಾಘನನಾದ ಗಿರಿಜಾವಲ್ಲಭನಿಗೆ ಬೇಡಿಕೊಂಡು ಎಣೆಯಿಲ್ಲದಷ್ಟು ಪ್ರಣಾಮಗಳನ್ನು ಮಾಡುತ್ತ ತನ್ನಅಭೀಷ್ಟವು ನೆರವೇರುವಂತೆ ಕರುಣಿಸಲು ಕೇಳಿಕೊಂಡನು.

ಅನಂತರ ಸನ್ನದ್ಧನಾಗಿ ಲಿಂಗದೆದುರು ನಿಂತುಕೊಂಡು ಕೈಜೋಡಿಸಿ "ಹೇ ದೇವದೇವಾ ! ನೀನು ಈ ರೀತಿ ಒಂದೇ ಮಗ್ಗುಲಿಗೆ ಬಾಗಿರುವದರಿಂದ ನಿನ್ನ ಸುಕೋಮಲವಾದ ಶರೀರವು ನೋಯುವದಿಲ್ಲವೇ ? ಅದನ್ನು ನಿನ್ನ ಭಕ್ತರಾದರೂ ಹೇಗೆ ಸಹಿಸಬೇಕು?'' ಎಂದು ನುಡಿಯುತೊಡಗಿದನು.

ಇವನ ಮಾತುಗಳನ್ನು ಕೇಳಿ ಚೋಳರಾಜನಾದಿ ಇತರ ಎಲ್ಲರಿಗೂ

ಅಚ್ಚರಿಯಾಯಿತು. ಇದಾವುದರ ಕಡೆಗೂ ಗಮನವೀಯದ ಅವನು ಕಠಾರಿಯ ತುದಿಯನ್ನು ತನ್ನ ಕತ್ತಿಗೆ ತಾಗಿಸಿಕೊಂಡು ಅದರ ಹಿಂಭಾಗಕ್ಕೆ ಒಂದು ಬಲವಾದ ಸೂತ್ರವನ್ನು ಅಂಟಿಸಿ ಆ ಸೂತ್ರವನ್ನು ಬಾಗಿರುವ ಲಿಂಗದ ಭಾಗಕ್ಕೆ ಸುತ್ತಿ ಭೂತನಾಥನನ್ನು ಬಾರಿಬಾರಿಗೂ ನೆನೆಯುತ್ತ ಆ ಲಿಂಗವನ್ನು ನೋಡುತ್ತ ವೀರೋದ್ರೇಕಮಯವಾದ ಭಕ್ತಿಯಿಂದ ಕಂಠ ಸೂತ್ರವನ್ನು ಜಗ್ಗಿದನು. ಆಗ ಕೂಡಿದವರೆಲ್ಲರೂ ಅಚ್ಚರಿಗೊಳ್ಳುವಂತೆ ಆ ಲಿಂಗಮೂರ್ತಿಯು ನೆಟ್ಟಗಾಯಿತು.

ಅವನಲ್ಲಿಯ ಅಪಾರ ಭಕ್ತಿಯನ್ನು ಕಂಡು ಶಿಷ್ಯರಕ್ಷಕನಾದ ಸಾಂಬ ಶಿವನು ತನ್ನ ನಿಜರೂಪವನ್ನು ತೋರಿಸಿ ಅವನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನಿತನು.

ನಲಿದಿಕ್ಕಿ ಧೂಪವುಂ, ನೆಲನರಿಯೆ ಶಿವಲಿಂಗ ।
ದೊಲವಿನೊಯ್ಯಾರವಗೆ ತಿರ್ದಿದವುಳ ಕಂ ।
ಗುಲಿಯ ಕಲಿಯರ್ಗೆ ಮಣಿಯುವೆನು ॥

—ಶ್ರೀ ನಿಜಗುಣ ಶಿವಯೋಗಿಗಳು

# ೨೭. ಇರಿಭಕ್ತರು

ಚೋಳಮಂಡಲಾಧೀಶ್ವರನಾದ ಪಗಲ್ಚೋಳ ಭೂಪತಿಯು ಧರ್ಮ ದಿಂದ ರಾಜ್ಯಭಾರ ಮಾಡುತ್ತಿದ್ದನು. ಈತನು ಅತ್ಯಂತ ಧರ್ಮಿಷ್ಟನಿದ್ದು ದರಿಂದಲೇ ಕಾಲಕಾಲಕ್ಕೆ ಮಳೆಬಂದು ಭೂಮಿಗಳು ಸರಿಯಾಗಿ ಬೆಳೆಯು ತ್ತಿದ್ದವು. ಅವನ ಪ್ರಜೆಗಳು ಸಹಿತ ಸದಾ ಸತ್ಕಾರ್ಯನಿರತರಾಗಿರುತ್ತಿ ದ್ದರು. ಹೀಗಾಗಿ ಚೋಳರಾಜ್ಯವು ಸುಖಶಾಂತಿಗಳ ತವರುಮನೆಯೆಂದು ಹೆಸರುವಾಸಿಯಾಗಿತ್ತು.

ಈ ರಾಜ್ಯಕ್ಕೆ ತಕ್ಕಂತೆಯೇ ಕರಿಯೂರು ರಾಜಧಾನಿಯಿದ್ದಿತು. ಅಲ್ಲಿ ಇರಿಭಕ್ತನೆಂಬ ಶಿವಭಕ್ತನು ವಾಸವಾಗಿದ್ದನು. ಈತನು ಮಹಾ ಶೂರನೂ. ವಿನಯಶೀಲನೂ, ಸದಾಚಾರಸಂಪನ್ನನೂ, ಶಿವಭಕ್ತರನ್ನು ರಕ್ಷಿಸುವಲ್ಲಿ ತನ್ನ ಪ್ರಾಣವನ್ನೇ ಪಣವೊಡ್ಡಲು ಹಿಂದೆಮುಂದೆ ನೋಡ ದವನೂ ಆಗಿದ್ದನು. ಶಿವಭಕ್ತರ ಕೋರಿಕೆಗಳನ್ನು ನೆರವೇರಿಸುವದರಲ್ಲಿ ಅವನಿಗೆ ಅತ್ಯಂತ ಹರುಷವಾಗುತ್ತಿದ್ದಿತು. ಅದರಂತೆ ಶಿವನ ಸಂಬಂಧ ವಾದ ಯಾವುದೇ ವಿಷಯಗಳನ್ನು ಕೇಳುವಲ್ಲಿ ಅತ್ಯಂತ ಕುತೂಹಲವುಳ್ಳ ವನಾಗಿದ್ದನು.

ಶಿವಘೋಷವನ್ನಾಲಿಸಲು ಅತ್ಯಂತ ಉತ್ಸಾಹಿಯಾದ ಈತನಿಗೆ ಶಿವ ನಿಂದೆಯನ್ನು ಕೇಳುವದಾಗುತ್ತಿರಲಿಲ್ಲ. ಗುರು-ಲಿಂಗ-ಜಂಗಮ-ವಿಭೂತಿ- ರುದ್ರಾಕ್ಷಿ-ಮಂತ್ರ-ಪಾದೋದಕ ಹಾಗು ಪ್ರಸಾದಗಳೆಂಬ ಅಷ್ಟಾವರಣಗಳು ಇವನಿಗೆ ಶರೀರದ ಮುಖ್ಯ ಅವಯವಗಳಂತಿದ್ದವು. ಅಲ್ಲದೆ ಶರೀರಕ್ಕೆ ಪ್ರಾಣವು ಪ್ರಾಧಾನ್ಯವಾಗಿರುವಂತೆ ಸದಾಚಾರ-ಶಿವಾಚಾರ—ಲಿಂಗಾಚಾರ ಭೃತ್ಯಾಚಾರ-ಗಣಾಚಾರಗಳೆಂಬ ಪಂಚಾಚಾರದ ನಿಯಮಗಳನ್ನು ಆಚರಿ ಸುತ್ತ ಗಣಾಚಾರವನ್ನು ತನ್ನ ಮುಖ್ಯ ಹೇತುವನ್ನಾಗಿಸಿಕೊಂಡಿದ್ದನು.

ಈತನು ದಿನಂಪ್ರತಿ ಕರಿಯೂರೇಶ್ವರನ ದೇವಾಲಯಕ್ಕೆ ಹೋಗಿ ನಲುಮೆಯಿಂದ ಪೂಜಿಸಿ, "ಹೇ ಕರುಣಾಕರನಾದ ಜಗದೀಶನೇ!

ನಾನು ಪಂಚಾಚಾರಗಳಲ್ಲೊಂದಾದ ಗಣಾಚಾರವನ್ನೇ ಮುಖ್ಯವಾಗಿಟ್ಟು ಕೊಂಡು ಅದರ ಪ್ರತೀಕವೆಂಬಂತೆ ಪರಶುವನ್ನು ಧರಿಸಿರುವೆನು. ಗಣಾ ಚಾರವನ್ನು ಪಾಲಿಸುವದೇ ಶಿವಸಾಧನವೆಂದು ನಾನು ಭಾವಿಸಿಕೊಂಡಿ ದ್ದೇನೆ. ಶಿವದೂಷಕರನ್ನು ನಿರ್ಮೂಲಗೊಳಿಸುವದೇ ನನ್ನ ಕಾಯಕವು' ಎಂದು ಆ ಕರುಣಾಕರನನ್ನು ಮತ್ತೆಮತ್ತೆ ಬೇಡಿಕೊಳ್ಳುತ್ತಿದ್ದನು. ಅಲ್ಲದೆ ಅದರಂತೆ ಚಾಚೂ ತಪ್ಪದೆ ನಡೆದು ಶಿವದೂಷಕರ ರುಂಡಗಳನ್ನು ಕಾಲ ರುದ್ರನಂತೆ ಚಂಡಾಡುತ್ತಿದ್ದನು.

ಒಂದು ಸಲ ಓರ್ವ ಗರ್ವಿಷ್ಟನು ಇರಿಭಕ್ತನೆದುರಿಗೆ ಬಂದನು. ಆಗ ಆತನು ಅವನಿಗೆ ವಿಭೂತಿಯನ್ನು ಪ್ರದಾನಮಾಡಲು ವಿಭೂತಿಯ ಮಹಿಮೆಯನ್ನರಿಯದ ಆ ಗರ್ವಿಷ್ಟನು, ಶಿವಭಕ್ತನು ಹಚ್ಚಿದ ಭಸ್ಮವನ್ನು ತೊಡೆದು ಅವನಿಗೆ ಬಾಯಿಗೆ ಬಂದಂತೆ ಹೀನಾಮಾನವಾಗಿ ಬಯ್ದು ಬಿಟ್ಟನು. ಕೂಡಿದ ಜನರೆಲ್ಲರೂ ಅಚ್ಚರಿಯಿಂದ ಅವನತ್ತ ನೋಡುತ್ತಿರಲು, ಇರಿಭಕ್ತನು ಕೂಡಲೇ ಅವನ ರುಂಡವನ್ನು ಮುಂಡದಿಂದ ಬೇರೆ ಮಾಡಿ ದನು. ಆಗ ಅವನ ಸಂಬಂಧಿಕರು ಅರಸನಲ್ಲಿಗೆ ಹೋಗಿ—"ಭುವನೀಶನೇ! ಶಿವಭಕ್ತನಲ್ಲವೆಂಬ ಮಾತ್ರಕ್ಕೆ ನಿರಪರಾಧಿಯಾದವನನ್ನು ನಿಷ್ಕರುಣೆ ಯಿಂದ ಇರಿಭಕ್ತನು ತನ್ನ ಪರಶುವಿನಿಂದ ರುಂಡವನ್ನು ಕತ್ತರಿಸ ಹಾಕಿ ದನು. ಅವನ ಉಪಟಳವು ಇದೇರೀತಿ ಸಾಗಿದರೆ ಜನರು ಬದುಕುವ ದಾದರೂ ಹೇಗೆ ? ನಮಗೆ ನ್ಯಾಯ ದೊರೆಯುವಂತೆ ಮಾಡಬೇಕು" ಎಂದು ಬಿನ್ನವಿಸಿಕೊಂಡರು.

ದೂರದರ್ಶಿಯೂ, ಶಿವಾಚಾರ ನಿಷ್ಟನೂ ಆದ ಆ ಪಗಲ್ಚೋಳ ಧೊರೆಯು ಅವರ ಮಾತುಗಳನ್ನು ಕೇಳಿ ಮನದೊಳಗೆ ವಿಚಾರಮಾಡತೊಡ ಗಿದನು. ವೀರಗಣಾಚಾರ ವೃತ್ತಿಯ ಇರಿಭಕ್ತನ ಕೃತ್ಯದಿಂದ ಅವನಿಗೆ ತುಂಬಾ ಆನಂದವಾಗಿತ್ತು. ತನಗಾದ ಆನಂದವನ್ನು ಹತ್ತಿಕ್ಕಿ ಇರಿಭಕ್ತ ನನ್ನು ಕರೆತರಲು ಆಜ್ಞಾಪಿಸಿದನು. ಇನ್ನು ಇರಿಭಕ್ತನಿಗೆ ತಕ್ಕ ಶಿಕ್ಷೆಯಾ ಗುವದೆಂದು ದೂರು ಕೊಡಲು ಬಂದವರು ಮನದಲ್ಲಿಯೇ ಎಣಿಕೆ ಹಾಕ ತೊಡಗಿದ್ದರು.

ರಾಜಾಜ್ಞೆಯನ್ನು ಮನ್ನಿಸಿ ಇರಿಭಕ್ತನು ಪರುಶು ·ಸಹಿತನಾಗಿ

ಒಡ್ಡೋಲಗಕ್ಕೆ ಬಂದು ಕುಳಿತುಕೊಂಡನು. ಆಗ ಪಗಲ್ಪೋಳರಾಜನು—
"ಶಿವಭಕ್ತರೇ! ತಾವು ನಿರಪರಾಧಿಯೋರ್ವನನ್ನು ಕರುಣೆಯಿಲ್ಲದೆ ಕೊಂದು
ಹಾಕಿದ್ದೀರೆಂದು ನಮ್ಮ ಬಳಿ ದೂರು ಬಂದಿದೆ. ಈ ಬಗ್ಗೆ ತಾವು ಏನು
ಹೇಳುವಿರಿ ?'' ಎಂದನು.

ಆಗ ಶಿವಭಕ್ತನಾದ ಇರಿಭಕ್ತನು— ''ಧರಣೀ ಪತಿಯೇ ! ನನ್ನಿಂದ
ಕೊಲ್ಲಲ್ಪಟ್ಟವನು ವಿಭೂತಿಯನ್ನು ಧರಿಸದೆ ಹಾಗೆಯೇ ಬರುತ್ತಿದ್ದನು.
ಆಗ ನಾನು ಅವನ ಫಾಲಪ್ರದೇಶದಲ್ಲಿ ವಿಭೂತಿಯನ್ನು ಹಚ್ಚಲು ಆ ಗರ್ವಿ
ಷ್ಠನು ನನ್ನೆದುರಿಗೆ ಆ ವಿಭೂತಿಯನ್ನು ತೊಡೆದು ಹಾಕಿದ್ದಲ್ಲದೆ ಹೀನಾ
ಮಾನವಾಗಿ ಬಯ್ದುದರಿಂದ ನಾನು ಅವನ ರುಂಡವನ್ನು ಕತ್ತರಿಸಬೇಕಾ
ಯಿತು'' ಎಂದು ಗಂಭೀರನಾಗಿ ನುಡಿದನು.

ಒಡ್ಡೋಲಗವು ನಿಸ್ತಬ್ಧವಾಗಿತ್ತು. ಉಸಿರಾಡಿಸುವ ವಿನಹ ಬೇರಿನ್ನಾವ
ಸದ್ದೂ ಕೇಳಬರುತ್ತಿರಲಿಲ್ಲ. ಒಡ್ಡೋಲಗದ ತುಂಬ ಜನರಿದ್ದರೂ ಮಂತ್ರ
ಮುಗ್ಧರಂತೆ, ಪ್ರತಿಮೆಗಳಂತೆ ಕುಳಿತು ಬಿಟ್ಟಿದ್ದರು. ಮುಂದೇನು ನಡೆಯು
ವದೋ ಎಂಬುದರ ಬಗೆಗೆ ಎಲ್ಲರೂ ಆಸಕ್ತರಾಗಿದ್ದರು. ಆಗ ಅರಸನು—

'' ಶಿವಭಕ್ತರೇ ! ಕೇವಲ ವಿಭೂತಿಯನ್ನು ಧರಿಸಲಿಲ್ಲವೆಂದು ನೀವು
ಅವನನ್ನು ಕೊಂದು ಹಾಕಿದಿರಿ. ಮೃತಹೊಂದಿದವನ ಶಿರಸ್ಸಿಗೆ ಭಸ್ಮ
ವನ್ನು ತಳೆದರೆ ಅವನು ಮತ್ತೆ ಜೀವಿತನಾಗುವನೇ ? '' ಎಂದು ವಿಚಿತ್ರ
ಪ್ರಶ್ನೆಯನ್ನು ಹಾಕಿದನು.

ಅರಸನ ಈ ರೀತಿಯ ಪ್ರಶ್ನೆಯಿಂದ ಇರಿಭಕ್ತನು ಕೊಂಚವೂ ವಿಚಲಿ
ತನಾಗಲಿಲ್ಲ. ಕೂಡಲೇ ಅವನು ಮೊದಲಿನಷ್ಟೇ ನಿರ್ಧಾರದಿಂದ—
" ಹೌದು. ಅದರಲ್ಲಿ ಸಂದೇಹವೇ ಇಲ್ಲ. ಸತ್ತವನ ಕುಂಟುಂಬದವರೆಲ್ಲರೂ
ಶಿವಭಕ್ತರಾಗಿ, ವಿಭೂತಿಯನ್ನು ಧರಿಸಿದ್ದಾದರೆ ಶಿವಭಕ್ತರ ಹಾಗು ಶಿವನ
ಕೃಪೆಯಿಂದ ಮೃತನು ಮತ್ತೆ ಜೀವಂತನಾಗುವನು. ಇದರಲ್ಲಿ ತಿಲಮಾ
ತ್ರವೂ ಸಂದೇಹವಿಲ್ಲ '' ಎಂದು ಹೇಳಿದನು.

ಇರಿಭಕ್ತನ ಮಾತುಗಳನ್ನು ಕೇಳಿ ಇಡಿಯ ಸಭೆಯೇ ವಿಸ್ಮಯ
ಗೊಂಡಿತು. ಅರಸನು ದೂರುಕೊಡಲು ಬಂದವರ ಕಡೆಗೆ ನೋಡಲು,
ಅವರು ಶಿವಭಕ್ತರಾಗಲು ಒಪ್ಪಿ ಹೇಗಾದರೂ ತಮ್ಮವನನ್ನು ಬದುಕಿಸ

ಬೇಕೆಂದು ಕೇಳಿಕೊಂಡರು. ಆಗ ಅವನು ಆ ಶವವನ್ನು ನಲುಮೆಯಿಂದ ನೋಡಿ ಪ್ರಮಥರ ಚರಣಸರಸಿಜಗಳನ್ನು ತನ್ನ ಮಸ್ತಕದಲ್ಲಿರಿಸಿಕೊಂಡು ತನ್ನ ಪಾದವನ್ನು ಆ ಶವಕ್ಕೆ ಸೋಂಕಿಸಿದನು.

ಅವನ ಪಾದವು ಶವಕ್ಕೆ ಸೋಂಕಿದುದೇ ತಡ, ಸತ್ತು ಬಿದ್ದಂಥವನು, ಮಲಗಿದವನು ಮೇಲಕ್ಕೇಳುವಂತೆ ಎದ್ದು ಕುಳಿತುಕೊಂಡನು. ಅವನ ಈ ಪವಾಡವನ್ನು ಕಂಡು ಎಲ್ಲರಿಗೂ ಆನಂದಾಶ್ಚರ್ಯಗಳು ಏಕಕಾಲಕ್ಕೆ ಉತ್ಪನ್ನವಾದವು. ಶಿವಭಕ್ತನ ಬಗೆಗೆ ಎಲ್ಲರಲ್ಲೂ ಗೌರವದ ಭಾವನೆ ಉತ್ಪನ್ನವಾಯಿತು. ಕೆಲವರಿಗಂತೂ ತಾವು ಕಾಣುತ್ತಿರುವದು ಕನಸೋ ಅಥವಾ ಜಾಗ್ರತಾವಸ್ಥೆಯಲ್ಲಿಯ ಕಾರ್ಯವೋ ಎಂಬುದು ಕೂಡ ತಿಳಿಯದಂತಾಗಿತ್ತು.

ಎದ್ದು ಕುಳಿತವನು ಕೂಡಲೇ ಆ ಶಿವಭಕ್ತನ ಪಾದಗಳಿಗೆರಗಿದನು. ಮರಳಿ ಜೀವಿತನಾದ ಆ ವ್ಯಕ್ತಿಯನ್ನು ಆದರದಿಂದ ಮೇಲಕ್ಕೆಬ್ಬಿಸಿ, ಆಶೀರ್ವದಿಸಿ ವಿಭೂತಿಯನ್ನಿಟ್ಟನು. ಅವನ ಪರಿವಾರದವರನ್ನೂ ಅನುಗ್ರಹಿಸಲು ಅವರೆಲ್ಲರೂ ಆನಂದಿತರಾಗಿ ತಮ್ಮ ಗ್ರಹಗಳಿಗೆ ತೆರಳಿದರು. ಅರಸನಿಗೂ ವರ್ಣನಾತೀತವಾದ ಆನಂದವಾಗಿತ್ತು. ಇದರಿಂದ ಇರಿಭಕ್ತನ ಕೀರ್ತಿಯು ಗಾಳಿಯಂತೆ ನಾಲ್ಕು ದಿಶೆಗೂ ಹಬ್ಬಿತು. ಇಂಥ ಒಬ್ಬ ಭಕ್ತನಿರುವದು ತನಗೊಂದು ಹೆಮ್ಮೆಯೆಂದು ಮಹಾದೇವನೂ ನುಡಿಯುವಷ್ಟು ಆತನ ಭಕ್ತಿಯು ಉನ್ನತವಮಟ್ಟದ್ದಾಗಿತ್ತು.

ಒಂದು ದಿನ ಇರಿಭಕ್ತನು ಬೆಳಗಿನ ಸಮಯದಲ್ಲೆದ್ದು ಸ್ನಾನಾದಿ ಕ್ರಿಯೆಗಳನ್ನು ತೀರಿಸಿ ಶಿವಪೂಜೆಯನ್ನು ಮುಗಿಸಿಕೊಂಡು ರಾಜಮಾರ್ಗದಲ್ಲಿ ಹೊರಟಿದ್ದನು. ಶಿವಗಾಮಿಯೆಂಬ ಓರ್ವ ಬ್ರಾಹ್ಮಣನು ಸುಗಂಧ ಪುಷ್ಪಗಳನ್ನು ಕರಡಿಗೆಯಲ್ಲಿರಿಸಿಕೊಂಡು ಶಿವಪೂಜೆಗೋಸುಗ ಕರಿಯೂರೇಶ್ವರಾಲಯಕ್ಕೆಂದು ಅದೇ ಮಾರ್ಗವಾಗಿ ಬರುತ್ತಿದ್ದನು. ಅದೇ ಸಮಯಕ್ಕೆ ಅರಸನ ಪಟ್ಟದಾನೆಗೆ ಮದವೇರಿ ಎದುರು ಬಂದವರನ್ನು ಕಾಲೊಳಗೆ ಹಾಕಿ ತುಳಿಯುತ್ತ ಮುಂದೆ ಹೊರಟಿತ್ತು. ಶಿವಗಾಮಿಯೆಂಬ ದ್ವಿಜನು ಕೂಡ ಅದರ ಹಿಡಿತದಲ್ಲಿ ಸಿಕ್ಕುಬಿಟ್ಟನು. ಅವನ ಕೈಯೊಳಗಿನ ಹೂಗಳೆಲ್ಲ ಚಲ್ಲಾಪಿಲ್ಲಿಯಾದವು. ಆಗ ದ್ವಿಜನು, “ ಶಿವಶಿವಾ ! ಶಿವಪೂಜೆಗಾಗಿ

ತಂದಂಥ ಪುಷ್ಪಗಳು ಈ ರೀತಿ ನಿಷ್ಫಲವಾಗುತ್ತಿವೆಯಲ್ಲ ! ಮಹಾದೇವಾ ! ಇದನ್ನು ಕೇಳುವವರು ಯಾರೂ ಇಲ್ಲವೇ ? '' ಎಂದು ಮೊರೆಯಿಡುತ್ತಿರಲು ಅದು ಇರಿಭಕ್ತನ ಕಿವಿಗೆ ಬಿದ್ದಿತು. ಕೂಡಲೇ ಅಲ್ಲಿಗೆ ಬಂದು ನೋಡಲು ಪರಿಸ್ಥಿತಿಯು ಅರಿವಾಗಲು ಅವನಿಗೆ ಬಹುಸಮಯ ಬೇಕಾಗಲಿಲ್ಲ. ಮುಂದೆ ಒಂದು ನಿಮಿಷವೂ ವಿಲಂಬಮಾಡದೆ ಕೈಯೊಳಗಿನ ಪರಶುವಿನಿಂದ ಆ ಮದಗಜದ ಸೊಂಡಿಲನ್ನು ಕತ್ತರಿಸಿ ಅದನ್ನು ಮತ್ತೆ ಮತ್ತೆ ಗಾಸಿಗೊಳಿಸಲು ಆ ಗಜವು ನೆಲಕ್ಕೆ ಬಿದ್ದು ಒದ್ದಾಡತೊಡಗಿತು.

ಅರಸನ ಪಟ್ಟದಾನೆಗಾದ ಗತಿಯನ್ನು ನೋಡಿ ರಾಜಭಟರು ಅಲ್ಲಿ ಒಂದು ಕ್ಷಣವೂ ನಿಲ್ಲದೆ ಧೊರೆಯಲ್ಲಿಗೆ ಹೋಗಿ ನಡೆದ ಸಂಗತಿಯನ್ನು ವಿವರಿಸಿ ಆ ಇರಿಭಕ್ತನಿಗೆ ತಕ್ಕ ಶಿಕ್ಷೆಯನ್ನು ಮಾಡಬೇಕೆಂದು ಬಿನ್ನವಿಸಿಕೊಂಡರು. ಆಗ ಬುದ್ಧಿವಂತನಾದ ಅರಸನು ಅವರಿಗೆ ಒಳಿತಾಗಿ ಬುದ್ಧಿ ಹೇಳಿ ಈಶ್ವರಭಕ್ತನನ್ನು ಗಾಸಿಗೊಳಿಸಿದ ಆ ಮದ್ದಾನೆಗೆ ತಕ್ಕ ಶಿಕ್ಷೆಯೇ ಆಯಿತು. ಆ ಬಗ್ಗೆ ನಾವೇ ಆ ಭಕ್ತರಲ್ಲಿ ಕ್ಷಮೆ ಕೇಳಿಕೊಳ್ಳಬೇಕು ಎಂದು ನುಡಿದು ಇರಿಭಕ್ತನಲ್ಲಿಗೆ ಹೋಗಿ, " ಶಿವಭಕ್ತರೇ ! ತಾವು ಅನ್ಯಥಾ ಭಾವಿಸಿಕೊಳ್ಳಬಾರದು. ಆನೆಯು ಮಾಡಿದ ತಪ್ಪಿಗೆ ನಾನು ನನ್ನ ಶಿರವನ್ನು ಕೊಡಲು ಸಿದ್ಧನಿದ್ದೇನೆ. ದಯವಿಟ್ಟು ಆನೆಯ ತಪ್ಪನ್ನು ಮನ್ನಿಸಿ ನನಗೆ ಶಿಕ್ಷೆ ವಿಧಿಸಬೇಕು '' ಎಂದು ಕೇಳಿಕೊಂಡನು.

ಅರಸನ ಮಾತುಗಳನ್ನು ಕೇಳಿ ಇರಿಭಕ್ತನ ಮನವೂ ಕರಗಿತು. ಶಿವಭಕ್ತನ ವಸ್ತುವಾದ ಆನೆಯನ್ನು ನಾನು ಕೊಂದುದು ತಪ್ಪು ಎಂಬ ಭಾವನೆಯು ಬಂದಿತು. ಇಂಥ ಅಕೃತ್ಯವನ್ನು ಮಾಡಿದ ಬಳಿಕ ಜೀವಿಸಿದ್ದು ಫಲವಾದರೂ ಏನು ? ಎಂದುಕೊಂಡು ಪರಶುವಿನಿಂದ ತನ್ನ ತಲೆಯನ್ನೇ ಕತ್ತರಿಸಿಕೊಳ್ಳಬೇಕೆಂದು ಕೊಡಲಿಯನ್ನೆತ್ತಿಕೊಳ್ಳಲು ಜಗತ್ಕರ್ತನಾದ ಗಿರಿಜಾಪತಿಯು ಪ್ರತ್ಯಕ್ಷನಾಗಿ ಅವನ ಕೈಯನ್ನು ಹಿಡಿದನು.

ಆಗ ಇರಿಭಕ್ತನು ಗಿರಿಜಾಪತಿಯ ಪಾದಗಳ ಮೇಲೆ ಬಿದ್ದು ಅರಸನ ಆನೆಯನ್ನು ಬದುಕಿಸಲು ಕೇಳಿಕೊಳ್ಳಲು ಮಹಾದೇವನು ಆನೆಯನ್ನು ಬದುಕಿಸಿ ಇರಿಭಕ್ತನನ್ನು ಕೈಲಾಸಕ್ಕೆ ಕರೆದೊಯ್ದು ಅತ್ಯಂತ ಶ್ರೇಷ್ಠವಾದ ಗಣಪದವಿಯನ್ನು ಅನುಗ್ರಹಿಸಿದನು.

ಗಿರಿಶನರ್ಚನೆಗೆ ತರುವರಳ ನೀಡಾಡೆ ಮುದ ।
ಕರಿಯುನಪ್ಪಳಿಸಿದಿರಿ ಭಕ್ತರೆನ್ನನು ।
ದ್ಧರಿಸಲೀ ಭವದಿ ನೊಲವಿಂದೆ ॥

—ಶ್ರೀ ನಿಜಗುಣ ಶಿವಯೋಗಿಗಳು

# ೨೮. ಕಳಚಂಗ ಪೆರುಮಾಳೆಯೊರು

ಒಳ್ಳೆಯವರ ಸಹವಾಸದಿಂದ ಮಾನವನಲ್ಲಿಯ ಗುಣ-ಶೀಲ-ಆಚಾರ ಧರ್ಮಗಳು ಉನ್ನತ ಮಟ್ಟಕ್ಕೇರುತ್ತವೆಂದು ಎಲ್ಲರೂ ತಿಳಿದ ಸಂಗತಿ ಯಾಗಿದೆ. ಮಾನವನೇ ಏಕೆ? ಸತ್ಸಂಗದಲ್ಲಿ ಪ್ರಾಣಿ-ಪಶುಗಳು ಕೂಡ ತಮ್ಮ ನೈತಿಕ ಬಲವನ್ನು ಹೆಚ್ಚಿಸಿಕೊಳ್ಳುತ್ತವೆಂಬುದೂ ಸರ್ವಶ್ರುತ ಹಾಗು ಸಂಪೂರ್ಣ ಸತ್ಯಸಂಗತಿಯಾಗಿದೆ.

ಪೂರ್ವಕಾಲದಲ್ಲಿ ಕಾವೇರಿ ನದಿಯ ದಂಡೆಯಲ್ಲಿ ವಿಶಾಲವಾದು ದೊಂದು ಜಂಬೂವೃಕ್ಷವಿದ್ದಿತು. ಅದರಡಿಯಲ್ಲಿ ಅತ್ಯಂತ ಮನೋಹರವಾದ ಒಂದು ಶಿವಲಿಂಗವು ಇದ್ದಿತು. ಪೂರ್ವದಲ್ಲಿ ಮಾಡಿದ ದುಷ್ಕರ್ಮಗಳ ಫಲ ವಾಗಿ ಓರ್ವ ಶೈವನು ಶಲದಿಯಾಗಿ ಹುಟ್ಟಿ ಆ ಲಿಂಗದ ಬಳಿಯೇ ಇದ್ದು ಕೊಂಡು ಕಾಲ ಕಳೆಯುತ್ತಿರಲು ಪೂರ್ವ ಸಂಸ್ಕಾರದ ಬಲದಿಂದ ಅದರಲ್ಲಿ ಶಿವಲಿಂಗದ ಮೇಲೆ ಪ್ರೇಮವು ಹುಟ್ಟಿಕೊಂಡು ಅದು ದಿನದಿನಕ್ಕೆ ಅಭಿವೃದ್ಧಿ ಹೊಂದತೊಡಗಿತು.

ಮುಂದೆ ಆ ಜೇಡವು (ಶಲದಿಯು) ಶಿವಲಿಂಗದ ಮೇಲೆ ಕಸಕಡ್ಡಿ ಗಳು ಬೀಳಬಾರದು, ಸೂರ್ಯನ ಪ್ರಖರಕಿರಣಗಳಿಂದುಂಟಾದ ಶಾಖವು ತಲುಪಬಾರದು ಎಂಬ ಉದ್ದೇಶದಿಂದ ಲಿಂಗದ ಮೇಲ್ಭಾಗದಲ್ಲಿ ತನ್ನನಯ ವಾದ ಎಳೆಗಳಿಂದ ಒಂದು ಬಲೆಯನ್ನು ಹೆಣೆದು ತನ್ನ ಭಕ್ತಿಯನ್ನು ವ್ಯಕ್ತ ಪಡಿಸುತ್ತಿತ್ತು.

ಈ ರೀತಿಯಾಗಿ ಅದು ಕಾಲಕಳೆಯುತ್ತಿರಲೊಂದು ದಿನ ನದೀತೀರದ ಅಡವಿಯೊಳಗಿನ ಆನೆಯೊಂದು ಜಂಬೂವೃಕ್ಷದ ಬಳಿ ಬಂದಿತು. ಅಲ್ಲಿಯ ಶಿವಲಿಂಗವನ್ನು ನೋಡಿದೊಡನೆ ಅದನ್ನು ಪೂಜಿಸಬೇಕೆಂಬ ಭಾವನೆಯು ಅದರಲ್ಲಿ ಉತ್ಪನ್ನವಾಯಿತು. ಅನಂತರ ಅದು ಜೇಡವು ಕಟ್ಟಿದ ಬಲೆಯನ್ನು ತನ್ನ ಸೊಂಡಿಲಿನಿಂದ ತೆಗೆದೊಗೆದು ನದಿಯಿಂದ ಸೊಂಡಿಲಿನೊಳಗೆ ನೀರು ಹಿಡಿದುಕೊಂಡು ಬಂದು ಶಿವಲಿಂಗಕ್ಕೆ ಅಭಿಷೇಕ ಮಾಡಿಸಿ, ಕಾನನದೊಳ

ಗಿನ ಪುಷ್ಪಗಳನ್ನು ತಂದು ಲಿಂಗದ ಮೇಲಿರಿಸಿ ಹೊರಟು ಹೋಯಿತು. ಮುಂದೆ ಅದು ತನ್ನ ಈ ರೀತಿಯ ಕಾಯಕವನ್ನು ಹಾಗೆಯೇ ಕೆಲವು ತಿಂಗಳುಗಳ ವರೆಗೆ ನಡೆಯಿಸಿತು.

ಶಿವಲಿಂಗಕ್ಕೆ ಶಾಖ ತಲುಪಬಾರದು, ಕಸಕಡ್ಡಿಗಳು ಅದರ ಮೇಲೆ ಬೀಳಬಾರದು ಎಂಬ ಉದ್ದೇಶದಿಂದ ತಾನು ಕಟ್ಟಿದ ಬಲೆಯನ್ನು ಈ ಆನೆ ಕಿತ್ತೊಗೆದುದನ್ನು ಕಂಡು ಜೇಡಕ್ಕೆ ಖೇದವೆನಿಸಿತು. ಕೊನೆಗೆ ಅದು ಒಂದು ದಿನ ಆನೆ ಬರುವದನ್ನು ಕಾಯ್ದುಕೊಂಡಿದ್ದು ಅದು ತನ್ನ ಎಲ್ಲ ಕಾರ್ಯಗಳನ್ನು ಮುಗಿಸಿ ವಿಶ್ರಾಂತಿಗೆಂದು ಮಲಗಿಕೊಂಡಾಗ ಜೇಡವು ಆನೆಯ ಮೂಗಿನೊಳಗೆ ಸೇರಿಕೊಂಡು ಅದರ ಪ್ರಾಣವನ್ನು ತೆಗೆದು ತಾನೂ ಸತ್ತು ಹೋಯಿತು. ಈ ರೀತಿಯಾಗಿ ಲಿಂಗದ ವಿರಹದಲ್ಲಿಯೇ ಸಾವನ್ನಪ್ಪಿದ ಆ ಜೇಡವು ಚೋಳಮಂಡಲದೊಳಗೆ ರಾಜಪುತ್ರನಾಗಿ ಜನಿಸಿತು. ಅವನೇ ಕಳಚಂಗ ಪೆರುಮಾಳ. ಆ ಆನೆಯು ಕೂಡ ವರ-ಯಕ್ಷಕುಲದಲ್ಲಿ ಜನ್ಮವೆತ್ತಿತು.

ರಾಜಕುಮಾರ ಕಳಚಂಗನು ಶಿವಾಚಾರದ ಮಾರ್ಗವನ್ನು ಉಲ್ಲಂಘಿಸದೆ ಸಕಲ ನೀತಿ ರಹಸ್ಯಗಳನ್ನು ಅರಿತುಕೊಂಡವನಾಗಿದ್ದನು. ಶಿವಾನುಭವಿಗಳ ಸಂಗದಲ್ಲಿ ಅವನು ವಿಲಾಸವನ್ನು ಪಡೆಯುತ್ತಿದ್ದಂತೆ ಸಂಗೀತ ಪ್ರಿಯನೂ ಆಗಿದ್ದುಕೊಂಡು ಸಕಲ ಕಲಾನಿಪುಣನಾಗಿದ್ದನು. ಈ ರೀತಿಯಾಗಿ ಕೆಲವು ಕಾಲಕಳೆಯಲು ಒಂದು ದಿನ ಈತನು ಬೇಟೆಯಾಡುವದಕ್ಕೆಂದು ತನ್ನ ಪರಿವಾರದವರೊಂದಿಗೆ ಕಾನನಕ್ಕೆ ಹೋದನು. ಆ ಕಾನನದಲ್ಲೊಂದು ಬಿಲದ್ವಾರವು ಗೋಚರವಾಗಲು ಅದರೊಳಗೆ ಹೋಗಬೇಕೆಂದು ತನ್ನ ಪರಿವಾರದವರಿಗೆ ತಿಳಿಸಿದನು. ಅವರಾರೂ ಅದರೊಳಗೆ ಪ್ರವೇಶಿಸಲು ಒಪ್ಪದ್ದರಿಂದ ತಾನೇ ಅದರೊಳಗೆ ಪ್ರವೇಶಿಸಿದನು.

ಈ ರೀತಿಒಳಗೆ ಪ್ರವೇಶಿಸಿದ ರಾಜಕುಮಾರನು ಅಂಧಕಾರದಲ್ಲಿಯೇ ಮಾರ್ಗವನ್ನು ಕ್ರಮಿಸುತ್ತಿರಲು ಕೆಲಸಮಯದ ನಂತರ ಓರ್ವಜಟ್ಟಿಗನು ನಿನ್ನನ್ನು ಕೊಂದುಹಾಕುತ್ತೇನೆಂದು ಘರ್ಜಿಸುತ್ತ ಅವನಿಗೆದುರಾದನು. ನಿಸ್ಸೀಮ ಶಿವಭಕ್ತನಾದ ಆ ರಾಜಕುಮಾರನು ಅವನೊಂದಿಗೆ ಧೈರ್ಯದಿಂದ ಕಾದಲು ಆ ಜಟ್ಟಿಯು ಸೋತನು. ಆಗ ಅವನು ರಾಜಕುಮಾರನನ್ನು

ದ್ದೇಶಿಸಿ, "ಎಲೈ ಕುಮಾರನೇ ! ಈ ಬಿಲದೊಳಗೆ ಪ್ರವೇಶಿಸಿ ನನ್ನನ್ನು ಸೋಲಿಸುವವರು ಯಾರೂ ಇರಲಿಲ್ಲ. ನಿನಗೆ ನಿನ್ನ ಪೂರ್ವ ಜನ್ಮದ ನೆನ ಪಿದೆಯೇ?'' ಎಂದು ಕೇಳಲು ರಾಜಕುಮಾರನಿಗೆ ಎಲ್ಲವೂ ನೆನಪಾಗಿ ಕೂಡಲೇ ಬಿಲದಿಂದ ಹೊರಬಂದು ಕಾವೇರೀ ತೀರದಲ್ಲಿರುವ ಲಿಂಗವನ್ನು ನಾನಾವಿಧವಾಗಿ ಪೂಜಿಸಿ ತೃಪ್ತಿಹೊಂದಿದನು.

ಕಳಚಂಗನ ಭಕ್ತಿಗೆ ಮೆಚ್ಚಿದ ಶಂಕರನು ಅಲ್ಲಿಯೇ ಅವನಿಗೆ ಪ್ರತ್ಯಕ್ಷ ನಾಗಲು, ಆ ರಾಜಕುಮಾರನು ಶಿವನೌಳಿಯನ್ನು ಕಣ್ಣುತುಂಬಾ ನೋಡಿ ಇಂದಿಗೆ ನನ್ನ ಜನ್ಮವು ಸಾರ್ಥಕವಾಯಿತೆಂದು ಗಿರಿಜಾಪತಿಯ ಪಾದಗಳ ಮೇಲೆ ಬೀಳಲು ಶಂಕರನು ಆತನನ್ನು ಹಿಡಿದೆತ್ತಿ ಆದರಿಸಿ ಕೈಲಾಸಕ್ಕೆ ಕರೆ ದೊಯ್ದು ಗಣಪದವಿಯನ್ನು ಕೊಟ್ಟನು.

ವರ ಶಲದಿಯಾಗಿ ಶಂಕರಪೂಜೆಗೈದು ಭಾ ।
ಸುರಗುಣ ನಿಕಾಯದೊಳು ಸಂದ ಕಳಚಂಗ ।
ಪೆರುಮಾಳೆಯೆನಗೆ ದಯವಾಗು ॥

—ಶ್ರೀ ನಿಜಗುಣ ಶಿವಯೋಗಿಗಳು.

## ೨೯. ನಮಿನಂದಿಯುರು

ಚೋಳರಾಜ್ಯದೊಳಗಿನ ತಿರುವಾಲೂರು ಪಟ್ಟಣವು ಶಿವಭಕ್ತರಿಂದಲೂ ಪಾಪಭೀರುಗಳಿಂದಲೂ ತುಂಬಿ ತುಳುಕುತ್ತಿತ್ತು. ಅಲ್ಲಿ ನಮಿನಂದಿಯೆಂಬ ಶೈವನಿದ್ದು ಅವನು ಸದ್ಗುಣಿಯೂ, ಸ್ವಕಾರ್ಯದಕ್ಷನೂ, ಶಿವಭಕ್ತನೂ ಆಗಿದ್ದನಲ್ಲದೆ, ಶಿವಭಕ್ತರ ಇಚ್ಛೆಯಂತೆ ನಡೆದು ಅವರನ್ನು ತೃಪ್ತಿಗೊಳಿಸುತ್ತಿದ್ದನು.

ನಿರಪೇಕ್ಷ ಬುದ್ಧಿಯವನಾದ ಈತನು ನಾಳಿನ ಚಿಂತೆಯನ್ನು ಮಾಡದೆ ಇಂದಿನದನ್ನೆಲ್ಲ ಧಾರಾಳವಾಗಿ ಶಿವಭಕ್ತರ ಕಾರ್ಯದಲ್ಲಿ ವೆಚ್ಚಮಾಡುತ್ತಿದ್ದನು. ಅವನಲ್ಲಿಯ ಧಾರಾಳತೆಯನ್ನು ಕಂಡು ಬಹಳಷ್ಟು ಜನರು ಇವನಿಗೇನು ಹುಚ್ಚು ಹಿಡಿದಿದೆಯೇ ? ಎಂದು ಆಡಿಕೊಳ್ಳುತ್ತಿದ್ದರು. ಆದರೂ ಅವನು ಯಾರ ಮಾತಿನ ಕಡೆಗೂ ಲಕ್ಷವೀಯದೆ ತನ್ನ ಕಾಯಕವನ್ನು ನಡೆಸುತ್ತ ಅದರಲ್ಲಿಯೇ ತೃಪ್ತನಾಗಿದ್ದನು. ಇದೇ ರೀತಿಯ ಶಿವಸೇವೆಯಲ್ಲಿ ಕೆಲ ಸಂವತ್ಸರಗಳು ಕಳೆದವು.

ಒಂದು ದಿನ ಈತನು ಪ್ರದೋಷ ಸಮಯದಲ್ಲಿ ಶಿವಧ್ಯಾನ ನಿರತನಾಗಿ, ಅದೇ ಉಲ್ಲಾಸದೊಂದಿಗೆ ದೇವಾಲಯದೊಳಗೆ ಪ್ರವೇಶಿಸಿದನು. ದೇವಾಲಯವು ಭಕ್ತರಿಂದ ಕಿಕ್ಕಿರಿದು ತುಂಬಿಹೋಗಿತ್ತು. ನಾಲ್ಕೂ ಕಡೆಗೆ ಹಚ್ಚಿದ ಅಸಂಖ್ಯ ದೀಪಗಳಿಂದ ಮಂದಿರದ ತುಂಬೆಲ್ಲ ಪ್ರಕಾಶವು ಹರಡಿಕೊಂಡಿತ್ತು. ಅರ್ಚಕನು ಇರಿಸಿದ ನಾನಾ ರೀತಿಯ ಪುಷ್ಪಗಳಿಂದ ಶಿವಲಿಂಗವು ನಯನ ಮನೋಹರವಾಗಿ ಕಾಣಿಸುತ್ತಿತ್ತು. ಆಗ ನಮಿನಂದಿಯು ನಿತ್ಯದಂತೆ ತದೇಕಚಿತ್ತನಾಗಿ ಲಿಂಗ ರೂಪದಿಂದ ಪರಿಶೋಭಿಸುವ ಸಾಂಬಶಿವನನ್ನು ಪೂಜಿಸಿ ಸಂಖ್ಯಾನುಕ್ರಮವಾಗಿ ಶಿವಮಂತ್ರವನ್ನು ಮುಗಿಸಿಕೊಂಡು ಹರ್ಷಾತಿರೇಕತೆಯೊಂದಿಗೆ ಮನೆಗೆ ಬರುತ್ತಿರಲು ಕತ್ತಲೆಯು ಕವಿದು ಬಿಟ್ಟಿತ್ತು.

ಶಿವಾಲಯವನ್ನು ಬಿಟ್ಟು ಸ್ವಲ್ಪ ದೂರ ಬರುವದರೊಳಗಾಗಿಯೇ

ಸುತ್ತಲೂ ಮೋಡಗಳು ಕವಿದು ಗುಡುಗು ಮಿಂಚುಗಳ ಅರ್ಭಟವು ಪ್ರಾರಂಭವಾಗಿಬಿಟ್ಟಿತು. ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ಮಳೆ ಸುರಿಯತೊಡಗಿತು. ಅದನ್ನು ಮಳೆಯೆಂದು ಕರೆಯುವದಕ್ಕಿಂತ ಆಕಾಶವು ಹರಿದು ಅಲ್ಲಿಯ ನೀರೆಲ್ಲ ಕೆಳಗೆ ಬೀಳತೊಡಗಿತ್ತು ಎಂದರೂ ಸಲ್ಲುವಂಥ ಮಳೆ ಬೀಳತೊಡಗಿತು. ಜನರು ಗಾಬರಿಯಾದರು. ಕಂಗೆಟ್ಟರು. ಮುಂದೇನು ಮಾಡಬೇಕೆಂಬುದು ತೋಚದೆ ದಿಗ್ಭ್ರಾಂತರಂತೆ ತಲೆಯ ಮೇಲೆ ಕೈ ಹೊತ್ತು ಕುಳಿತುಕೊಂಡು ಗಾಬರಿಯ ದೃಷ್ಟಿಯಿಂದ ಆಕಾಶವನ್ನು ನೋಡುತ್ತಿದ್ದರು.

ನಮಿನಂದಿಯು ಇದಾವುದನ್ನೂ ಲೆಕ್ಕಿಸದೆ ತನ್ನ ಆನಂದದಲ್ಲಿಯೇ ತಲ್ಲೀನನಾಗಿ ಮುಂದೆ ಸಾಗಿದ್ದನು. ಅಂಥ ಮಳೆ-ಗುಡುಗು-ಸಿಡಿಲಗಳು ಅವನನ್ನು ಅಧೀರನನ್ನಾಗಿ ಮಾಡಲು ಸಾಧ್ಯವಾಗಲಿಲ್ಲ. ಅದೇರೀತಿ ಆ ಶಿವಭಕ್ತನು ಹೊರಟಿರುವಾಗ ಆ ಕಾರ್ಗತ್ತಲೆಯೊಳಗೆ ಮಾರ್ಗದಲ್ಲಿ ಅಡ್ಡ ಬಿದ್ದಿದ್ದ ಮರದ ತುಂಡೊಂದನ್ನು ಎಡವಲು ಧೊಪ್ಪನೆ ನೆಲಕ್ಕೆ ಬಿದ್ದು ''ಶಿವ ಶಿವಾ!'' ಎಂದು ಆವೇಶದಿಂದ ಕೂಗಿಕೊಂಡನು.

ಅವನ ಅದೊಂದೇ ಕೂಗಿಗೆ ಓ ಗೊಟ್ಟು ಸಾಂಬಶಿವನು "ನೊಂದೆಯಾ ಭಕ್ತನೇ !'' ಎಂದು ಲಗುಬಗೆಯಿಂದ ಅವನ ಬಳಿಬಂದು ಅವನನ್ನೆಬ್ಬಿಸಿ ಸಾಂತ್ವನ ಗೊಳಿಸಿದನು. ಸಾಕ್ಷಾತ್ ಮಹಾದೇವನೇ ತನ್ನೆದುರು ನಿಂತುಕೊಂಡಿರುವದನ್ನು ಕಂಡು ಆನಂದಿತನಾದ ನಮಿನಂದಿಯು ಆತನ ಪಾದಗಳ ಮೇಲೆ ಬಿದ್ದುಕೊಂಡನು, ಆಗಶಿವನು— ''ಭಕ್ತನೇ ! ನಿನ್ನ ಭಕ್ತಿಗೆ ಮೆಚ್ಚಿದೆನು. ನಿನಗೆ ಏನು ಬೇಕು ಬೇಡು'' ಎನಲು, ಹರ್ಷಾತಿರೇಕದಿಂದ ಉದುರುತ್ತಿರುವ ಕಣ್ಣೀರುಗಳನ್ನು ಕೂಡ ತೊಡೆದುಕೊಳ್ಳುವ ಪ್ರಜ್ಞೆಯಿಲ್ಲದ ನಮಿನಂದಿಯು— ''ಹೇ ದೇವದೇವಾ ! ಮಹಾದೇವಾ ! ನನಗೆ ಏನಾದರೂ ಕೊಟ್ಟು ನನ್ನ ಮನಸ್ಸನ್ನು ತೃಪ್ತಿಗೊಳಿಸಬೇಕೆಂಬ ಇಚ್ಛೆಯು ನಿನಗೆ ಇದ್ದರೆ ಗುಡುಗು-ಸಿಡಿಲು-ಮಳೆಗಳಿಂದ ಭೋರ್ಗರೆಯುತ್ತಿರುವಂಥ ಇಂಥವಾತಾವರಣದಲ್ಲಿ ನೀನು ಮನೆಯಿಂದ ಹೊರ ಬೀಳಬೇಡ"ವೆಂದು ಬೇಡಿಕೊಂಡನು.

ಅವನ ಮುಗ್ಧ ಮಾತುಗಳನ್ನು ಕೇಳಿ ಮೃತ್ಯುಂಜಯನಿಗೆ ಅತ್ಯಾನಂದವಾಯಿತು. ಕೂಡಲೆ ಒಂದು ಪುಷ್ಪಕ ವಿಮಾನವನ್ನು ತರಿಸಿ ಅವನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ಅನುಗ್ರಹಿಸಿದನು.

ನಡೆ ತರುವೆ ಮಳೆಯೊಳಿರುಳಿಡಹಿ ಹರಹರಾಯಂ ।
ಜೊಡನೆ ಬಂದೀಶ ನೊಂದೆಂದ ನಮಿನಂದಿ ।
ಕೊಡಲೆನ ಗತಿ ಧರ್ಮರತಿಯನು ॥

—ಶ್ರೀ ನಿಜಗುಣ ಶಿವಯೋಗಿಗಳು

# ೩೦. ಅಮರನೀತಿಗಳು

ಇಹಲೋಕದ ಕೈಲಾಸವೆಂಬಂತೆ ದಕ್ಷಿಣ ಭಾರತದೊಳು ಪ್ರಸಿದ್ಧ ವಾದ ಚೋಳಮಂಡಲದಲ್ಲಿ ತಿರುನೆಲ್ಲೂರೆಂಬ ಪಟ್ಟಣವು ಶಿವಾಲಯ ಗಳಿಂದಲೂ, ಶಿವಭಕ್ತರಿಂದಲೂ ಪರಿಶೋಭಿಸುತ್ತಿತ್ತು. ಅಲ್ಲಿ ದಾನಿಯೂ, ಧನಾಢ್ಯನೂ, ಸತ್ಯನಿಷ್ಟನೂ ಹಾಗೂ ಅತ್ಯಂತ ಶಿವಭಕ್ತಸಂಪನ್ನನೂ ಆದ ಅಮರನೀತಿಯೆಂಬ ಶೈವನು ವಾಸಿಸುತ್ತಿದ್ದನು. ಆತನಿಗೆ ಕನಕಲತೆ ಯೆಂಬ ಪತಿ ಭಕ್ತಿ ಪಾರಾಯಣೆ ಪತ್ನಿಯೂ, ಸಕಲಗುಣ ಸಂಪನ್ನನಾದ ಧನದತ್ತನೆಂಬ ಮಗನೂ ಇದ್ದರು.

ಮಹಾಶಿವಭಕ್ತನಾದ ಅಮರನೀತಿಯು ತನ್ನ ಮಗನನ್ನು ಹೊಟ್ಟೆ ಬಟ್ಟೆಗಳ ವ್ಯಾಪಾರದಲ್ಲಿ ತೊಡಗಿಸಿ ತಾನು ಶಿವಚಿಂತನೆಯಲ್ಲಿ ಕಾಲ ಯಾಪನೆ ಮಾಡುತ್ತಿದ್ದನು. ಹೀಗಿರಲೊಂದು ದಿನ ಅವನ ಮನದಲ್ಲಿ ಒಂದು ವಿಚಾರವು ಬಂದಿತು. ಈ ವರೆಗೆ ಅನೇಕ ಶಿವಭಕ್ತರು ಆಗಿಹೋದರು ಅವರೆಲ್ಲ ಒಂದಿಲ್ಲೊಂದು ರೀತಿಯಿಂದ ಶಿವನನ್ನು ಪೂಜಿಸಿ ಶಿವಸಾನ್ನಿಧ್ಯ ಪಡೆದರು. ಅಂದರೆ ಲಿಂಗಮೂರ್ತಿಗೂ, ಗುರು-ಜಂಗಮರಿಗೂ ಪತ್ರ— ಪುಷ್ಪಾದಿಗಳನ್ನು ಅರ್ಪಿಸಿ ಪೂಜಿಸಿರುವರು. ಆದರೆ ತಾನು ದಿವ್ಯವಸ್ತ್ರ ಗಳಿಂದ ಶಿವನನ್ನು ಪೂಜಿಸಿ ತೃಪ್ತಿಗೊಳಿಸಬೇಕೆಂಬುದೇ ಆಲೋಚನೆ ಯಾಗಿತ್ತು.

ಮನದಲ್ಲಿ ಆ ರೀತಿಯ ವಿಚಾರ ಬರುವದೇ ತಡ, ಅದು ಕಾರ್ಯ ರೂಪಕ್ಕಿಳಿಯಲು ವಿಲಂಬವಾಗಲಿಲ್ಲ. ತಿರುನೆಲ್ಲೂರಾಧೀಶನಾದ ಶಿವಾ ಲಯಕ್ಕೆ ಬಂದು ಆ ಮೂರ್ತಿಯನ್ನು ನಾನಾವಿಧನಾದ ಬಟ್ಟೆಗಳಿಂದ ಅಲಂಕರಿಸಿ ಪೂಜಿಸಿ ತೃಪ್ತನಾದನು. ಅಲ್ಲದೆ ಜಂಗಮರಿಗೆ ಅವರ ಇಚ್ಛೆ ಗಿಂತಲೂ ಹೆಚ್ಚಾಗಿ ವಸ್ತ್ರದಾನವನ್ನು ಮಾಡಿ ಆನಂದಿತನಾಗತೊಡಗಿ ದನು. ಈ ರೀತಿಯಾಗಿ ಅವನು ಕೆಲವೇ ದಿವಸಗಳಲ್ಲಿ ವಸ್ತ್ರದಾನ ಮಾಡು ವಂಥ ಓರ್ವ ಕೊಡುಗೈ ಧೊರೆಯಾಗಿಬಿಟ್ಟನು.

ಅಮರನೀತಿಯ ಕೀರ್ತಿಯು ನಾಲ್ಕು ದಿಶೆಗಳಲ್ಲಿಯೂ ಹಬ್ಬತೊಡಗಿತು. ಕೈಲಾಸದಲ್ಲಿ ಪರಶಿವನಿಗೂ ಇವನ ವಿಶಿಷ್ಟ ರೀತಿಯನ್ನು ಕಂಡು ತುಂಬಾ ಸಂತೋಷವಾಯಿತು. ಅಲ್ಲದೆ ಅವನನ್ನು ಪರೀಕ್ಷಿಸಬೇಕೆಂಬ ಆಶಯವೂ ಉಂಟಾಗಿ ಶಂಕರನು ಓರ್ವ ವೃದ್ಧ ಜಂಗಮನ ವೇಷವನ್ನು ತಾಳಿ ಭೂಲೋಕಕ್ಕೆ ಬಂದನು.

ಶಿವಪೂಜೆಯನ್ನು ಮುಗಿಸಿದ ನಂತರ ಎಂದಿನಂತೆ ಅಮರನೀತಿಯು ವಸ್ತ್ರದಾನ ಮಾಡುತ್ತಿರುವಾಗ ಜಂಗಮ ವೇಷಧಾರಿ ಶಂಕರನೂ ಅಲ್ಲಿಗೆ ಬಂದನು. ಅಮರನೀತಿಯು ಆ ವೃದ್ಧ ಜಂಗಮನನ್ನು ಕಂಡು ಅವನಿಗೆ ನಮಸ್ಕರಿಸಿ ತಮಗೇನು ಬೇಕೆಂದು ಕೇಳಿದನು. ಅದಕ್ಕೆ ತಾನು ಬಟ್ಟೆಗಳ ಆಸೆಗಾಗಿ ಬಂದವನಲ್ಲವೆಂದೂ ಮಹತ್ವದ ಕೆಲಸಕ್ಕಾಗಿ ಹೋಗಬೇಕಾಗಿದ್ದು, ಅದಕ್ಕಾಗಿ ತನ್ನಲ್ಲಿಯ ಒಂದು ಕೌಪೀನವನ್ನು ತನ್ನಲ್ಲಿ ಇರಿಸಿಕೊಳ್ಳಬೇಕೆಂದೂ ಸಾಯಂಕಾಲಕ್ಕೆ ತಾನು ಮರಳಿ ಬಂದಾಗ ಅದನ್ನು ಮರಳಿ ಕೊಡಬೇಕೆಂದೂ ಹೇಳಿ ಕೌಪೀನವನ್ನು ಅವನಿಗಿತ್ತು ಹೊರಟು ಹೋದನು.

ವೃದ್ಧನ ಮಾತುಗಳಿಂದ ಕೂಡಿದವರೆಲ್ಲರಿಗೂ ಅಚ್ಚರಿಯಾಯಿತು. ಅಮರನೀತಿಯು ಮಾತ್ರ ಶಿವನ ಲೀಲೆಯನ್ನು ಶಿವನೇ ಬಲ್ಲ ಎಂದುಕೊಂಡು ಆ ಕೌಪೀನವನ್ನು ಹೊಸ ಬಟ್ಟೆಗಳೊಳಗೆ ತೆಗೆದಿರಿಸಿ ತನ್ನ ದೈನಂದಿನ ಕಾರ್ಯಗಳಲ್ಲಿ ಮಗ್ನನಾದನು. ಸಾಯಂಕಾಲ ಹೇಳಿದ ಸಮಯಕ್ಕೆ ವೃದ್ಧ ಜಂಗಮನು ಬಂದು ತನ್ನ ಕೌಪೀನವನ್ನು ಕೇಳಿದನು. ಹಾಗೆಯೇ ಆಗಲೆಂದು ಅಮರನೀತಿಯು ಅವನನ್ನು ಮರ್ಯಾದೆಯಿಂದ ಕುಳ್ಳಿರಿಸಿ ಒಳಕ್ಕೆ ಹೋಗಿ ಬಟ್ಟೆಗಳೊಳಗೆ ನೋಡಲು ಕೌಪೀನವು ಅಲ್ಲಿರಲಿಲ್ಲ. ಅವನಿಗೆ ಗಾಬರಿಯಾಯಿತು. ಅವನು ಮಾಡಬೇಕೆಂಬುದು ತಿಳಿಯದಂತಾಗಿ ಜಂಗಮನೆದುರು ಎಲ್ಲ ಸಂಗತಿಗಳನ್ನೂ ಅರಿಕೆ ಮಾಡಿಕೊಂಡು ಅದರ ಬದಲಾಗಿ ಬೇಕಾದ ಬಟ್ಟೆಗಳನ್ನು ಕೊಡುವದಾಗಿ ಕಳಕಳಿಯಿಂದ ಹೇಳಿದನು.

ಅವನ ಮಾತುಗಳನ್ನು ಕೇಳಿ ಜಂಗಮನಿಗೆ ಸಿಟ್ಟು ಬಂದು— "ವಸ್ತ್ರದಾನ ಮಾಡುವಂಥ ದಾನಿಯ ಬಳಿ ನನ್ನ ಕೌಪೀನವು ಸುರಕ್ಷಿತವಾಗಿರಬಹುದೆಂದೂಹಿಸಿ ನಾನು ನಿನ್ನಲ್ಲಿಟ್ಟು ಹೋದರೆ ಈ ರೀತಿಯ ಮೋಸ

ಮಾಡುವದೇ ? ಅದರಲ್ಲಿಯ ಗುಣ ವಿಶೇಷಗಳನ್ನು ತಿಳಿಸಿದ್ದರಿಂದಲೇ ನೀನು ಈ ರೀತಿ ಮಾಡಿರುವೆ ? ನಿನ್ನ ಈ ರೀತಿಯ ಕೃತಿಯಿಂದ ನನಗೆ ಬಹಳೇ ಅಸಮಾಧಾನವಾಗಿದೆ. ಆದರೂ ಮಾಡತಕ್ಕದ್ದೇನು ? ಅದರ ಬದಲಿಗೆ ಅಷ್ಟು ತೂಕದ ಬೇರೆ ಬಟ್ಟೆಗಳನ್ನು ಕೊಟ್ಟುಬಿಡು '' ಎಂದು ಹೇಳಿ ತನ್ನ ಬಳಿಯ ಇನ್ನೊಂದು ಕೌಪೀನವನ್ನು ಕೊಟ್ಟನು.

ಜಂಗಮನ ಕೊನೆಯ ಮಾತನ್ನು ಕೇಳಿ ಅಮರನೀತಿಗೆ ಹೋದ ಜೀವ ಬಂದಂತಾಯಿತು. ಕೂಡಲೇ ಅವನು ಒಂದು ಚಿಕ್ಕ ತಕ್ಕಡಿಯನ್ನು ತರಿಸಿ ಅದರ ಒಂದು ಪರಡಿಯಲ್ಲಿ ಕೌಪೀನವನ್ನಿಡಲು ಕೌಪೀನದ ಭಾರಕ್ಕೆ ಆ ತಕ್ಕಡಿಯೇ ಮುರಿದು ಹೋಯಿತು. ಆಗ ಮಾತ್ರ ಈ ಜಂಗಮನು ಸಾಮಾನ್ಯನಲ್ಲವೆಂದು ಭಾವಿಸಿದ ಅಮರನೀತಿಯು ಒಂದು ದೊಡ್ಡ ಕಂಭ ವನ್ನು ಹೂಳಿ ಕಡಾವಿಗೆಗಳ ಪರಡಿಯನ್ನು ಮಾಡಿ ಒಂದರಲ್ಲಿ ಕೌಪೀನ ವನ್ನಿರಿಸಿ ಇನ್ನೊಂದರಲ್ಲಿ ತನ್ನ ಮನೆಯೊಳಗಿನ ವಸ್ತ್ರಗಳನ್ನೆಲ್ಲ ಇರಿಸಿದರೂ ಸರಿಯಾಗದೆ ಹೋಗಲು ಕೊನೆಗೆ ತಾನು, ತನ್ನ ಪತ್ನಿ ಹಾಗು ಸುತ ನೊಂದಿಗೆ ಪರಡಿಯಲ್ಲಿ ನಿಂತುಕೊಳ್ಳಲು ಆಗ ಅದರ ತೂಕವು ಸರಿಯಾ ಯಿತು. ಕೂಡಿದವರೆಲ್ಲ ಅಚ್ಚರಿಯಿಂದ ಬೆರಳು ಕಚ್ಚಿದರು.

ಆಗ ಆ ವೃದ್ಧ ಜಂಗಮನು ಅತ್ಯಂತ ಹರ್ಷಿತನಾಗಿ ತನ್ನ ನಿಜರೂಪ ವನ್ನು ತೋರಿಸಿ ಅವರನ್ನು ಕೈಲಾಸಕ್ಕೆ ಕರೆದೊಯ್ದು ಶಾಶ್ವತವಾದ ಗಣ ಪದವಿಯನ್ನಿತ್ತನು.

ಹರನ ಕೌಪೀನಕ್ಕೆ ಸರಿಬಾರದಿರೆ ತನ್ನ ।
ಶರೀರವುಂ ತೂಗಿದಮರ ನೀತಿಗಳ ಭಂ ।
ಟರ ಭಂಟರಂಘ್ರಿ ಬಿಡದಿರ್ಪೆ ॥

—ಶ್ರೀ ನಿಜಗುಣ ಶಿವಯೋಗಿಗಳು

# ೩೧. ಕಲಿಕಂಭನು

ಆರ್ಯಾವರ್ತದ ದಕ್ಷಿಣಭಾಗದಲ್ಲಿ ಚೋಳರಾಜ್ಯವು ಸಕಲೈಶ್ವರ್ಯ ಸಂಪದ್ಯುಕ್ತವಾಗಿ ಪರಿಶೋಭಿಸುತ್ತಿತ್ತು. ಅಂಥ ನಾಡಿನಲ್ಲಿ ತಿರುಮರೆ ಯೆಂಬ ನಗರವು ಹರಣ ಕರುಣಾಕಟಾಕ್ಷದಿಂದ ಮೆರೆಯುತ್ತಿದ್ದಿತು. ಅನೇ ಕಾನೇಕ ಶಿವಾಲಯಗಳಿಂದಲೂ, ಸಾತ್ವಿಕತೆಯನ್ನೇ ಮುಖ್ಯವಾಗಿರಿಸಿ ಕೊಂಡ ಪ್ರಜಾಜನರಿಂದಲೂ, ಧಾರ್ಮಿಕ, ಮಾನಸಿಕ, ಅಧ್ಯಾತ್ಮಕಗಳೇ ಮೊದಲಾದ ಅನೇಕ ಬಗೆಯ ವಿಚಾರಗಳುಳ್ಳ ಜನರ ಸಮೂಹದಿಂದಲೂ, ಪರಾವಲಂಬನೆಯಿಲ್ಲದೆ ಸತತ ಕಾರ್ಯೋನ್ಮುಖರಾದ ಉದ್ಯೋಗಶೀಲ ರಿಂದಲೂ, ಸದ್ಭಕ್ತರ ಸಮೂಹದಿಂದಲೂ, ಅನೇಕ ಸಾತ್ವಿಕ ಸ್ತ್ರೀ-ಪುರುಷ ರಿಂದಲೂ ತುಂಬಿತುಳುಕುವ ಆ ನಗರವನ್ನು ವರ್ಣಿಸಲು ಎಂಥವನಿಗೂ ಉತ್ಸಾಹವು ಉಕ್ಕಿಬರುತ್ತಿತ್ತು.

ಅಂತಹ ನಗರದಲ್ಲಿ ಈಶ್ವರಾನುಗ್ರಹಕ್ಕೆ ಪಾತ್ರನಾದ ಕಲಿಕಂಭನೆಂಬ ಮನ್ನೆಯ ವಂಶದ ಶಿವಭಕ್ತನು ವಾಸಿಸುತ್ತಿದ್ದನು. ಶಿವಭಕ್ತರಿಗೊಪ್ಪುವ ಅಷ್ಟಾವರಣಗಳಲ್ಲಿಯೂ ಹಾಗು ಪಂಚಾಚಾರಗಳಲ್ಲಿಯೂ ಅವನ ಭಕ್ತಿಯುಲ್ಲಿ ಬೇರೂರಿಕೊಂಡಿದ್ದು, ಯಾವಾಗಲೂ ಸದಾಚಾರಶೀಲನಾಗಿ ಪ್ರಭುವು ತನಗಿತ್ತ ಧನ-ಕನಕಗಳನ್ನು ಶಿವನಲ್ಲಿ ನಂಬುಗೆಯನ್ನಿರಿಸಿದವರಿಗೆ ಅವರು ತೃಪ್ತರಾಗುವಂತೆ ವಿನಿಯೋಗಿಸುತ್ತ ಅತ್ಯಂತ ಆನಂದದೊಳಗಿದ್ದನು.

ಕಲಿಕಂಭನು ಕಾಲಕ್ಕೆ ತಕ್ಕಂತೆ ಜಂಗಮರಿಗೆ ಶಿತೋಷ್ಣ ಜಲಗಳಿಂದ ಮಜ್ಜನ ಮಾಡಿಸಿ ಅವರ ಮನ ಒಪ್ಪುವಂತೆ ವಸ್ತ್ರಾದಿಗಳನ್ನು ಪೊರೈಸುತ್ತ ಅಲ್ಲದೆ ಅವರವರ ಇಚ್ಛೆಯಂತೆ ವಡವೆಗಳನ್ನು ಕೊಡುತ್ತ ಲಿಂಗಾರ್ಚನೆ ಯಾದೊಡನೆ ಪಕ್ವಾನ್ನಗಳಿಂದ ಅವರನ್ನು ತೃಪ್ತಿಗೊಳಿಸಿ ತಾನೂ ತೃಪ್ತ ನಾಗುತ್ತಿದ್ದನು. ಇದುವೇ ಆ ಮಹಾಭಕ್ತನ ಕಾಯಕವಾಗಿತ್ತು. ಇದೇ ರೀತಿಯಾಗಿ ಅವನು ಎಷ್ಟೋ ವರ್ಷಗಳ ವರೆಗೆ ತನ್ನ ಕಾಯಕವನ್ನು ನಡೆ ಯಿಸಿಕೊಂಡು ಬಂದನು. ಈ ರೀತಿ ಕಲಿಕಂಭನ ಕಾಯಕವು ನಡೆದಿರಲು

ಭಕ್ತವತ್ಸಲನಾದ ಶಂಕರನು ಇವನನ್ನು ಉದ್ಧರಿಸಬೇಕೆಂದು ಮನದೊಳಗೆ ನಿಶ್ಚಯಿಸಿದನು. ಆ ಕಾರಣದಿಂದ ಶಿವಸಂಕೇತದಿಂದಲೇ ಒಂದು ಕಾರ್ಯವು ಜರುಗಿತು.

ಕಲಿಕಂಭನ ಬಳಿ ಜೀತಕ್ಕೆ ಒಬ್ಬ ಪರಿಚಾರಕನಿದ್ದನು. ಅವನು ಸೇವೆ ಮಾಡಿ ಸಾಕಾಗಿ ಅಲ್ಲಿಂದ ಹೋಗಿಬಿಟ್ಟಿದ್ದನು ಕಲಿಕಂಭನ ಮನೆಯನ್ನು ಬಿಟ್ಟು ಹೋದನು. ಇಪ್ಪತ್ತು ವರ್ಷಗಳ ತರುವಾಯ ಆ ಜೀತದಾಳಿನ ಮನದಲ್ಲಿ, " ನನ್ನ ಒಡೆಯನಾದ ಕಲಿಕಂಭನಿಗೆ ಜಂಗಮರೆಂದರೆ ಪಂಚಪ್ರಾಣ. ಅದಕ್ಕಾಗಿ ತಾನು ಈ ಸಲ ಜಂಗಮವೇಷದಿಂದಲೇ ಹೋಗಿ ಅವನಿಂದ ಆದರಾತಿಥ್ಯ ಹೊಂದಬೇಕು'' ಎಂಬ ಇಚ್ಛೆಯು ಉತ್ಪನ್ನವಾಗಿ ಜಂಗಮ ವೇಷವನ್ನು ಧರಿಸಿ ತನ್ನ ಮೊದಲಿನ ಧಣಿ ಕಲಿಕಂಭನ ಮನೆಗೆ ಬಂದನು.

ಮನೆಯಬಾಗಿಲಿಗೆ ಬಂದ ಜಂಗಮನನ್ನು ನೋಡುತ್ತಲಿ ಕಲಿಕಂಭನು ಎದ್ದು ನಿಂತು, " ನನ್ನ ಸದ್ಗತಿಗೆ ಕಾರಣರಾದ ಪುರುಷಶ್ರೇಷ್ಟರು ದಯಮಾಡಿಸಿದರು. ನನ್ನಲ್ಲಿಯ ಭವರ ಜಂಜಡಗಳನ್ನು ಹೋಗಲಾಡಿಸುವ ಜಂಗಮವರ್ಯರು ಬಂದರು '' ಎಂದು ಅವನನ್ನು ಆದರದಿಂದ ಸತ್ಕರಿಸಿ ಮನೆಯೊಳಕ್ಕೆ ಕರೆತಂದು ಕುಳ್ಳಿರಿಸಿ ಪಾದಗಳ ಅಭಿಷೇಕಕ್ಕಾಗಿ ಅಗ್ಗಣಿಯನ್ನು ತರಲು ತನ್ನ ಪತ್ನಿಗಾಜ್ಞಾಪಿಸಿದನು.

ಆಗ ಅವನ ಪತ್ನಿಯು ಜಂಗಮನ ಪಾದಗಳ ಅಭಿಷೇಕಕ್ಕೆಂದು ಜಲವನ್ನು ತೆಗೆದುಕೊಂಡು ಬಂದು ಜಂಗಮನನ್ನು ನೋಡಿ ಅಚ್ಚರಿಗೊಂಡು ನಿಂತಳು. ಅಲ್ಲದೆ, " ಈತನು ಮೊದಲು ನಮ್ಮ ಮನೆಯಲ್ಲಿ ದುಡಿದ ಜೀತದಾಳು, ಕಪಟ ವೇಷತಳೆದು ಜಂಗಮನಾಗಿ ಇಲ್ಲಿಗೆ ಬಂದಿದ್ದಾನೆ. ಇಂಥ ಕಪಟಿಯ ಪಾದಗಳನ್ನು ತೊಳೆಯಲಾರೆ, ಇದು ನನ್ನಿಂದ ಎಂದೆಂದಿಗೂ ಆಗದ ವಿಷಯ '' ಎಂದು ನಿರ್ದಾಕ್ಷಿಣ್ಯವಾಗಿ ಹೇಳಿಬಿಟ್ಟಳು.

ಹೆಂಡತಿಯ ಮಾತುಗಳನ್ನು ಕೇಳಿ ಕಲಿಕಂಭನು ತನ್ನೆರಡೂ ಕಿವಿಗಳನ್ನು ಮುಚ್ಚಿಕೊಂಡು, ಜಂಗಮನಿಂದೆಯಿಂದ ಅತಿ ಕೋಪಾವಿಷ್ಟನಾಗಿ " ಹೆಣ್ಣೇ ! ಪರುಷವು ಸೋಂಕಿದ ಬಳಿಕ ಕಬ್ಬಿಣ ಮೊದಲಿನ ಗುಣವನ್ನು ಅರಸುವದುಂಟೇ ? ಪ್ರಭುಸ್ವರೂಪನಾದ ನನ್ನ ಮುಕ್ತಿಗೆ ಕಾರಣನಾದ

ಜಂಗಮನಿಗೆ ಈ ರೀತಿಯ ತುಚ್ಛ ನುಡಿಗಳನ್ನಾಡುವಿಯಾ ?'' ಎಂದು ಹದನವಾದ ಖಡ್ಗವನ್ನೆತ್ತಿ ತನ್ನ ಪಕ್ಕದಲ್ಲಿಯೇ ನಿಂತುಕೊಂಡಿದ್ದ ಪತ್ನಿಯ ಕೈಯನ್ನು ಕತ್ತರಿಸಿ ಹಾಕಿದನು.

ಕಲಿಕಂಭನಲ್ಲಿಯ ನಿಸ್ಸೀಮ ಭಕ್ತಿಗೆಮೆಚ್ಚಿದ ಶಂಕರನು ತತ್‌ಕ್ಷಣವೇ ಅವನಿಗೆ ಪ್ರತ್ಯಕ್ಷನಾಗಿ ತನ್ನ ನಿಜರೂಪವನ್ನು ತೋರಿಸಲು ಅವನು ಭಕ್ತಿಯ ಆವೇಶದಿಂದ ಅವನ ಪಾದಗಳಿಗೆರಗಿ ಆನಂದಾತಿರೇಕದಿಂದ ಮೈಮರೆತು ಬಿಟ್ಟನು. ಆಗ ಗಿರಿಜಾಪತಿಯು ಅವನನ್ನು ಸಾಂತ್ವನಗೊಳಿಸಿ ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನಿತ್ತು ಸತ್ಕರಿಸಿದನು.

ಚರವೇಷವುಂ ತಳೆದ ಚರನ ಚರಣವ ತೊಳೆಯು ।
ದಿರೆ ತನ್ನ ಸತಿಯು ಕರವರಿದ ಕಲಿಕಂಭ ।
ರಿರಿಸ ತೆನ್ನುವನೆ ಸುಖದಲ್ಲಿ ॥

—ಶ್ರೀ ನಿಜಗುಣ ಶಿವಯೋಗಿಗಳು.

## ೩೨. ಕಣ್ಣಪ್ಪನು

ಎಣೆಯಿಲ್ಲದ ಐಸಿರಿಯಿಂದೊಪ್ಪುವ ಚೋಳ ರಾಜ್ಯದಲ್ಲಿ ಕಾಲತ್ತಿ ಯೆಂಬ ಮಹಾಶೈಲವು ರಾರಾಜಿಸುತ್ತಿತ್ತು. ಕೋಟಿಕೋಟಿ ಪ್ರಾಣಿಗಳಿಗೆ ಆಧಾರಭೂತವಾದಂಥ ನದಿಗಳಿಗೆ ಉಗಮಸ್ಥಾನವಾಗಿ, ವನ್ಯಪಶುಗಳಿಗೆ ಆಶ್ರಯಸ್ಥಾನವಾಗಿ, ಸಮೀಪದಲ್ಲಿರುವ ದಟ್ಟಡವಿಗಳಿಂದ ಯುಕ್ತವಾಗಿ ವನದೇವತೆಯ ಶೃಂಗಾರದ ನೆಲೆಮನೆಯಾಗಿ, ಭೀಕರವೂ, ಮದದಿಂದಾವೃತವೂ ಆದ ವನ್ಯ ಪಶುಗಳ ಬೀಡಾಗಿ ಅಲ್ಲದೆ ಎಲ್ಲಕ್ಕೂ ಹೆಚ್ಚಾಗಿ ವಿಖ್ಯಾತವಾದ ಲಿಂಗದ ನಿಲಯವಾಗಿ ಆ ಗಿರಿಯು ಶೋಭಿಸುತ್ತಿತ್ತು.

ಅಂಥ ಘೋರವಾದ ಅರಣ್ಯದಲ್ಲಿ ಶಿವಭಕ್ತಿಯು ನೇತ್ರದಂತೆ ಶೋಭಿಸುವ ಬೇಡರ ಗುಂಪಿನ ಒಡೆಯನಾದ ಕಣ್ಣಪ್ಪನೆಂಬವನು, ಸೊಕ್ಕಿದ ಪ್ರಾಣಿಗಳಿಗೆ ಯಮನಾಗಿಯೂ, ತನ್ನ ವೃತ್ತಿಗನುಸಾರವಾಗಿ ವೀರನಾಗಿಯೂ ಇದ್ದರೂ, ಬೇಡರಲ್ಲಿ ಜನಿಸಿದ್ದುದರಿಂದ ಎಲೆಮರೆಯ ಕಾಯಿಯಂತೆ ಮಿನುಗುತ್ತಿದ್ದನು. ಅವನ ಮುಖ್ಯ ಉದ್ದೇಶವು ಬೇಟೆಯಾಡುವದೇ ಆಗಿತ್ತು. ಈ ರೀತಿಯಾಗಿ ಅವನು ಕೆಲವು ವರ್ಷಗಳನ್ನು ಕಳೆಯುತ್ತಿರಲು ಕಾರುಣ್ಯ ಕರುಣಾನಿಧಿಯಾದ ಗೌರೀಪತಿಯು, ತಾನು ಆಜ್ಞಾಪಿಸಿ ಇಳೆಗೆ ಕಳುಹಿಸಿದ ಗಣವರನು ವ್ಯಾಧನಾಗಿ ಕಣ್ಣಪ್ಪನೆಂಬ ಹೆಸರನ್ನು ಧರಿಸಿ ವನಪಾಲನಾಗಿದ್ದು, ಆತನು ಹೆಚ್ಚಳವನ್ನು ಪಡೆದು ನಿತ್ಯಸುಖಿಯಾಗಲೆಂದು ಇಚ್ಛಿಸಿ ಆತನೆಡೆಗೆ ಒಂದು ಮಾಯಾಮೃಗವನ್ನು ಕಳುಹಿಸಿದನು.

ಎಂಥವರನ್ನೂ ಲೆಕ್ಕಕ್ಕೆ ತಾರದೆ ವೇಗದಿಂದ ಓಡಿ ಬರುತ್ತಿರುವ ಮೃಗವನ್ನು ಕಂಡು ಕಣ್ಣಪ್ಪನು ಅದರ ಮೇಲೆ ಬಾಣಪ್ರಯೋಗ ಮಾಡಿದನು. ಆದರೆ ಆ ಮಾಯಾಮೃಗವು ಕಣ್ಣಪ್ಪನ ಬಾಣವನ್ನು ತಪ್ಪಿಸಿಕೊಂಡು ಮತ್ತೆ ಓಡತೊಡಗಿತು. ಆಗ ರೊಚ್ಚಿಗೆದ್ದ ಕಣ್ಣಪ್ಪನು ಕಲ್ಲು-ಮುಳ್ಳುಗಳೆನ್ನದೆ ಅದರ ಬೆನ್ನು ಹತ್ತಲು ಆ ಮೃಗವು ಓಡುತ್ತ ತಿರಕಾಲತ್ತಿನಾಥನಾಲಯವನ್ನು ಪ್ರವೇಶಿಸಿ ಮುಕ್ಕಣ್ಣನ ಮಹಾಲಿಂಗದಲ್ಲಿಯೇ ಅಡಕ

ವಾಗಿಬಿಟ್ಟಿತು. ಇದನ್ನು ಕಂಡು ಕಣ್ಣಪ್ಪನು ಅಚ್ಚರಿಗೊಂಡನು. ಅದೇ ಸಮಯಕ್ಕೆ ಮಂದಿರದ ಬಾಗಿಲುಗಳು ಮುಚ್ಚಿಕೊಂಡವು. ಆಗ ಅವನು ಮಂದಿರದ ದ್ವಾರದ ಬಳಿನಿಂತುಕೊಂಡು "ಒಡೆಯನೇ ಬಾಗಿಲನ್ನು ತೆರೆ" ಎನ್ನಲು ಬಾಗಿಲು ತೆರೆದುಕೊಂಡಿತು.

ಆಗ ಕಣ್ಣಪ್ಪನು ಗರ್ಭಗುಡಿಯೊಳಕ್ಕೆ ಹೋಗಿ ಲಿಂಗುವಿನ ಬಳಿ ನಿಂತುಕೊಂಡು– "ನನ್ನಪ್ಪನೇ ! ಅದೃಶ್ಯವಾದ ಆ ಮೃಗವು ನನಗೆ ದೊರೆತದ್ದೇ ಆದರೆ ನಿನಗೆ ಅದರಲ್ಲಿಯ ಅರ್ಧಭಾಗವನ್ನು ಕೊಡುವೆನು. ಅಲ್ಲದೆ ನಾನು ಕೂಡ ನಿನ್ನವನೇ ಆಗುವೆನು" ಎಂದು ನಾನಾ ವಿಧವಾಗಿ ಬೇಡಿಕೊಂಡು, "ನನಗೆ ನೀನು ಗತಿ, ನಿನಗೆ ನಾನು ಗತಿ, ನನ್ನನ್ನು ಕಾಪಾಡು ನನ್ನಪ್ಪ !" ಎನ್ನುತ್ತಿರುವಾಗ ಆ ಲಿಂಗದ ಮಹಿಮೆಯಿಂದ ಮೃಗವು ಅಲ್ಲಿಯೇ ಕಾಣಿಸಿಕೊಂಡಿತು. ಆಗ ಕಣ್ಣಪ್ಪನಿಗೆ ಶಿವಲಿಂಗದ ಮೇಲೆ ಅಪಾರ ನಂಬುಗೆಯುಂಟಾಯಿತು. ಕೂಡಲೇ ಆ ಮೃಗವನ್ನು ಕೊಂದು ಅರ್ಧವನ್ನು ಲಿಂಗಕ್ಕೊಪ್ಪಿಸಿ "ಶಿವನೇ ಸ್ವೀಕರಿಸು" ಎಂದು ಬೇಡಿಕೊಂಡನು.

ನಿರುಪಾಯನಾದ ಶಂಕರನು ಆ ಎಡೆಯನ್ನು ಆರೋಗಿಸಿದಂತೆ ಮಾಡಿ ತನ್ನ ಭಕ್ತನಿಗೆ ಕಾಣಿಸದಂತೆ ಅದನ್ನೆಲ್ಲ ಭೂತಗಳಿಗರ್ಪಿಸಿದನು. ಅದನ್ನು ನೋಡಿ ಕಣ್ಣಪ್ಪನು ಶಂಕರನೇ ಸ್ವೀಕರಿಸಿದನೆಂದು ಭಾವಿಸಿ "ನನ್ನಪ್ಪನೇ ! ಈ ಕಟ್ಟಡವಿಯಲ್ಲಿ ಈ ವರೆಗೆ ಉಪವಾಸವಿದ್ದೆಯಾ ? ಇನ್ನು ಮುಂದೆ ನೀನು ಚಿಂತಿಸಬೇಡ. ಪ್ರತಿದಿನವೂ ನಿನಗೆ ನೇವೇದ್ಯವನ್ನು ಅರ್ಪಿಸುತ್ತೇನೆ." ಮುಂತಾಗಿ ಪ್ರಾರ್ಥಿಸುತ್ತಿರಲು ಕತ್ತಲಾಯಿತು. ಕತ್ತಲಿನಲ್ಲಿ ಶಿವನಿಗೆ ಅಂಜಿಕೆಯಾಗ ಬಹುದೆಂದು ಮುಗ್ಧನಾದ ಆ ಬೇಡನು ಭಾವಿಸಿ ಅಲ್ಲಿಯ ಕಟ್ಟಿಗೆಗಳನ್ನು ತಂದು ಬೆಂಕಿಹೊತ್ತಿಸಿ ಬೆಳಕನ್ನುಂಟು ಮಾಡಿ "ಸುಖಮುಗಪ್ಪಾ" ಎಂದು ಹೇಳಿ ಕುಣಿದಾಡಿದನು.

ಬೆಳಗಾದೊಡನೆ ಶಿವಾರ್ಪಣೆಗೆಂದು ಆಹಾರ ತರಲು ಕಾನನದೊಳಗೆ ಹೋದನು. ಆಗ ಹಣೆಯಲ್ಲಿ ಪ್ರಕಾಶಮಾನವಾದ ತ್ರಿಪುಂಡ್ರವನ್ನು ಧರಿಸಿ ರುದ್ರಾಕ್ಷಮಾಲೆಯಿಂದೊಪ್ಪುವ ಕೊರಳುಳ್ಳವನಾದ ಬ್ರಾಹ್ಮಣನೋರ್ವನು ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ತಿರಕಾಲತ್ತಿನಾಥನ ದೇವಾಲಯ

ವನ್ನು ಪ್ರವೇಶಿಸಿ, ಮಾಂಸದ ಚಿಕ್ಕ ಚಿಕ್ಕ ತುಂಡುಗಳು ಗರ್ಭಗುಡಿಯಲ್ಲೆಲ್ಲ ಬಿದ್ದಿರುವದನ್ನು ಕಂಡು ನೊಂದು ಆಶ್ಚರ್ಯಭರಿತನಾಗಿ ನಿಂತುಕೊಂಡನು. ಆ ಬಳಿಕ ಅವನು ಶಾಂತಚಿತನಾಗಿ ಮತ್ತೆ ದೇವಾಲಯುವನ್ನು ಶುಚಿಗೊಳಿಸಿ ನಾನಾವಿಧವಾಗಿ ಮಂತ್ರಗಳಿಂದ ಸ್ತುತಿಸಿ, "ಹೇ ದೇವ ದೇವಾ! ಹೇ ಶಕ್ತಿವಂತನೇ ! ನಿತ್ಯನಾದ ಭಗವಂತನೇ ! ನಿನ್ನಲ್ಲಿ ಒಂದು ವಿಷಯುವನ್ನು ಅರಿಕೆ ಮಾಡಿಕೊಳ್ಳುತ್ತೇನೆ. ದುರಾಚಾರಿಗಳು ಒಳಗೆ ಬಾರದಂತೆ ನೀನು ನೋಡಿಕೊಳ್ಳಬೇಕು ಶಂಭೋ ! ಅಷ್ಟು ಮಾಡಿದರೆ ನನ್ನ ಮಾನಕ್ಕೆ ನೆಮ್ಮದಿ ಸಿಕ್ಕುವದು ನನ್ನೊಡೆಯ" ಎಂದು ಬೇಡಿಕೊಂಡು ಶಿವಾಲಯುದ ಬಾಗಿಲುಗಳನ್ನು ಭದ್ರವಾಗಿ ಮುಚ್ಚಿ ಬಲವಾದ ಬೀಗವನ್ನು ಬಾಗಿಲಿಗೆ ಜಡಿದು ಆ ಶಿವಭಕ್ತನು ಮನೆಗೆ ಹೋಗಿಬಿಟ್ಟನು.

ಇತ್ತ ಕಾನನಕ್ಕೆ ಹೋದ ಕಣ್ಣಪ್ಪನು ಲಗುಬಗೆಯಿಂದ ಅತ್ಯಂತ ರುಚಿಕರವಾದ ಮಾಂಸವುಳ್ಳ ಮೃಗವೊಂದನ್ನು ಹಿಡಿದು ಕೊಂದು ಅದರ ಮಾಂಸವನ್ನು ಚನ್ನಾಗಿ ಬೇಯಿಸಿಕೊಂಡು ಬೇಗ ಬೇಗ ಹೆಜ್ಜೆಯನ್ನಿಕ್ಕುತ್ತ ಶಿವಾಲಯಕ್ಕೆ ಬಂದು ನೋಡಲು ಬಾಗಿಲಿಗೆ ಬೀಗಹಾಕಿದ್ದಿತು. ಆಗ ಅವನು ಅತ್ಯಂತ ಕಳಕಳಿಯಿಂದಲೂ, ಅಂತಃಕರಣದಿಂದಲೂ, "ನನ್ನಪ್ಪನೇ ಬಾಗಿಲನ್ನು ತೆರೆ" ಎಂದು ಮಗನು ತನ್ನ ತಂದೆಗೆ ಕೇಳಿಕೊಳ್ಳುವಂತೆ ಮನಕರಗುವಂತೆ ನುಡಿದನು. ಮುಂದೆ ಅರೆಕ್ಷಣದಲ್ಲಿಯೇ ಸರ್ವಜ್ಞನಾದ ಲಿಂಗಮೂರ್ತಿಯು ಕರುಣೆಯಿಂದ ಬೀಗವು ಕಳಚಿ ಬಾಗಿಲು ತಂತಾನೆ ತೆರೆದುಕೊಂಡಿತು. ಆಗ ಕಣ್ಣಪ್ಪನು ಆನಂದದಿಂದ ಮಂದಿರದೊಳಗೆ ಪ್ರವೇಶಿಸಿ ಪೂಜಾರಿಯು ಮೊದಲು ಬಂದು ಲಿಂಗುವಿನ ಮೇಲೇರಿಸಿದ ಪತ್ರ-ಪುಷ್ಪಾದಿಗಳನ್ನು ತನ್ನ ಪಾದದಿಂದ ಕೆಳಗೆ ಕೆಡವಿ, ಬಾಯೊಳಗೆ ತುಂಬಿಕೊಂಡು ಬಂದಂಥ ಜಲದಿಂದ ಲಿಂಗಾಭಿಷೇಕ ಮಾಡಿ, ತಲೆಯುಮೇಲಿರಿಸಿಕೊಂಡು ಬಂದ ಕಾಡು ಪುಷ್ಪಗಳನ್ನು ಲಿಂಗದ ಮೇಲಿರಿಸಿ, ಕೈಲಿ ಹಿಡಿದುಕೊಂಡು ಬಂದ ಹೊಸ ಮಾಂಸವನ್ನು ಶಂಕರನ ಮುಂದಿಟ್ಟು, "ನನ್ನಪ್ಪಾ! ನನ್ನೊಡೆಯನೇ! ಇದನ್ನು ದಯವಿಟ್ಟು ಸ್ವೀಕರಿಸಬೇಕು" ಎಂದು ಪ್ರಾರ್ಥಿಸಲು ಕರುಣಾಕರನಾದ ಶಂಕರನು ಮೊದಲಿನಂತೆ ಈ ಮಾಂಸವನ್ನೂ ತನ್ನ ಭೂತಗಳಿಗೆ ಅರ್ಪಿಸಿದನು. ಕಣ್ಣಪ್ಪನಿಗೆ ಆನಂದವಾಯಿತು. ಅದೇ

ಆನಂದದ ಭರದಲ್ಲಿ ಕುಣಿದಾಡುತ್ತ ಮೈಮರೆತವನಾಗಿ ಮತ್ತೆ ಚೇತರಿಸಿ ಕೊಂಡೆದ್ದು ರಾತ್ರಿಯ ಆಹಾರಕ್ಕಾಗಿ ಮತ್ತೆ ಬೇಟೆಗೆ ಹೋದನು.

ಸಾಯಂಕಾಲದ ಸಮಯದಲ್ಲಿ ನಿತ್ಯ ಪರಿಪಾಠದಂತೆ ಪೂಜಾರಿಯು ಮತ್ತೆ ಶಿವಾಲಯಕ್ಕೆ ಬಂದು ನೋಡಲು ಶಿವಾಲಯವು ಮೊದಲಿನಂತೆಯೇ ಮಾಂಸಮಯವಾಗಿ ಬಿಟ್ಟಿತ್ತು. ಅದನ್ನು ಕಂಡು ಅವನು ನೊಂದುಕೊಂಡು-

"ಹೇ ದೇವದೇವಾ ! ನೀನು ಅತ್ಯಾಚಾರಿಗಳಿಗೆ, ಹಿಂಸಕರಿಗೆ ಇಲ್ಲಿ ಸ್ಥಾನವನ್ನು ಕೊಡುವದು ಉಚಿತವೇ ? ಇನ್ನು ಮುಂದೆ ಹೀಗಾಗದಂತೆ ನೋಡಿಕೋ ನನ್ನೊಡೆಯಾ !'' ಎಂದುಪ್ರಾರ್ಥಿಸಿ, ಮನದಲ್ಲಿ ಕೊರಗುತ್ತ ಮತ್ತೆ ಮೊದಲಿನಂತೆ ಶಿವಾಲಯವನ್ನು ಸ್ವಚ್ಛಗೊಳಿಸುವ ಕಾರ್ಯಕ್ಕಣಿ ಯಾದನು. ಮಂದಿರವು ಶುದ್ಧವಾದ ನಂತರ ವಾಡಿಕೆಯಂತೆ ಪೂಜಿಸಿ ಶಿವ ಮಂತ್ರವನ್ನು ಜಪಿಸಿ ಆನಂದಭರಿತನಾಗಿ ಮೊದಲಿನಂತೆ ಬಾಗಿಲುಗಳನ್ನು ಭದ್ರವಾಗಿ ಮುಚ್ಚಿ ಇನ್ನೊಂದು ಸಲ ಮಾಂಸನನ್ನು ಚಲ್ಲುವ ಪಾಪಿಯು ಬಂದರೆ ತುಂಡರಿಸಿ ಚೆಲ್ಲುವೆನೆಂದಾಗಿ ಹೇಳಿಕೊಳ್ಳುತ್ತ ಹೋಗಿಬಿಟ್ಟನು.

ಈ ರೀತಿ ಪೂಜಾರಿ ಹಾಗು ಕಣ್ಣಪ್ಪನ ಕಾಯಕಗಳು ಅವ್ಯಾಹತ ವಾಗಿ ನಡೆದಿರುವಾಗ ಗಿರಿಜೆಯು ಮಹಾದೇವನನ್ನು ಕುರಿತು— "ದೇವ ದೇವಾ ! ನಿನ್ನ ಲೀಲೆಯೂ ಅಗಾಧವಾದದ್ದು. ಅದು ಯಾರಿಗೂ ಗೊತ್ತಾ ಗುವಂತಿಲ್ಲ. ಎಂದು ಶುಚಿರ್ಭೂತನಾಗಿ ಅನನ್ಯ ಮನಸ್ಕನಾಗಿ ನಿನಗೆ ಪ್ರತಿದಿನವೂ ಪತ್ರಿ-ಪುಷ್ಪಗಳನ್ನು ಅರ್ಪಿಸುವ ಪೂಜಾರಿಗಿಂತಲೂ, ಬಾಯೊ ಳಗಿನ ಎಂಜಲ ನೀರಿನಿಂದ ನಿನ್ನ ಅಭಿಷೇಕ ಮಾಡುವ, ತನ್ನ ಕಾಲುಗಳಿಂದ ನಿನ್ನ ತಲೆಯ ಮೇಲಿನ ಪತ್ರ-ಪುಷ್ಪಗಳನ್ನು ಕೆಡವುವ ಹಾಗು ಮಾಂಸವನ್ನು ನೇವೇದ್ಯವನ್ನಾಗಿಸುವ ಆ ಬೇಡರವನ ಬಗೆಗೇ ಹೆಚ್ಚು ಆಸ್ಥೆ ತಳೆದಂತೆ ಕಾಣುತ್ತದೆ. ಇದರ ಕಾರಣವೇನು ಹೇಳಬಲ್ಲೆಯಾ ?'' ಎಂದಳು.

ಗಿರಿಜೆಯ ಮಾತುಗಳನ್ನು ಕೇಳಿ ಶಂಕರನು, ''ಗಿರಿಸುತೆಯೇ ! ಭಕ್ತಿ ಯಿಲ್ಲದ ಪೂಜೆ, ಆಡಂಬರದ ಭಕ್ತಿಯು ನನಗೆ ಸೇರುವಬಗೆಯಾದರೂ ಹೇಗೆ ? ಕುಟಿಲರಹಿತವಾದ ಮನೋವಾಕ್ಕಾಯಗಳಿಂದ ಕೂಡಿದ ಪ್ರೇಮಾ ತಿರೇಕದ ಆ ಕಿರಾತನ ಪೂಜೆಯು ನನಗೆ ಹಿಡಿಸಿದೆ. ಅಂಥದೇ ನನಗೆ ಇಷ್ಟ. ಅವನಲ್ಲಿಯ ನಿಷ್ಕಪಟ ಪ್ರೇಮ-ಭಕ್ತಿಯನ್ನು ನಿನಗೆ ಈಗಲೇ ತೋರಿಸುತ್ತೇನೆ. ನೋಡು '' ಎಂದು ಹೇಳಿದನು.

ಅದೇ ಸಮಯಕ್ಕೆ ಕಣ್ಣಪ್ಪನು ದೇವಾಲಯದೊಳಗೆ ಪ್ರವೇಶಿಸಿ ಅನನ್ಯಭಾವದಿಂಗ ಲಿಂಗವನ್ನು ಈಕ್ಷಿಸಲು ಅದ (ಲಿಂಗದ) ರದೊಂದು ಕಣ್ಣೊಳಗಿಂದ ನೀರು ಬರುತ್ತಿರುವಂತೆ ರಕ್ತವೂ ಬರತೊಡಗಿತು. ಅದನ್ನು ಕಂಡು ಕಣ್ಣಪ್ಪನಿಗೆ ಅತೀವ ದುಃಖವಾಯಿತು. ಆಗ ಅವನು, "ನನ್ನಪ್ಪಾ! ನಿನ್ನ ಕಣ್ಣೊಳಗಿಂದ ಈ ರೀತಿ ರಕ್ತವು ಪ್ರವಹಿಸುತ್ತಿರವಾಗ ನಿನಗೆ ಎಷ್ಟು ನೋವಾಗುತ್ತಿರಬಹುದು? ಈಗ ನಾನೇನು ಮಾಡಿದರೆ ಈ ಪ್ರವಾಹವು ನಿಂತು ನಿನ್ನ ನೋವು ಕಡಿಮೆಯಾದೀತು?" ಎಂದು ಚಿಂತಿಸುತ್ತಿರುವಾಗ ಅವನಿಗೊಂದು ಯೋಚನೆಯು ಹೊಳೆಯಿತು. ತನ್ನ ಕಣ್ಣನ್ನು ಕಿತ್ತು ಲಿಂಗದ ಕಣ್ಣಿಗಿರಿಸಿದರೆ ಬಹುಶಃ ರಕ್ತವು ನಿಲ್ಲುವದೆಂದು ಯೋಚಿಸಿದನು.

ಕೂಡಲೇ ಅವನು ತನ್ನ ಗೈಯೊಳಗಿನ ತೀಕ್ಷ್ಣವಾದ ಅಲಗಿನಿಂದ ತನ್ನೊಂದು ಕಣ್ಣನ್ನು ಕಿತ್ತಿ ರಕ್ತಬರುತ್ತಿದ್ದ ಕಣ್ಣಿನ ಸ್ಥಾನದಲ್ಲಿ ಕೂಡಿಸಲು ರಕ್ತಪ್ರವಾಹವು ನಿಂತುಹೋಯಿತು. ಆಗ ಕಣ್ಣಪ್ಪನಿಗೆ ಅತಿ ಆನಂದವಾಗಿ ಕುಣಿದಾಡತೊಡಗಿದನು. ಆದರೆ ಮರುಕ್ಷಣದಲ್ಲಿಯೇ ಮತ್ತೊಂದು ಕಣ್ಣೊಳಗಿಂದ ರಕ್ತವು ಹೊರಬರತೊಡಗಿತು. ಆಗ ಅವನು ಮೊದಲಿನಂತೆ ಗಾಬರಿಯಾಗದೆ ಗುರುತಿಗೆಂದು ತನ್ನ ಕಾಲಿನ ಹೆಬ್ಬೆರಳನ್ನು ರಕ್ತಬರುತ್ತಿರುವ ಲಿಂಗುವಿನ ಕಣ್ಣಿನ ಸ್ಥಾನದಲ್ಲಿರಿಸಿ ಅಲಗಿನಿಂದ ತನ್ನ ಇನ್ನೊಂದು ಕಣ್ಣನ್ನೂ ಕಿತ್ತಿಕೊಂಡು ಹೆಬ್ಬೆರಳನ್ನಿರಿಸಿದ ಸ್ಥಾನದಲ್ಲಿ ಇರಿಸಿ, ಕೈಯಾಡಿಸಲು ರಕ್ತಪ್ರವಾಹವು ನಿಂತುದು ತಿಳಿದುಬಂದು ತನಗಾದ ನೋವನ್ನು ಪರಿಗಣಿಸದೆ ಅತ್ಯಂತ ಆನಂದದಿಂದ ಕುಣಿದಾಡತೊಡಗಿದನು.

ಕಣ್ಣಪ್ಪನ ಮುಗ್ಧಭಕ್ತಿಗೆ ಮೆಚ್ಚಿದ ಶಂಕರನು ಗಿರಿಯೊಂದಿಗೆ ಪ್ರತ್ಯಕ್ಷನಾಗಿ ಅವನಿಗೆ ಕಣ್ಣುಗಳನ್ನು ದಯಪಾಲಿಸಿ ಕೈಲಾಸಕ್ಕೆ ಕರೆದೊಯ್ದು ಉನ್ನತಗಣಪದವಿಯನ್ನಿತ್ತನು.

ಮೃಡನ ದೃಷ್ಟಿಯೊಳು ರುಜೆಯುಡರಿಲೆಂದತಿ ಭೀತಿ ।
ವಿಡಿದು ನಿಜ ಲೋಚನನ ನಿತ್ತ ಕನ್ನಪ್ಪ ।
ನಡಿಗಳಂ ಪೊತ್ತು ಬಿಡದಿರ್ಪೆ ॥

—ಶ್ರೀ ನಿಜಗುಣ ಶಿವಯೋಗಿಗಳು.

# ೩೩. ನಾಟ್ಯನಮಿಗೆ ತಾಂಡಿಯು

ಭರತಭೂಮಿಯ ದಕ್ಷಿಣಭಾಗದೊಳು ಅತ್ಯಂತ ಮನೋಹರವಾಗಿ ರುವ ಪಾಂಡ್ಯರಾಜ್ಯದಲ್ಲಿ ಮದುರಾನಗರವು ಅತಿ ಪ್ರಸಿದ್ಧವಾಗಿತ್ತು. ಅಲ್ಲಿ ನಾಟ್ಯನಮಿತಾಂಡಿ ಎಂಬ ಶಿವಭಕ್ತನು ಅಷ್ಟಾವರಣನಿಷ್ಟನಾಗಿ ಪಂಚಾ ಚಾರ ಪರಾಯಣನಾಗಿ, ಮನೆತನದಿಂದ ಬಡವನಾಗಿದ್ದರೂ ಶಿವಭಕ್ತಿಯಲ್ಲಿ ಎಲ್ಲರಿಗೂ ಮಿಗಿಲಾಗಿ ಗಣಾಚಾರ ದುರಂಧರನಾಗಿ ಮೆರೆಯುತ್ತಿದ್ದನು.

ಇವೆಲ್ಲಕ್ಕೂ ಕಳಸವಿಟ್ಟಂತೆ ಆತನ ಇಚ್ಛೆಯನರಿವ ಸತಿಯೂ ವಿಧೇಯನಾದ ಮಗನೂ ಇದ್ದುದರಿಂದ ಅವನಿಗೆ ತನ್ನ ಬಡತನದ ಬಗೆಗೆ ಏನೊಂದೂ ವ್ಯಥೆಯೆನ್ನಿಸದೆ, ತನ್ನ ಆಚಾರಕ್ಕೆ ತಿಲಮಾತ್ರವೂ ಲೋಪವು ಬರದೆ ಸುಖದಿಂದಿದ್ದನು. ಹುಟ್ಟುಗುರುಡನಾದ ಈತನಿಗೆ ಶಿವಪ್ರಸಾದ ದಿಂದಲೇ ಶಿವಜ್ಞಾನವು ಲಭಿಸಿತ್ತು. ಶಿವನನ್ನುಳಿದು ಅನ್ಯದೇವನನ್ನು ಭಜಿ ಸುವವರು ಬಳಿಸುವಂಥ ಭಾವಿಯ ನೀರನ್ನು ಈತನ ಲಿಂಗಾಭಿಷೇಕಕ್ಕೆ ಉಪಯೋಗಿಸಲಾರದಂಥ ಛಲವುಳ್ಳವನಾಗಿದ್ದನು.

ಈತನು ದಿನಾಲು ಭಕ್ತಿಪುರಸ್ಸರವಾಗಿ ಶಿವಲಿಂಗಕ್ಕೆ ಮಜ್ಜನ ಮಾಡಿ ಸುವಾಗ ಆತನ ಅಂತಃಕರಣದಲ್ಲಿ ಸಂಪೂರ್ಣವಾಗಿ ಮನಕರಗಿ ಕರುಣಾ ರಸವು ಪ್ರಾಣಾಂತರ್ಗತವಾದ (ಪ್ರಾಣ) ಲಿಂಗದ ಮೇಲೆ ಧಾರೆಧಾರೆಯಾಗಿ ಸುರಿಯುತ್ತಿತ್ತು. ಈ ರೀತಿಯಾಗಿ ಈತನ ಶೀಲವು ಹೆಚ್ಚಾಗತೊಡಗಿದಂತೆ ಪ್ರತಿದಿನವೂ ಹೊಸಭಾವಿಯನ್ನು ತೋಡತೊಡಗಿದನು. ಕೆಲ ನೀಚರು ಇವನು ಪ್ರತಿದಿನವೂ ಭಾವಿ ತೋಡುವದನ್ನು ಸಹಿಸದೆ ಅವನು ತೋಡಿದ ಭಾವಿಯನ್ನು ಕದಡಿ ಕೆಡಿಸಿಬಿಡುತ್ತಿದ್ದರು.

ಇವರ ಈ ರೀತಿಯ ಉಪಟಳಕ್ಕೆ ಬೇಸತ್ತ ಆ ಶಿವಭಕ್ತನು ಆ ಸ್ಥಳ ದಲ್ಲಿರುವದೇ ಯೋಗ್ಯವಲ್ಲವೆಂದು ಭಾವಿಸಿ ಮದುರೆಯನ್ನು ತೊರೆದು ಅಲ್ಲಿಂದ ಎರಡು ಗಾವುದ ದೂರದಲ್ಲಿರುವ ಒಂದು ಸ್ಥಾನಕ್ಕೆ ತನ್ನ ಸತಿ ಸುತರೊಂದಿಗೆ ಹೋಗಿ ಬಿಟ್ಟನು. ಅಲ್ಲಿಗೆ ಹೋದನಂತರ ಅವನು ಈಶ್ವರಾ

ರ್ಪಣೆಗೆ ಸುಖಕರವಾಗುವ ಅಗ್ಗಣಿಗೋಸುಗ ತನ್ನ ಸತಿ ಸುತರೊಂದಿಗೆ ಭೂಮಿಯನ್ನು ತೋಡತೊಡಗಿದನು. ವಿಶ್ವದ ಗರ್ಭವನ್ನೇ ತನ್ನ ಹೃದಯದೊಳಗಿರಿಸಿಕೊಂಡು ಆ ಪ್ರೇಮದೊಬ್ಬಳಿಯಿಂದಲೇ ಉತ್ಸಾಹವನ್ನು ಹೊಂದಿ ಇರುಳು-ಹಗಲೆನ್ನದೆ ಭಾವಿಯನ್ನು ತೋಡುತ್ತಿರಲು ಗಿರಿಜಾಪತಿಯು ಕನಿಕರಗೊಂಡು ಆ ಸ್ಥಳದಲ್ಲಿ ಜಲವನ್ನು ದಯಪಾಲಿಸಿದನು.

ತಾನು ತೊಡಿದ ಭಾವಿಯೊಳಗೆ ಜಲವು ಬಂದುದನ್ನು ಕಂಡು ಹರ್ಷಿತನಾದ ಶಿವಭಕ್ತನು ಕೆಸರಿನ ಬುಟ್ಟಿಗಳನ್ನು ಬೇಗ-ಬೇಗ ಮೇಲಕ್ಕೆ ಜಗ್ಗ ತೊಡಗಿದನು. ಇದೆಲ್ಲವನ್ನು ನೋಡುತ್ತಿದ್ದ ಕೆಲ ನೀಚರು ತಾವು ಉಪಯೋಗಿಸಿದ ನೀರನ್ನು ತುಚ್ಛವೆಂದು ಬಗೆದು ಲಿಂಗಾಭಿಷೇಕಕ್ಕೆ ಬೇರೆ ಭಾವಿಯನ್ನೇ ತೋಡುವ ಕಣ್ಣಿಲ್ಲದ ಇವನ ಸೊಕ್ಕನ್ನು ಇಳಿಸಬೇಕೆಂದು ದುರಾಲೋಚನೆಯಿಂದ ಕೂಡಿದವರಾಗಿ ಕೆಲ ಜೈನ ಉಪ್ಪಾರರನ್ನು ಕರೆದು ಕೆಸರನ್ನು ಎತ್ತುವಾಗ ಹಗ್ಗವನ್ನು ಕತ್ತರಿಸಿ ಈ ಕುರುಡನು ತಗ್ಗಿನೊಳಗೆ ಬೀಳುವಂತೆ ಮಾಡಿರಿ,ಎಂದು ಹೇಳಿ ಅವರಿಗೆ ಧನದ ಆಮಿಷ ತೋರಿದರು.

ಧನದ ಆಶೆಗಾಗಿ ಆ ಅಲ್ಪಮತಿಗಳು ಅವರ ಮಾತಿಗೆ ಒಪ್ಪಿಕೊಂಡು ಶಸ್ತ್ರಗಳೊಂದಿಗೆ ಬಂದು ತಾವು ವಚನಕೊಟ್ಟು ಬಂದಂತೆ ಹಗ್ಗವನ್ನು ಕತ್ತರಿಸಿಬಿಟ್ಟರು. ಆಗ ನಿಷ್ಠಾವಂತನಾದ ಆ ಶಿವಭಕ್ತನು ಕೂಪದೊಳಗೆ ಬೀಳುತ್ತಿರುವಷ್ಟರಲ್ಲಿ ಶಿವಮಂತ್ರವನ್ನು ಸ್ಮರಿಸುತ್ತ ಮತ್ತೆ ಮತ್ತೆ ಆ ಮಂಗಲದಾಯಕವಾದ ನುಡಿಯನ್ನೇ ಬಾಯಿಂದ ಆಡುತ್ತಿರುವಾಗ ಭಕ್ತವತ್ಸಲನೂ ಭಕ್ತಚಿಂತಾಮಣಿಯೂ ಆದ ಸಾಂಬಶಿವನು ಜೈನರ ಅನುಚಿತ ಕಾರ್ಯಗಳಿಂದ ಖತಿಗೊಂಡವನಾಗಿ ತನ್ನ ಭಕ್ತನಿಗೆ ಕಣ್ಣುಗಳನ್ನು ದಯಪಾಲಿಸಿದನು. ಕೂಡಲೇ ಆ ಭಕ್ತಾಗ್ರಣಿಯು ಕೆರಳಿದ ಸಿಂಹನಂತೆ ಹಾರಿ-ಗುದ್ದಲಿಗಳಿಂದಲೇ ತನ್ನ ಕಾರ್ಯದಲ್ಲಿ ವಿಘ್ನವನ್ನುಂಟುಮಾಡಲು ಬಂದ ಜೈನರನ್ನು ಬೆನ್ನಟ್ಟಿ ಸಂಹರಿಸಿದನು.

ಅನಂತರ ಅವನು ಶುದ್ಧವಾದ ಜಲದಿಂದ ತನ್ನಪತ್ನಿ-ಪುತ್ರನೊಂದಿಗೆ ಅತ್ಯಂತ ಭಕ್ತಿಯಿಂದ ಲಿಂಗಾಭಿಷೇಕ ಮಾಡಿ ಮತ್ತೆಮತ್ತೆ ತಲೆಬಾಗಿ ಸ್ತುತಿಸುತ್ತಿರಲು ದಯಾಮಯನಾದ ಪರಮಾತ್ಮನು ಅವರಿಗೆ ದರ್ಶನವಿತ್ತು

ಮೂವರನ್ನೂ ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ಅನುಗ್ರಹಿಸಿದನು.

( ಈ ಶಿವಭಕ್ತನಿಗೆ ಶ್ರೀ ನಿಜಗುಣರು ನಾಟ್ಯಮಿಗೆ ತಾಂಡಿಯೆಂತಲೂ ಸುರಂಗ ಮಹಾ ಕವಿಗಳು ನಾಟ್ಯಮಹಿತಂಡಿಯೆಂದೂ ಸಂಬೋಧಿಸುವರು.)

ಅಗಿವ ಕೊಳಸಂ ಜರಿದು ।
ನಗುವ ಜಿನ ಸಮಯಿಗಳ ವಗಿಯಲೋ ।
ಸುಗವೆ ನಯನಂಬಡೆದ ನಾಟ್ಯ ।
ಮಿಗೆ ತಾಂಡಿ ಮುದವ ನೊದವಿಸು ॥

—ಶ್ರೀ ನಿಜಗುಣ ಶಿವಯೋಗಿಗಳು.

# ೩೪. ಒಲಘಂಡ ಮೂರ್ತಿಗಳು

ಚೋಳ ಮಂಡಲವು ಶಿವಭಕ್ತಿಗೆ ಹೆಸರುವಾಸಿಯಾಗಿದ್ದಂತೆ ಪಾಂಡ್ಯ ರಾಜ್ಯವೂ ಶಿವಭಕ್ತರ ನೆಲೆವೀಡಾಗಿತ್ತು. ಆ ರಾಜ್ಯದೊಳಗಿನ ಮದುರೆ ಯೆಂಬ ಪಟ್ಟಣವು ಅನೇಕ ಭವ್ಯ ಶಿವಾಲಯಗಳಿಂದ ಮನೋಹರವಾಗಿ ಕಂಗೊಳಿಸುತ್ತಿತ್ತು. ಅಲ್ಲಿಯ ದೇವಾಲಯಗಳಲ್ಲಿ ಚೊಕ್ಕನಾಯನಾರ ಮಂದಿರವೇ ಅತಿ ಪ್ರಸಿದ್ಧವಾದುದಾಗಿತ್ತು.

ಆ ಈಶ್ವರನ ಮಂದಿರವು ಅತಿ ರಮಣೀಯವಾಗಿ ಕಟ್ಟಲ್ಪಟ್ಟಿದ್ದು ಅತಿ ವಿಶಾಲವೂ ಭವ್ಯವೂ ಆಗಿತ್ತು. ಧೂಪಗಳೇ ಮೊದಲಾದ ಸುಗಂಧ ದ್ರವ್ಯ ಗಳ ವಾಸನೆಯಿಂದ ಆ ಮಂದಿರವು ಪ್ರತಿದಿನವೂ ಘಮಘಮಿಸುತ್ತ ಭಕ್ತ ಸಮೂಹದ ಮನವನ್ನಾಕರ್ಷಿಸುತ್ತಿತ್ತು. ಆ ಪಟ್ಟಣದಲ್ಲಿ ಒಲಘಂಡನೆಂಬ ಓರ್ವ ಶೈವನು ಅತಿ ಧನಾಢ್ಯನಾಗಿ, ಆ ನಗರಕ್ಕೊಂದು ಅಲಂಕಾರದಂತೆ ಮೆರೆಯುತ್ತಿದ್ದನು. ಆತನು ಮೂರು ಸಮಯದಲ್ಲಿಯೂ ಅಲ್ಲಿಯ ವಿಖ್ಯಾತ ವಾದ ಶೂಲಿಯ ನಿಲಯಕ್ಕೆ ಹೋಗಿ ಅಷ್ಟವಿಧದ ಅರ್ಚನೆಯನ್ನು ಆಗಮೋಕ್ತವಾಗಿ ಮಾಡಿ ಶಿವನಿರ್ಮಾಲ್ಯವನ್ನು ಶಿರಸ್ಸಿನಲ್ಲಿ ತಳೆದು ಶೇಷ ವಾದ ಆ ಶಿವನಿರ್ಮಾಲ್ಯವನ್ನು ಜನರು ತುಳಿದಾಡದಂಥ ಸ್ಥಳಗಳಲ್ಲಿ ಯಾಗಲಿ ಇಲ್ಲವೆ ಪವಿತ್ರ ಜಲಾಶಯಗಳಲ್ಲಿಯಾಗಲಿ ಹಾಕುತ್ತಿದ್ದನು.

ಮಹಾಮಂತ್ರವಾದ ಶಿವಪಂಚಾಕ್ಷರವನ್ನು ಜಪಿಸುವಾಗ ಈತನುಹೊಸ ಗೋಮಯದಿಂದ ಸಾರಣೆ ಮಾಡಿದ ಸ್ಥಳವಲ್ಲಿಯೋ ಆಸನವನ್ನು ಹಾಕು ತ್ತಿದ್ದನು. ಸಾಂಬಶಿವನ ಮೈಬೆಳಗೆಂದು ತ್ರಿಲೋಕದಲ್ಲೆಲ್ಲ ಹೆಸರಾದ ವಿಭೂತಿಯನ್ನು ಧರಿಸಲು ತೆಗೆದುಕೊಳ್ಳುವಾಗ ಬಹುಜಾಗರೂಕತೆಯಿಂದ ಮಡಿಯ ಬಟ್ಟೆಯಲ್ಲಿಟ್ಟುಕೊಂಡಾಗಲಿ ಅಥವಾ ವಿಭೂತಿಯ ಘಟ್ಟಿಯ ಅಳತೆಗೆ ಸರಿಯಾಗಿರುವ ಪಾತ್ರೆಯಲ್ಲಾಗಲೀ ಇಟ್ಟುಕೊಂಡು ಮಹಾ ದೇವನ ಅನಂತನಾಮಗಳನ್ನು ಸ್ಮರಿಸುತ್ತ ಭಕ್ತಿಯಿಂದ ಕಾಲಕಳೆ ಯುತ್ತಿದ್ದನು.

ಅತ್ಯಂತ ಸುವಾಸಿಕವಾದ ನವಗಂಧವನ್ನು ಈಶ್ವರನಿಗರ್ಪಿಸುವದು ಅವನ ಸದಾಚಾರದೊಳಗಿನದೊಂದು ಮುಖ್ಯ ನಿಯಮವಾಗಿತ್ತು. ಈ ರೀತಿಯಾಗಿ ಅವನು ತನ್ನ ಕಾಯಕವನ್ನು ಅನೇಕ ಸಂವತ್ಸರಗಳವರೆಗೆ ಅವ್ಯಾಹತವಾಗಿ ನಡೆಯಿಸಿದನು. ಪ್ರತಿದಿನವೂ ಅವನು ಅರ್ಪಿಸುವಂಥ ಸುಗಂಧದ ಕಂಪು ಕೈಲಾಸದವರೆಗೂ ಹರಡಿತು. ನಿಜ ಜ್ಞಾನದಾಗರನಾದ ನೀಲಕಂಠನಿಗೆ ಇದರ ಅರಿವಾಯಿತು. ಅದರ ಪ್ರತೀಕವೆಂಬಂತೆ ಒಲಘಂಡನಿಗೆ ದಿನ-ದಿನಕ್ಕೆ ಅವನಲ್ಲಿಯ ಧನವು ಕಡಿಮೆಯಾಗತೊಡಗಿ ಅದರ ಬದಲು ಬಡತನವು ಕಾಲಿರಿಸತೊಡಗಿತು. ಕೊನೆಗೆ ತನ್ನ ಇಷ್ಟ ದೈವತಕ್ಕೆ ಗಂಧವನ್ನು ಅರ್ಪಿಸುವ ಯೋಗ್ಯತೆಯು ( ಧನದ ದೃಷ್ಟಿಯಿಂದ ) ಕೂಡ ಅವನಲ್ಲಿ ಉಳಿದಂತಾಯಿತು.

ಇಷ್ಟಾದರೂ ಆ ಶಿವಭಕ್ತನು ಧೈರ್ಯಗೆಡದೆ ಇಪ್ಪತ್ತೆರಡು ಉಪವಾಸವನ್ನು ಮಾಡಿ— " ದಯಾಮಯನಾದ ಮಹಾದೇವನೇ ! ಸರ್ವೇಶ್ವರನೇ ! ಧನಾಭಾರ, ಶರೀರಜಾಡ್ಯ, ಬಂಧುಜನ ವಿಯೋಗಗಳೇ ಮುಂತಾದ ನಾನಾರೀತಿಯ ಕಷ್ಟಗಳನ್ನು ತಂದೊಡ್ಡಿ ಭಕ್ತರನ್ನು ಪರೀಕ್ಷಿಸುವದೇ ನಿನ್ನ ಹುಟ್ಟು ಗುಣವಲ್ಲವೇ ? ಆದರೆ ಇದಕ್ಕೆ ನಾನು ತಿಲಮಾತ್ರವೂ ಅಂಜಲಾರೆನು " ಎಂದು ಅಂದುಕೊಂಡು ಧೀರತನದಿಂದಲೇ ಶಿವಚಿಂತನೆಯಲ್ಲಿ ಮಗ್ನನಾದನು.

ಆಗ ಕರುಣಾನಿಧಿಯಾದ ಫಾಲನೇತ್ರನು ಆ ಭಕ್ತನ ಕನಸಿನಲ್ಲಿ ಬಂದು " ವಿವೇಕಶಾಲಿಯಾದ ಭಕ್ತನೇ ! ನೀನು ಈ ರೀತಿ ಏತಕ್ಕೆ ಕೊರಗುತ್ತಿರುವೆ ? ನಿನ್ನ ಮೊಳಕೈಯೊಳಗೇ ಶ್ರೇಷ್ಠ ಗಂಧವಿರುವಾಗ ಬೇರೆ ಕೊರಡನ್ನು ಅರಸುವದು ಹುಚ್ಚುತನವಲ್ಲವೇ ? " ಎಂದು ನುಡಿದು ಮಾಯವಾದನು. ಆಗ ಒಲಘಂಡನು ಅತಿ ಆನಂದಿತನಾಗಿ ತಾನು ದಿನವೂ ಪೂಜಿಸುವ ಶಿವಾಲಯಕ್ಕೆ ಎಂದಿಗಿಂತಲೂ ಹೆಚ್ಚಿನ ಉತ್ಸಾಹದಿಂದ ಹೋಗಿ ಅಷ್ಟವಿಧದ ಅರ್ಚನೆಯನ್ನು ಮಾಡಿ ನೂತನವಾಗಿ ಕಂಡು ಹಿಡಿದ ಅಪೂರ್ವಗಂಧವನ್ನು ಪ್ರೀತಿಯಿಂದ ಸಿದ್ಧಗೊಳಿಸಿ ಬಿಲ್ವ ದಳಗಳಿಗೆ ಲೇಪಿಸಿ ಅತ್ಯಂತ ಭಕ್ತಿಯಿಂದ ಆ ಬಿಲ್ವ ದಳಗಳನ್ನು ಶಿವನಾಮ ಸಂಕೀರ್ತನಪೂರ್ವಕವಾಗಿ ಧರಿಸುತ್ತ ಇನ್ನು ನನ್ನ ಗಂಧದ ನಿಯಮಕ್ಕೆ ತೊಂದ

ರೆಯು ಬರಲಾರದು ಎಂದು ನಲಿದಾಡತೊಡಗಿದನು.

ಈ ರೀತಿಯಾಗಿ ಅವನು ತನ್ನ ಆನಂದದಲ್ಲಿಯೇ ಮೈಮರೆತಿರುವಾಗ ದೀನಬಂಧುವಾದ ಮೃತ್ಯುಂಜಯನು ಅವನಿಗೆ ಕಾಣಿಸಿಕೊಂಡು ಹರಿಸಿ, ಅತ್ಯಂತ ನಲುಮೆಯಿಂದ ಕೈಲಾಸಕ್ಕೆ ಕರೆದೊಯ್ದು ಮಹೋನ್ನತವಾದ ಗಣಪದವಿಯನ್ನು ದಯಪಾಲಿಸಿದನು.

ಅಗಜೇಶನಿಗೆ ತವ್ರು ॥
ಸೊಗಸುತಿಹ ಮೊಳಕ್ಕೈಯೊ ।
ಳೊಗೆದ ಗಂಧವನೆ ಸಲಿಸಿದೊಲ ಘಂಷ ವು ।
ತಿರ್ಗಳೆನ್ನ ಹರಘುರ ಭೂಜರ್ ॥

—ಶ್ರೀ ನಿಜಗುಣ ಶಿವಯೋಗಿಗಳು.

# ೩೫. ಅಃಪ್ರೂತಿಯರು

ಇಳೆಯೊಳು ಪುಣ್ಯದ ತವರುಮನೆಯೆನಿಸಿದ ಚೋಳಮಂಡಲದಲ್ಲಿ ಅನೇಕ ಶಿವಾಲಯಗಳಿಂದೊಪ್ಪುವ ತಿರುವಣ್ಣೂರು ಎಂಬ ಪಟ್ಟಣವಿದ್ದಿತು. ಅಲ್ಲಿ ಸಿರಿಯ ಅರಸನಂತೆ ಸೌಭಾಗ್ಯಾತಿಶಯದಿಂದ ಕೀರ್ತಿಯುತನಾದ ಅಃಪೂತಿಯೆಂಬ ಶಿವಭಕ್ತನು ವಾಸವಾಗಿದ್ದನು. ಆತನು ಯಾವಾಗಲೂ ಸಜ್ಜನರ ಸಂಗದಲ್ಲಿಯೇ ಇರುತ್ತಿದ್ದುದರಿಂದ, ನಿರಾಕಾರನೂ ನಿಷ್ಕಳಂಕನೂ ಆದ ನೀಲಕಂಠನ ಸಾಮಿಷ್ಯವನ್ನು ಪಡೆಯಬೇಕೆಂಬ ಇಚ್ಛೆಯುಂಟಾಯಿತು.

ಈ ರೀತಿ ಇರುವಾಗ ಓರ್ವ ಶಿವಭಕ್ತನು ಅಃಪೂತಿಯ ಬಳಿ ಬಂದು, "ತಿರವರಿಗೆ ಎಂಬ ನಗರದಲ್ಲಿ ಒಬ್ಬ ಮಹಾ ಶಿವಭಕ್ತನಿದ್ದಾನೆ. ಅವನು ಮೊದಲು ಜಿನಭಕ್ತನಾಗಿದ್ದು ಈಗ ಈಶ್ವರನ ಕೃಪೆಯಿಂದ ವಾಗೀಶನೆಂಬ ಹೆಸರಿನಿಂದ ಈಸ್ವರಭಕ್ತನಾಗಿದ್ದಾನೆ. ಆತನೇ ನಿನಗೆ ಗತಿಯು" ಎಂದು ಹೇಳಿದನು. ಅಂದಿನಿಂದ ಅಃಪೂತಿಯ ಜೀವನಕ್ರಮವೇ ಬದಲಾಗಿಬಿಟ್ಟಿತು. ವಾಗೀಶನನ್ನೇ ತನ್ನ ಗುರುವೆಂದು ಭಾವಿಸಿ, ಸದಾ ಅವನ ಧ್ಯಾನದಲ್ಲಿಯೇ ಕಾಲವನ್ನು ಕಳೆಯತೊಡಗಿದನು. ಅಲ್ಲದೆ ಆ ನಾಮವನ್ನು ತನ್ನ ಮಗನಿಗೆ ಇತರ ತನ್ನ ಇಷ್ಟವಸ್ತುಗಳಿಗಿರಿಸಿ ಸಂತೋಷಪಡತೊಡಗಿದನು.

ಇವನು ಈ ರೀತಿ ವಾಗೀಶಮಯನಾಗಿರುವಾಗ ವಾಗೀಶನು ನಾಡಿನಲ್ಲಿಯ ಸಮಸ್ತ ದೇವಾಲಯಗಳನ್ನು ಸಂದರ್ಶಿಸಿ ಯಾವುದೇ ಫಲಾಪೇಕ್ಷೆಯಿಲ್ಲದೆ ನಿಷ್ಕಳಂಕವಾದ ಭಕ್ತಿಯಿಂದ ಶಿವಲಿಂಗಗಳನ್ನು ಅರ್ಚಿಸುತ್ತ ಅಃಪೂತಿಯ ಊರಾದ ತಿರುವಣ್ಣೂರಿನ ಹೊರಭಾಗಕ್ಕೆ ಬಂದು ಅಲ್ಲಿಯ ತೋಟವನ್ನು ಕಂಡು ಇದು ಯಾರದೆಂದು ಕೇಳಿದನು. ಆಗ ಅಲ್ಲಿಯವರು ಅಲ್ಲಿಯ ಕೆಲ ಭಾಗಗಳನ್ನು ಇದು ವಾಗೀಶವಿರಾಮವು, ಇದು ವಾಗೀಶ ಧರ್ಮಛತ್ರವು, ಇದು ವಾಗೀಶ ಪಾಠಶಾಲೆಯು ಇದು ವಾಗೀಶವ್ಯಾಯಾಮಶಾಲೆಯು ಎಂದು ಪರಿಚಯ ಮಾಡಿಕೊಡಲು ವಾಗೀಶನು ಸಂತೋಷ

ಭರಿತನಾದನು. ಊರ ಹೊರವುಗ್ಗಲಿನ ಉದ್ಯಾನವನದಲ್ಲಿ ತನ್ನ ಗುರು ವಾದ ವಾಗೀಶನು ಬಂದಿರುವನೆಂಬ ಸಂಗತಿಯು ಅಃಪೂತಿಯನಿಗೂ ಗೊತ್ತಾಯಿತು.

ಕೂಡಲೇ ಅವನು ಅತಿ ಆನಂದದಿಂದ ಪುರವನ್ನು ಸಿಂಗರಿಸಿ ಶಿವಭಕ್ತ ರಿಂದೊಡಗೂಡಿ ಅತಿಥಿಯಂತೆ ಬಂದ ಗುರುಶ್ರೇಷ್ಠನನ್ನು ಎದುರುಗೊಂಡು ದೂರದಿಂದಲೇ ಅವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ನಂತರ ಸಮೊ ಪಕ್ಕೆ ಹೋಗಿ ಅವನ ಚರಣಗಳಿಗೆರಗಿದ, “ ಗುರುವರ್ಯರೇ ನನ್ನ ಗೃಹಕ್ಕೆ ಆಗಮಿಸಬೇಕು ” ಎಂದು ಬೇಡಿಕೊಂಡು ಅವನನ್ನು ಅತ್ಯಂತ ಆದರದಿಂದ ತನ್ನ ಗೃಹಕ್ಕೆ ಕರೆತಂದು ಉಚ್ಚವಾದ ಪೀಠದಲ್ಲಿ ಕುಳ್ಳಿರಿಸಿ ಆತನ ಪಾದಾ ಭಿಷೇಕವನ್ನು ಭಕ್ತಿಪೂರ್ಣವಾಗಿ ಪೂರೈಸಿದ ನಂತರ, “ ಗುರುವರ್ಯರೇ ! ಅಡೆತಡೆಯಿಲ್ಲದೆ ಅಚಂದ್ರಾರ್ಕವಾಗಿ ತಿರುಗುವ ಈ ಭವಮಾಲೆಯಲ್ಲಿ ನಿಜ ಬೋಧೆಯಿಲ್ಲದೆ ಎಷ್ಟು ಕಾಲ ಬಳಲಲಿ? ಪ್ರತ್ಯಕ್ಷ ಶಿವನಂತಿರುವ ಮಹಾ ಗುರುವೇ ! ಮಹಾ ಪ್ರಭುವೇ ! ನನಗೆ ಸದ್ಬೋಧೆಯನ್ನಿತ್ತು ಉದ್ಧರಿಸು ” ಎಂದು ಅಡಿಗಳಿಗೆರಗಲು, ವಾಗೀಶನು ಅವನ ಮೇಲೆ ಕರುಣಾಕಟಾಕ್ಷವನ್ನು ಬೀರಿ ಹಸನ್ಮುಖನಾಗಿ, ಸದಾಚಾರವನ್ನೂ, ನೀತಿಯನ್ನೂ, ಶಿವಧರ್ಮ ರಹಸ್ಯವನ್ನೂ ತಿಳಿಸಿ ಪರಾ–ಪಶ್ಯಂತಿ ಮಧ್ಯಮಾ–ವೈಖರಿ ಎಂಬ ಶಿವಸ್ಮರಣೆ ಈಕ್ಷಣೆಸ್ತುತಿ, ಪೂಜೆಗಳ ಪರಿಯನ್ನು ವಿವರಿಸಿ ಪರಶಿವ ಮಹಾಮಂತ್ರವನ್ನು ಉಚಿತ ಸ್ಥಾನದಲ್ಲಿ ಉಪದೇಶಿಸಿ ಈ ನಿಯಮವನ್ನು ನಿರ್ವಿಘ್ನವಾಗಿ ಪಾಲಿಸ ಬೇಕೆಂದು ಆಜ್ಞಾಪಿಸಿದನು. ಆಗ ಅವನು ಎಲ್ಲವನ್ನೂ ತೊರೆದು ಗುರು ಸೇವೆಯಲ್ಲಿಯೇ ಕಾಲಕಳೆಯುವದೆಂದು ನಿರ್ಧರಿಸಿ ತನ್ನ ಗುರುವಾದ ವಾಗೀಶನ ಮೊರೆಹೊಕ್ಕನು. ಅಲ್ಲದೆ ಅವನಿಂದ ತಿರುಪಾಡುಗಳನ್ನು ಶ್ರದ್ಧೆ ಯಿಂದ ಕಲಿತು, ಸಂಗೀತದ ಪರಿಯನ್ನೇ ಚನ್ನಾಗಿ ಮನವರಿಕೆ ಮಾಡಿ ಕೊಂಡು ಪ್ರೇಮೋದ್ರೇಕದಿಂದ ಲಿಂಗದೇವನಿಗೆ ಬೇಸರವಿಲ್ಲದೆ ಅನುದಿನವೂ ಪಾಡಿ ಸ್ತುತಿಸುತ್ತ ಕಾಲಯಾಪನೆ ಮಾಡತೊಡಗಿದನು.

ಸಾಂಬಶಿವನ ಅರ್ಧಾಂಗಿಯೂ ಆದಿಶಕ್ತಿಯೂ ಆದ ಗಿರಿಜೆಗೆ ಅಃಪೂ ತಿಯ ಸಂಗೀತವನ್ನು ಕೇಳಬೇಕೆಂಬ ಇಚ್ಛೆಯುಂಟಾಗಲು ಅದನ್ನು ಸಾಂಬ ನಿಗೆ ಅರುಹಿದಳು. ಆಗ ಭಕ್ತವತ್ಸಲನಾದ ಸಾಂಬನು ತನ್ನ ಆಜ್ಞಾಧಾರಕ

ನಾದ ನಂದಿಯನ್ನು ಭೂಲೋಕಕ್ಕೆ ಅಃಪೂತಿಯನ್ನು ಕರೆತರಲು ಕಳುಹಿದನು. ಮಹಾದೇವನ ಆಜ್ಞೆಯಂತೆ ನಂದಿಯು ವಾಗೀಶನ ಬಳಿಗೆ ಹೋಗಿ ತಾನು ಬಂದ ಕಾರಣವನ್ನು ವಿವರಿಸಿದನು. ಆಗ ವಾಗೀಸನು ಅಃಪೂತಿಯನ್ನುದ್ದೇಶಿಸಿ, "ಮಗನೇ! ನಿನ್ನನ್ನು ಜಗನ್ಮಾತೆಯು ಕರೆಯಿಸಿದ್ದಾಳೆ. ನಿನ್ನ ಮಧುರ ಸಂಗೀತದಿಂದ ಆ ತಾಯಿಯನ್ನು ಸಂತೋಷಗೊಳಿಸು" ಎಂದು ಆಶೀರ್ವದಿಸಿ ನಂದಿಯೊಡನೆ ಕಳುಹಿದನು. ಅದರಂತೆ ಅಃಪೂತಿಯು ನಂದಿಯೊಡನೆ ಶಿವಲೋಕಕ್ಕೆ ಹೋಗಿ ಜಗನ್ಮಾತೆಗೆ ತನ್ನ ಭಕ್ತಿಯುತವಾದ ಸಂಗೀತವನ್ನು ಕೇಳಿಸಿ ಕೃತಕೃತ್ಯನಾಗಲು ಶಿವ-ಪಾರ್ವತಿಯರು ಅತ್ಯಂತ ಆನಂದಿತರಾಗಿ ಅವನಿಗೆ ಗಣಪದವಿಯನ್ನು ಅನುಗ್ರಹಿಸಿದರು.

ಬಿಡದೆ ವಾಗೀಶನಂ ಮೃಡನೆಂಬ ನಿಷ್ಠೆಯುನು ।
ವಿಡಿದು ಗಣಪದವ ನೊಡನೈದಿದಃ ಪೂತಿ ।
ಯಡಿಯುರಂ ಕೀರ್ತಿಸುವೆನೊಪ್ಪಿ ॥

—ಶ್ರೀ ನಿಜಗುಣ ಶಿವಯೋಗಿಗಳು.

# ೩೬. ಕುಲಚಂಗರು

ಶಿವಭಕ್ತರ ನೆಲೆವೀಡಾದ ಚೋಳರಾಜ್ಯದಲ್ಲಿ ತಿರುವೆಯ್ಯಾರೆಂಬ ಪಟ್ಟಣವು ಶಿವಾಲಯುಗಳಿಂದಲೂ, ಶಿವಭಕ್ತರಿಂದಲೂ, ಶೋಭಿಸುತ್ತಿತ್ತು. ಅದನ್ನು ಕುಲಚಂಗನೆಂಬ ದೊರೆಯು ಆಳುತ್ತಿದ್ದನು. ಕುಲಚಂಗನು ಶೈವನಾಗಿದ್ದು ಸತ್ಪಾತ್ರದಾನಿಯೂ, ಗುರು-ಲಿಂಗ-ಜಂಗಮರಲ್ಲಿ ಭಕ್ತಿ—ವಿಶ್ವಾಸಗಳುಳ್ಳವನೂ, ಶಿವಭಕ್ತನೂ, ಸದ್ವರ್ತಶೀಲನೂ ಆಗಿ ಧೀರತನದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದನು.

ಈತನು ಪ್ರತಿದಿನವೂ ಬೆಳಗಿನಲ್ಲೆದ್ದು ತನ್ನ ಉದ್ಯಾನವನಕ್ಕೆ ಹೋಗಿ ಬಿಲ್ವಗಳನ್ನು ಹಾಗು ಪೂಜೆಗೆ ಅರ್ಹವಾದ ಇನ್ನುಳಿದ ಪಲ್ಲವಗಳನ್ನೂ ಹಾಗು ಇತರ ಯಾವುದೇ ಪ್ರಾಣಿಗಳು (ಭ್ರಮರಗಳು ಸಹಿತ) ಮುಟ್ಟಲಾರದಂಥ ಮಕರಂದ ಯುಕ್ತವಾದ ಪುಷ್ಪಗಳನ್ನೂ ತೆಗೆದುಕೊಂಡು ಬಂದು, ಶಿವಾಲಯಕ್ಕೆ ಹೋಗಿ ನಿರ್ಮಲವಾದ ಜಲದಿಂದ ಮಹಾದೇವನಿಗೆ ಅಭಿಷೇಕವನ್ನು ಮಾಡಿ ಭಸ್ಮ ರುದ್ರಾಕ್ಷಾದಿಗಳನ್ನು ಪತ್ರಾದಿ-ಕುಸುಮ ಮಾಲಿಕೆಗಳನ್ನು ಅರ್ಪಿಸಿ ಕ್ರಮಕ್ಕೆ ತಕ್ಕಂತೆ ಪೂಜೆಯನ್ನು ಸಾಂಗಗೊಳಿಸಿ ಆನಂದಿತನಾಗುತ್ತಿದ್ದನು.

ಈ ರೀತಿಯ ಕಾಯಕವನ್ನವರು ಅನುದಿನವೂ ನಡೆಯಿಸುತ್ತ ಗುರು ಲಿಂಗ ಜಂಗಮರನ್ನು ಸನ್ಮಾನಿಸುತ್ತ ಅವರ ಬಯಕೆಗಳನ್ನು ಈಡೇರಿಸುತ್ತ ಅನೇಕ ಸಂವತ್ಸರಗಳನ್ನು ಕಳೆದನು. ಹೀಗಿರಲೊಂದು ದಿನ ಆ ಭೂಪತಿಯು ನಿತ್ಯದಂತೆ ನಸುಕಿನಲ್ಲೆದ್ದು ಬಿಲ್ವಪತ್ರ-ಪಲ್ಲವ-ಪುಷ್ಪಗಳನ್ನು ತಂದು ತನ್ನ ಪತ್ನಿಯೊಂದಿಗೆ ಶಿವಾಲಯಕ್ಕೆ ಹೋಗಿ ನಿತ್ಯದಂತೆ ಪೂಜೆ ಮಾಡಿ ಭಸ್ಮ-ರುದ್ರಾಕ್ಷಗಳನ್ನು ಧರಿಸಿಕೊಳ್ಳುತ್ತಿರುವಾಗ ಅವನ ಪತ್ನಿಯು ಹೂವಿನ ಕಂಪನ್ನ ತಡೆಯಲಾರದೆ ಅದರದೊಳಗಿನದೊಂದು ಮಾಲೆಯನ್ನು ತನ್ನ ಮುಡಿಗಾಗಿ ತೆಗೆದಿರಿಸಿಕೊಂಡಳು. ಅದನ್ನು ಕಂಡು ವಿಪರೀತ ಸಿಟ್ಟು

ಬಂದು ಅಲ್ಲಿಯೇ ನೇತಾಡುತ್ತಿದ್ದ ಖಡ್ಗದಿಂದ ಅವಳ ಕೈಯನ್ನು ಕತ್ತರಿಸಿ ಹಾಕಿದನು.

ಅವನ ಭಕ್ತಿ ಮೆಚ್ಚಿದ ಶಂಕರನು ಪ್ರತ್ಯಕ್ಷನಾಗಿ ಅವನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನಿತ್ತನು.

ಮಲಹರನ ಶಿರಿಮುಡಿಗೆ ಸಲುವಲರ ದೆಗೆದ ನಿಜ ।
ಲಲನೆಯ ಸುಪಾಣಿಯನು ತುಂಡಿಸಿದ ಮಹಾ ।
ಕುಲಚಂಗರೆನ್ನ ಕರುಣಿಪುದು ॥

—ಶ್ರೀ ನಿಜಗುಣ ಶಿವಯೋಗಿಗಳು.

# ೩೭. ಪಿಳ್ಳೆ ನಾಯನಾರು

ಸಕಲ ವೈಭವಗಳಿಂದ ಪರಿಶೋಭಿಸುವ ಪಾಂಡ್ಯರಾಜ್ಯದಲ್ಲಿ ಜೈನ ಧರ್ಮವು ತಾನೇ ತಾನಾಗಿ ಮೆರೆಯುತ್ತಿತ್ತು. ಆ ವಿಭಾಗದಲ್ಲಿ ಶಿವಭಕ್ತರು ಆರು ಬೆರಳಿನವರಂತೆ ಎಲ್ಲಿಯೋ ಒಬ್ಬರು ಸಿಕ್ಕುತ್ತಿದ್ದರು. ಅಲ್ಲಿಯ ದೊರೆಯಾದ ಕೂನಪಾಂಡ್ಯನು ಕೂಡ ಜೈನನೇ ಆದುದರಿಂದ ಜೈನರ ಪ್ರಾಬಲ್ಯವು ಇನ್ನೂ ಹೆಚ್ಚಾಗಿತ್ತು. ಇಷ್ಟೇ ಅಲ್ಲ; ಅವರು ಶಿವಭಕ್ತರನ್ನು ನಿಂದಿಸುವದು, ಅತಿ ಪವಿತ್ರವಾದ ವಿಭೂತಿಯನ್ನು ಹೀಯಾಳಿಸುವದೇ ಮುಂತಾದ ಹೇಯ ಕಾರ್ಯಗಳನ್ನು ಮಾಡಲಿಕ್ಕೆ ಸಹ ಹಿಂದೆ ಮುಂದೆ ನೋಡುತ್ತಿರಲಿಲ್ಲ.

ಅದೇ ರಾಜ್ಯದ ಕಾವೇರಿ ನದಿಯ ತೀರದಲ್ಲಿ ಚಿಯಾಳಿ ಎಂಬ ನಗರವು ಇದ್ದಿತು. ಮಹೇಶ್ವರಭಟ್ಟ-ಮಹಾದೇವಿಯರೆಂಬ ದಂಪತಿಗಳಿದ್ದರು. ಸನ್ಮಾರ್ಗಪ್ರವರ್ತಕರಾದ ಇವರು ಶಿವಭಕ್ತಸಂಪನ್ನರಾಗಿದ್ದರು. ಈ ಪುಣ್ಯವಂತರ ಹೊಟ್ಟೆಯಲ್ಲಿ ಶಿವನ ಅಪ್ಪಣೆಯಂತೆ, ಜೈನರ ಪ್ರಾಬಲ್ಯವನ್ನು ಮುರಿದು ಶಿವ ಮತದ ಉದ್ಧಾರಕ್ಕೆಂದು ಷಣ್ಮುಖನು ಜನಿಸಿದನು. ದಂಪತಿಗಳು ಈ ಶಿಶುವನ್ನು ಪಿಳ್ಳೆನಾಯನಾರು ಎಂಬ ನಾಮದಿಂದ ಕರೆದರು. ಈ ಮಗುವು ತನ್ನ ವಯಸ್ಸಿನ ೧ನೇ ವರ್ಷದಲ್ಲಿಯೇ ಅತ್ಯಂತ ಅದ್ಭುತ ಪವಾಡಗಳನ್ನು ತೋರಿಸಿದ್ದರಿಂದ ಮಹೇಶ್ವರಭಟ್ಟನು ಆ ಶಿಶುವಿಗೆ ತಿರುಜ್ಞಾನ ಸಂಬಂಧನೆಂದು ಹೆಸರಿಟ್ಟು ಅಸಾಮಾನ್ಯವಾದ ಈ ಶಿಶುವು ತನ್ನ ಬಳಿ ಇರುವದುಚಿತವಲ್ಲವೆಂದು ಭಾವಿಸಿ ಚಿಯಾಳಿನಗರದ ಶಿವಾಲಯಕ್ಕೆ ಬಂದು ವಿಶ್ವಪಾಲಕನಿಗೆ ಭಯ-ಭಕ್ತಿಗಳಿಂದ ನಮಸ್ಕರಿಸಿ, "ಭೋ ದೇವದೇವಾ ! ನಾನು ಅಜ್ಞಾನದಿಂದ ಈ ಕುವರನನ್ನು ನನ್ನ ಮಗನೆಂದು ಭಾವಿಸಿದ್ದೆನು. ಆದರ ಈತನಲ್ಲಿಯ ಮಹಾಗುಣಗಳನ್ನು ಕಂಡು ಈತನು ನಿನ್ನ ಮಗನೇ ಎಂದು ನಂಬಿ ನಿನ್ನಲ್ಲಿ ಬಿಟ್ಟು ಹೋಗಲು ಬಂದಿದ್ದೇನೆ. ಅನುಗ್ರಹಿಸಬೇಕು" ಎಂದು ವಿಜ್ಞಾಪಿಸಿಕೊಂಡು ಹೊರಡಲನುವಾಗಲು ಜ್ಞಾನ ಸಂಬಂಧಿಯು ಈಶ್ವರನನ್ನು ಕುರಿತು ನನಗೆ ಜನ್ಮವಿತ್ತು ಜೋಪಾನ

ಮಾಡಿದ ಈ ವಿಪ್ರವರ್ಯನಿಗೆ ಅಕ್ಷಯಧನವನ್ನು ದಯಪಾಲಿಸಬೇಕೆಂದು ಕೇಳಿಕೊಂಡನು. ಮೃತ್ಯುಂಜಯನು ಹಾಗೆಯೇ ಆಗಲೆಂದು ಆ ವಿಪ್ರನಿಗೆ ಧನವನ್ನು ಅನುಗ್ರಹಿಸಿದನು.

ಅನಂತರ ಆ ಶಿಶುವು ಶಿವಾಲಯದಲ್ಲಿಯೇ ತನ್ನ ಶೈಶವಾ (ಬಾಲ್ಯಾ) ವಸ್ಥೆಯನ್ನು ಕಳೆಯತೊಡಗಿರುವದನ್ನು ಕಂಡು ಚಿಯಾಳಿಪುರದ ಜನರು ಆಶ್ಚರ್ಯಾನಂದಗೊಂಡವರಾಗಿ ತಾವೂ ಆ ಶಿಶುವಿನ (ಪಿಳ್ಳೈನಾಯನಾರನ) ಸೇವೆ ಮಾಡುತ್ತಿದ್ದರು. ಈ ರೀತಿ ಎಲ್ಲರ ಆರೈಕೆ-ಸೇವೆಗಳ ಫಲವಾಗಿ ಆ ಶಿಶುವು ಏಳನೆಯ ವರ್ಷದಲ್ಲಿ ಕಾಲಿರಿಸಿತು. ಆಗ ಶಿವನು ಅವನಿಗೆ ಭದ್ರೋಪಕರಣವನ್ನು ಮಾಡಿ ಶಿವೋಪದೇಶವನ್ನು ನಲುಮೆಯಿಂದ ಕರುಣಿಸಿದ್ದಲ್ಲದೆ ತನ್ನ ಮಹಿಮೆಯನ್ನು ಪಾಡುವದಕ್ಕಾಗಿ ಎರಡು ತಾಳಗಳನ್ನು ಕೂಡ ನಲುಮೆಯಿಂದ ನೀಡಿದನು.

ಈ ರೀತಿಯಾಗಿ ಲಿಂಗನಾಥನಿಂದ ಅನುಗ್ರಹಿಸಲ್ಪಟ್ಟ ಆ ಕುಮಾರನು ದಿನಾಲು ಶಿವಲಿಂಗಾರ್ಚನೆಯನ್ನು ಮಾಡುತ್ತ ಶಿವಾನಂದ ಪರನಾಗಿದ್ದನು. ಸದಾಶಿವನು ಕೂಡ ಇವನಿಗೆ ಎಳೆಯ ವಯಸ್ಸಿನಲ್ಲಿಯೇ ಎಲ್ಲ ವಿದ್ಯೆಗಳಲ್ಲಿಯೂ ಪಾರಂಗತನಾಗುವಂತೆ ಅನುಗ್ರಹಿಸಿದ್ದನು. ಹೀಗಿರಲೊಂದು ದಿನ "ಅತಿ ಹೆಚ್ಚಾಗಿರುವ ಜೈನರ ಪ್ರಾಬಲ್ಯವನ್ನು ತಗ್ಗಿಸಿ ಶೈವರನ್ನು ಉದ್ಧರಿಸಬೇಕು" ಎಂಬರ್ಥದ ಓಲೆಯೊಂದು ಕುಲಶ್ಚರ್ಯ ಹಾಗು ಮಂಗಕ್ಕರಸಿಯರಿಂದ ಬಂದಿತು. ಆ ಓಲೆಯನ್ನವಲೋಕಿಸಿದ ಕುಮಾರನು ಅದರಂತೆ ನಡೆಯಲು ಒಪ್ಪಿಕೊಂಡು ಲಿಂಗದೇವನ ಬಳಿ ಸಾರಿ ಅದೆಲ್ಲವನ್ನು ಅವನಲ್ಲಿ ನಿವೇದಿಸಿ ಹೊರಡಲಣಿಯಾದನು.

ಭಕ್ತವೃಂದದೊಡನೆ ಹೊರಟ ಕುಮಾರನು ಅಲ್ಲಲ್ಲಿ ಸಂಚರಿಸುತ್ತ ತತ್ಕಾಲೂರ್ಗೆ ಬಂದ್ದನು. ಅಲ್ಲಿಯ ಓರ್ವ ಶಿವಭಕ್ತನಾದ ಎಲೆಯಸಿಂಗನಿಗೆ ಶಿವಕುಮಾರನು ಬಂದಿರುವನೆಂಬುದು ತಿಳಿದು ಆತನ ಬಳಿಗೆ ಹೋಗಿ ಪ್ರಣಾಮ ಮಾಡಿ ತನ್ನ ಮನೆಗೆ ಬರಲು ಬಿನ್ನವಿಸಿಕೊಂಡನು. ಅವನ ಅಪೇಕ್ಷೆಯಂತೆ ಕುಮಾರನು ಅವನ ಮನೆಗೆ ಹೋಗಲು ಎಲೆಯಸಿಂಗನು ಅವನನ್ನು ಅತ್ಯಂತ ಪ್ರೇಮಾದರಗಳಿಂದ ಸತ್ಕರಿಸಿ, ಪಾದತೀರ್ಥವನ್ನು ಸ್ವೀಕರಿಸಿ, "ಪ್ರಭುವೇ! ನನ್ನದೊಂದು ಬಿನ್ನಹವಿದೆ. ದಯವಿಟ್ಟು

ಅದನ್ನು ಲಾಲಿಸಬೇಕು. ನನ್ನ ಮಗಳಿಗೆ ನಿಮ್ಮ ನಾಮವನ್ನೇ ಇರಿಸಲಾಗಿತ್ತು. ಆದರೆ, ಆ ಕನ್ಯೆಯು ಒಂದು ವರ್ಷದ ಮೊದಲು ತೀರಿಕೊಂಡಳು. ಅವಳ ಅಸ್ಥಿಪಂಜರವನ್ನು ಕಾಯ್ದಿರಿಸಿದ್ದೇನೆ. ಅವಳಿಗೆ ಜೀವದಾನವನ್ನಿತ್ತು ಕಾಪಾಡಬೇಕು'' ಎನ್ನುತ್ತ ಅಸ್ಥಿಪಂಜರವನ್ನಿರಿಸಿದ್ದ ಪೆಟ್ಟಿಗೆಯನ್ನು ತೋರಿಸಲು ಕುಮಾರನು ಶಂಕರನನ್ನು ಸ್ತುತಿಸುತ್ತ ಎಲೆಯಸಿಂಗನ ಕುಮಾರಿಗೆ ಪ್ರಾಣದಾನವನ್ನೀಯಬೇಕೆಂದು ಬೇಡಿಕೊಳ್ಳಲು ನಿದ್ರೆಯಿಂದೆಚ್ಚತ್ತವರಂತೆ ಆ ಕನ್ಯೆಯು ಎದ್ದು ಕುಳಿತಳು. ಕೂಡಿದವರೆಲ್ಲರೂ ಹರ್ಷಾತಿರೇಕದಿಂದ ಉಘೇ-ಉಘೇ ಎಂದರು. ಅಲ್ಲಿಂದ ಕುಮಾರರು ಶಿವಭಕ್ತರೊಂದಿಗೆ ಶಿವನು ಕರುಣಿಸಿದ ಮುತ್ತಿನಮಂಟಪವನ್ನೇರಿ ತುಂಬಿ ಹರಿಯುವ ಕಾವೇರಿಯನ್ನು ದಾಟಿ, ಪಾಂಡ್ಯಭೂಪತಿಯ ಭೂಮಿಯೊಳಗೆ ಪ್ರವೇಶಿಸಿದನು.

ಅಲ್ಲಿಯೇ ಒಂದು ಶಿವಾಲಯವಿದ್ದಿತು. ಕೂಡಲೆ ಕುಮಾರನು ಆ ಮಂದಿರದ ಬಾಗಿಲು ತೆಗೆಯಿಸಿ ಒಳಗೆ ಪ್ರವೇಶ ಮಾಡಿದನು. ಅನಂತರ ಮನದಣಿಯುವಂತೆ ಪೂಜೆಯನ್ನು ಮಾಡಿ ಆನಂದಪಡೆದನು. ಅದರಂತೆ ಅಲ್ಲಿರುವ ಜಿನ ಮಂದಿರಗಳ ಬಾಗಿಲು ಮುಚ್ಚಿಸಿ ಆ ರೀತಿ ಮಾಡುವಾಗ ಅಡ್ಡ ಬಂದವರನ್ನು ಯಮಸದನಕ್ಕಟ್ಟಿ ನಿಶ್ಚಿಂತನಾಗಿದ್ದನು. ಕುಮಾರನ ಈ ರೀತಿಯ ಕಾಯಕದಿಂದ ಜನರಿಗೆ ಚಿಂತೆಯುಂಟಾಗಿ ತಮ್ಮ ಅರಸನ ಬಳಿ ದೂರು ಒಯ್ದು ಆ ಕುಮಾರನನ್ನು ಕೊಂದು ತಮ್ಮನ್ನು ಕಾಯಲು ಸೈನ್ಯವನ್ನು ಕಳುಹಿಸಬೇಕೆಂದು ಕೇಳಿಕೊಂಡರು. ಏಳು ವರ್ಷದ ಕುಮಾರನನ್ನು ಕೊಲ್ಲಲು ಸೇನೆಯನ್ನು ಕಳುಹಿಸುವದು ಹಾಸ್ಯದ ಮಾತಾಗಬಹುದೆಂದೂ ಆ ಕೂನಪಾಂಡ್ಯನು ಆಲೋಚನೆ ಮಾಡಿದನು. ಆದರೆ ಕೊನೆಗೆ ಯಾವುದೂ ಬಗೆಹರಿಯದಂತಾಗಿ ಜೈನರ ಆಗ್ರಹದ ಮೇರೆಗೆ ಅಸಮಾನ ಶೂರರಾದ ಸಹಸ್ರಾರು ರಾಹುತರನ್ನೂ ಎಂಟು ಸಾವಿರ ಕಾಲಾಳುಗಳನ್ನೂ ಕೊಡಲು ಪುತ್ತ ನಂದಿಯು ಆ ಸೇನೆಯ ಜೊತೆಗೆ ಸಾವಿರಾರು ಜೈನರನ್ನೂ ಕೂಡಿಸಿಕೊಂಡು ಬಂದು ಕುಮಾರನಿಳಿದುಕೊಂಡಿದ್ದ ಶಿವಾಲಯಕ್ಕೆ ಮುತ್ತಿಗೆಯನ್ನು ಹಾಕಿದನು.

ಹೊರಗಿನಿಂದ ರಣ ಕಹಳೆಯ ಧ್ವನಿಕೇಳಬರುತ್ತಿರುವಾಗ ಕುಮಾರನು ಶಿವಪೂಜೆಯಲ್ಲಿ ನಿರತನಾಗಿದ್ದನು. ಕೂಡಲೇ ಅವನು ದುಷ್ಟರ

ನಿಗ್ರಹಕ್ಕಾಗಿ ಶಂಕರನಲ್ಲಿ ಕೇಳಿಕೊಂಡನು. ಭಕ್ತವತ್ಸಲನಾದ ಸಾಂಬನು ಕಣ್ಣು ಮುಚ್ಚಿ ತೆರೆಯುವದರೊಳಗಾಗಿ ಆ ಸೈನ್ಯವನ್ನೆಲ್ಲ ನಾಶಮಾಡಿ ಬಿಟ್ಟನು. ಹೀಗಾಗಿ ಜೈನ ಧೊರೆಗೆ ದೊಡ್ಡ ಪೆಟ್ಟು ತಾಕಿತು. ಈ ಸುದ್ದಿಯನ್ನು ಕೇಳಿದ ನಂತರವಂತೂ ಆ ಧೊರೆಯ ಕೈಕಾಲುಗಳೇ ಹೋದವು. ಅಲ್ಲದೆ ಆ ಕುಮಾರನು ಸಾಮಾನ್ಯನಲ್ಲವೆಂಬ ಭಾವನೆಯು ಅರಸನ ಜೊತೆಗೆ ಜೈನರಲ್ಲಿಯೂ ಉಂಟಾಯಿತು. ಕೆಲ ಜೈನರಂತೂ ಅವನನ್ನು ಮಂತ್ರಗಾರನೆಂದು ಕರೆಯತೊಡಗಿದರು. ಕೊನೆಗೆ ಕುಮಾರನು ಆ ಧೊರೆಯ ರಾಜಧಾನಿಗೇ ಬಂದು ಅಲ್ಲಿಯದೊಂದು ಶಿವಾಲಯದಲ್ಲಿದ್ದುಕೊಂಡು ಶಿವಪೂಜೆಯಲ್ಲಿ ನಿರತನಾಗಿ ಸಂತೋಷದಿಂದಿರತೊಡಗಿದನು.

ಪಾಂಡ್ಯರಾಜನ ಪತ್ನಿ ಮಂಗರಸಿಯು ಅತ್ಯಂತ ಶಿವಭಕ್ತೆಯಾಗಿದ್ದಳು ಅವಳ ವಿಶ್ವಾಸಪಾತ್ರ ಸೇವಕನೂ, ಅರಸನ ಸಚಿವನೂ ಆದ ಕಲಶ್ಚಾರ್ಯನೆಂಬವನು ಮಹಾಶಿವಭಕ್ತನಾಗಿದ್ದನು. ಅವರೀರ್ವರಿಗೂ ಶಿವಕುಮಾರನು ತಮ್ಮ ನಗರಕ್ಕೆ ಬಂದ ವರ್ತಮಾನ ತಿಳಿಯುತ್ತಲೇ ಕುಲಶ್ಚಾರ್ಯನು ಆ ಕುಮಾರನಲ್ಲಿಗೆ ಹೋಗಿ ಅಲ್ಲಿಯ ವರ್ತಮಾನವನ್ನೆಲ್ಲ ನಿವೇದಿಸಿಕೊಂಡು ತನ್ನ ಒಡತಿಯು ಜೈನ ಪತಿಯೊಂದಿಗೆ ವಿಭೂತಿಯನ್ನು ಧರಿಸಲೂ ಹೆದರಿ ವಿಭೂತಿಯನ್ನು ನೀರೊಳಗೆ ಬೆರೆಸಿ ಚಿಕ್ಕ ಗೆರೆಯನ್ನು ಎಳೆದುಕೊಳ್ಳುತ್ತಿರುವದಾಗಿಯೂ ಬೇಗನೇ ಈ ಸಂಕಟವನ್ನು ನಿವಾರಿಸಬೇಕಾಗಿಯೂ ಬೇಡಿಕೊಂಡನು. ಆಗ ಕುಮಾರನು ಅವನಿಗೆ ಅಭಯ ನೀಡಿ ಕಳುಹಿದನು.

ಎಲ್ಲಿಯೋ ಒಂದು ಮೂಲೆಯಲ್ಲಿದ್ದ ಪೀಡೆಯು ತಮ್ಮ ನಗರಕ್ಕೇ ಬಂದಿರುವದನ್ನು ಕಂಡು ಜೈನರು ತತ್ತರಿಸಿದರು. ಶಿವಾಲಯಕ್ಕೆ ಬೆಂಕಿಯನ್ನಿಕ್ಕಲು ಪ್ರಯತ್ನಿಸಿದರು. ಆದರೆ ಕುಮಾರನ ಸಾಮರ್ಥ್ಯದಿಂದಾಗಿ ಆ ಜ್ವಾಲೆಯು ಜೈನ ಮಂದಿರಗಳನ್ನೇ ಸುಡತೊಡಗಿತು. ಈ ಮಧ್ಯ ಕೂನ ಪಾಂಡ್ಯರಾಜನಿಗೆ ವಿಪರೀತ ಜ್ವರವು ಕಾಣಿಸಿಕೊಂಡಿತು. ಎಷ್ಟೋ ಜನ ಜಿನ ಪಂಡಿತರು ಬಂದು ಏನೇನೋ ಉಪಾಯಗಳನ್ನು ಮಾಡಿದರೂ ಕಡಿಮೆಯಾಗದೆ ಹೆಚ್ಚಾಗತೊಡಗಿತು. ಆಗ ಅವನ ಪತ್ನಿಯು ಕುಮಾರನನ್ನು ಕರೆಯಿಸಲು ಬಿನ್ನವಿಸಿಕೊಂಡಳು. ಜ್ವರದ ಬಾಧೆಯನ್ನು ತಾಳಲಾರದೆ ಆ ಭೂಪತಿಯು ಕುಮಾರನನ್ನು ಒಡ್ಡೋಲಗಕ್ಕೆ ಕರೆಯಿಸಿಕೊಂಡು,

ಈ ವ್ಯಾಧಿಯಿಂದ ನಿವೃತ್ತನನ್ನಾಗಿ ಮಾಡಿದರೆ ಶೈವಮತವನ್ನು ಅಂಗೀಕರಿಸುವದಾಗಿ ಹೇಳಿದನು.

ಆಗ ಕುಮಾರನು ಶಿವನನ್ನು ಸ್ತುತಿಸುತ್ತ ಭಸ್ಮಪೂರಿತ ಉದಕವನ್ನು ಆ ಅರಸನಿಗೆ ಪ್ರೋಕ್ಷಿಸಲು ಆತನ ಜ್ವರವೆಲ್ಲವೂ ನಿಮಿಷದಲ್ಲಿ ಇಳಿದು ಹೋದವು. ಆಗಲೇ ಅವನು ಶಿವಶಕ್ತಿಯನ್ನು ಮೆಚ್ಚಿದನು. ನಂತರ ಕುಮಾರನು ಆ ಅರಸನ ಬೆನ್ನ ಮೇಲೆ ಕೈಯಾಡಿಸಲು ಅವನ ಗೂನು ಹೋಗಿ ಅತ್ಯಂತ ಸುಂದರನಾದನು. ಈ ರೀತಿಯಾಗಿ ಅವನು ಶೈವ ಧರ್ಮವನ್ನು ಸ್ವೀಕರಿಸಲು ಜೈನರಿಗೆ ಮಹಾ ಅವಮಾನವಾಗಿ ಇನ್ನೂ ಏನೇನೋ ಉಪದ್ವ್ಯಾಪತನವನ್ನು ಮಾಡತೊಡಗಲು ಅರಸನು ಅವರೆಲ್ಲರನ್ನು ಶೂಲಕ್ಕೇರಿಸಿ ಎಲ್ಲೆಡೆಗೂ ಬಿದ್ದುಹೋಗಿದ್ದ ಶಿವಾಲಯಗಳ ಜೀರ್ಣೋದ್ಧಾರ ಮಾಡಿದನು. ಕುಮಾರನಿಂದ ದೀಕ್ಷೆಯನ್ನು ಪಡೆದನು. ಅಲ್ಲದೆ ಕುಮಾರನು ಮಂಗಾಯಕ್ಕರಸಿಗೆ ನಿನ್ನ ಉದರದಲ್ಲಿ ಲೋಕಮಾತೆಯೇ ಮಗಳಾಗಿ ಹುಟ್ಟುವಳೆಂದು ಹರಿಸಿದನು.

ಈ ರೀತಿಯಾಗಿ ಶೈವ ಧರ್ಮ ಪರಿಪಾಲನೆ ಮಾಡಿದ ಕುಮಾರನು ಮರಳಿ ಬರುತ್ತಿರುವಾಗ ಚೋಳರಾಜ್ಯದ ತಿರುಕಳಕುಂಡವೆಂಬ ಮಠಕ್ಕೆ ಬಂದನು. ಅಲ್ಲಿಯ ಅಮರಗೋಪನೆಂಬ ಶಿವಭಕ್ತನು ತನ್ನಮಗಳನ್ನು ಪರಿಗ್ರಹಿಸಬೇಕೆಂದು ಕೇಳಿಕೊಳ್ಳಲು ಕುಮಾರನು ನನ್ನ ತಂದೆ ತಾಯಿಗಳನ್ನು ಕೇಳಿ ಮಾಡಿಕೊಳ್ಳುತ್ತೇನೆ ಎಂದು ಅವರೊಂದಿಗೆ ಚಿಯಾಳಿಪುರಕ್ಕೆ ಬಂದು ಶಿವಾಲಯಕ್ಕೆ ಹೋಗಿ ಅಲ್ಲಿ ಲಿಂಗವನ್ನು ಪೂಜಿಸಿ– "ದೇವಾ! ನೀವು ಭೂಲೋಕಕ್ಕೆ ಕಳುಹಿಸಿದ ಪ್ರಕಾರ ನನ್ನ ಕಾರ್ಯಗಳೆಲ್ಲ ಮುಗಿದು ಹೋದವು. ಈಗ ಅಮರಗೋಪನೆಂಬ ಸದ್ಭಕ್ತನು ತನ್ನ ಮಗಳನ್ನು ನನಗೆ ಕೊಡಬೇಕೆಂದು ಮಾಡಿದ್ದಾನೆ. ಇದಕ್ಕೆ ನಿನ್ನ ಅಭಿಪ್ರಾಯವೇನು? ನೀನು ಹೇಳಿದಂತೆ ಕೇಳುವೆನು. ಅಲ್ಲದೆ ನನ್ನನ್ನೂ ಹಾಗು ನನ್ನ ಹಿಂದಿರುವ ಈ ಭಕ್ತವೃಂದವನ್ನು ನಿನ್ನ ಮುಖದಲ್ಲಿ ಸೇರಿಸಿಕೋ" ಎಂದು ಕೇಳಿಕೊಂಡನು ಅಂದಿಗೆ ಆ ಕುಮಾರನಿಗೆ ಏಳುವರುಷಗಳು ತುಂಬಿದ್ದವು. ಆಗ ಆ ಲಿಂಗ ಮೂರ್ತಿಯಿಂದ "ಕುಮಾರಾ, ಬಾ !" ಎಂಬ ಧ್ವನಿಯಾಗಿ ಆ ಲಿಂಗದ ಮುಖ ಬಾಯ್ದೆರೆಯಿತು. ಆಗ ಕುಮಾರನು ಮದುಮಗಳೊಂದಿಗೆ, ಅಮರ

ಗೋಪನೇ ಮೊದಲಾದ ಭಕ್ತರೊಂದಿಗೆ ಆ ಮುಖದಲ್ಲಿ ಸೇರಿಕೊಂಡನು.

ಭಗವಂತನು ಕೈಲಾಸದಲ್ಲಿ ಅಮರಗೋಪನ, ಅವನ ಮಗಳ ಹಾಗು ದಿಬ್ಬಣಿಗರ ಪರಿಚಯುವನ್ನು ಪ್ರಮಥರಿಗೆ ಮಾಡಿಸಿ ಅವರಿಗೆ ಗಣಪದವಿ ಯನ್ನಿತ್ತು ಜಿನರನ್ನು ನಿಗ್ರಹಿಸಿ ಬಂದ ಕುಮಾರನನನ್ನು ನಲುಮೆಯಿಂದ ಮುದ್ದಾಡಿದನು.

ಬೆಂಬಿಡದೆ ಬತ್ತಲೆಗರಂ ಬಡೆದು ಭಸಿತವನೊ।
ಡಂಬಡಲು ಧರೆಯೊಳೆಸಗಿದ ತಿರುಜ್ಞಾನ।
ಸಂಬಂಧಿ ನಿಜವ ನರುಹೆನಗೆ ॥

–ಶ್ರೀ ನಿಜಗುಣ ಶಿವಯೋಗಿಗಳು.

## ೩೮. ಸಾಂಖ್ಯನಾಯನಾರು

ಶಿವಭಕ್ತರ ತವರು ಮನೆಯೆನ್ನಿಸಿದ ಚೋಳ ಮಂಡಲದಲ್ಲಿ ಆರೂರು ಎಂಬ ನಗರವು ವಿವೇಕ ಸಂಪನ್ನರಿಂದಲೂ, ಶಿವಾರಾಧನೆಯಲ್ಲಿಯೇ ಕಾಲಕಳೆಯುವಂಥ ಭಕ್ತರಿಂದಲೂ, ಭವ್ಯವಾದ ಶಿವಾಲಯಗಳಿಂದಲೂ ನಯನಾನಂದಕರವಾಗಿ ಶೋಭಿಸುತ್ತಿತ್ತು. ಸಾಂಖ್ಯನೆಂಬ ದನಗಾಹಿಯು ಕೂಡ ಅದೇ ಪಟ್ಟಣದಲ್ಲಿ ವಾಸಿಸುತ್ತಿದ್ದನು.

ಈತನು ದನಗಳನ್ನು ಕಾಯ್ದು ಬರುವ ಅಲ್ಪಾರ್ಜನದಿಂದಲೆ ಶಿವಭಕ್ತರನ್ನು ಸಂತೃಪ್ತಗೊಳಿಸಿ ತನ್ನ ಉದರ ನಿರ್ವಹಣೆಯನ್ನು ಸಾಗಿಸುತ್ತಿದ್ದನು. ಇವನಲ್ಲಿಯ ಶಿವಭಕ್ತಿ ಪೂಜೆಗಳ ವಿಧಾನವಂತೂ ತೀರ ಅಚ್ಚರಿ ಪಡುವ ದಂಥದ್ದಾಗಿತ್ತು. ದನಗಳನ್ನು ಅಟ್ಟಿಕೊಂಡು ಕಾನನಕ್ಕೆ ಹೋದಾಗ ಅಲ್ಲಿಯ ಬೈಲೊಳಗಿನದೊಂದು ಲಿಂಗುವಿಗೆ ಚಿಕ್ಕಚಿಕ್ಕ ಕಲ್ಲುಗಳನ್ನು ಅರ್ಪಿಸಿ ಅನನ್ಯ ಭಾವಿಸಿ ತನಗುಂಟಾದ ಆನಂದವನ್ನು ಶಿವಾರ್ಪಣ ಮಾಡಿ ಕಾಲಕಳೆಯುತ್ತಿದ್ದನು.

ಪ್ರತಿದಿನವೂ ಹೊಸಹೊಸ ಚಿಕ್ಕ ಕಲ್ಲುಗಳನ್ನು ಆರಿಸಿ ತಂದು ಲಿಂಗಕ್ಕೆ ಅರ್ಪಿಸುವದು ಅವರ ಕಾಯಕವಾಗಿಬಿಟ್ಟಿತು. ಒಂದು ಸಲ ಇವನನ್ನು ಪರೀಕ್ಷಿಸಬೇಕೆಂದು ಫಾಲನೇತ್ರನು ಸಾಂಖ್ಯನಿಗೆ ಒಂದು ಚಿಕ್ಕ ಕಲ್ಲೂ ದೊರೆಯದಂತೆ ಮಾಡಿದನು. ಲಿಂಗಪೂಜೆಯಾಗದ ಹೊರ್ತು ಊಟ ಮಾಡಲಾರದ ಅವನು ಕಲ್ಲು ಸಿಗದ್ದಕ್ಕೆ ಇಪ್ಪತ್ತು ದಿನಗಳವರೆಗೆ ಉಪವಾಸ ಮಾಡಬೇಕಾಯಿತು. ಕೊನೆಗೆ ಇಪ್ಪತ್ತೊಂದನೆಯ ದಿನ ಅವನಿಗೆ ಸುಂದರವಾದ ದೊಡ್ಡ ಕಲ್ಲು ಗೋಚರವಾಯಿತು. ಇಷ್ಟು ದಿನಗಳು ಗತಿಸಿದರೂ ಪರವಿಲ್ಲ ಉತ್ತಮ ಕಲ್ಲು ದೊರೆಯಿತೆಂದು ಸಂತುಷ್ಟನಾದ ಸಾಂಖ್ಯನು ಆ ಕಲ್ಲನ್ನೆತ್ತಿ ಲಿಂಗದ ಮೇಲಿರಿಸಹೋದನು.

ಆಗ ಶಂಕರನು ಅವನ ಕೃತ್ಯಕ್ಕೆ ಆನಂದಿತನಾಗಿ ಅವನಿಗೆ ತನ್ನ

ನಿಜರೂಪವನ್ನು ತೋರಿಸಿ ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ದಯಪಾಲಿಸಿದನು.

ಕಡುನೇಹದಿಂ ಕಲ್ಲೊಳಿಡ ಪೂಜಿಗೆಂದೀಶ ।
ನೊಡನೊಲಿವನೆಂಬು ಜಗಕೆ ಸಾರಿದ ಸಾಂಖ್ಯ ।
ರಡಿಗಳಿರಲೆನ್ನ ಶಿರದಲ್ಲಿ ॥

—ಶ್ರೀ ನಿಜಗುಣ ಶಿವಯೋಗಿಗಳು.

## ೩೯. ವಾಗೀಶನು

ಪಾಂಡ್ಯರಾಜ್ಯದಲ್ಲಿ ವಿಖ್ಯಾತವಾದ ಮದುರೆಯೆಂಬ ಪಟ್ಟಣವು ಜೈನರಿಂದ ತುಂಬಿ ತುಳುಕುತ್ತಿತ್ತು. ತನ್ನಲ್ಲಿಯ ವಾಕ್ ವೈಖರಿಯಿಂದ ಹೆಸರು ಪಡೆದ ವಾಗೀಶನೆಂಬ ಜೈನ ಪಂಡಿತನು ಅವಿವಾಹಿತನಾಗಿದ್ದುಕೊಂಡು, ತರ್ಕ, ತಂತ್ರ, ವ್ಯಾಕರಣಗಳೇ ಮೊದಲಾದವುಗಳನ್ನು ಕಲಿಸುತ್ತ ಶಿಷ್ಯರ ಸೇವೆ ಮಾಡುತ್ತ ಸುಖದಿಂದಿದ್ದನು ಈತನಿಗೆ ತೆಲ್ಲಿವಲ್ಲಿನಾಚಿ ಎಂಬೋರ್ವ ಜೇಷ್ಠ ಸೋದರಿಯಿದ್ದು ಅವಳು ಮಹಾಶಿವಭಕ್ತಳಾಗಿ ವಾಗೀಶನಿಂದ ದೂರವಾಗಿಯೇ ತಿರಿವರಿ ಎಂಬ ನಗರದಲ್ಲಿದ್ದುಕೊಂಡು ತನ್ನ ಸೋದರನು ಯಾವಾಗ ಶಿವಭಕ್ತನಾದಾನೋ ಎಂದು ಶಿವನಲ್ಲಿ ಮೊರೆಯಿಡುತ್ತಿದ್ದಳು.

ಆ ಸಾಧ್ವಿಯ ಮೊರೆಯನ್ನು ಕೇಳಿಯೋ ಏನೋ ಎಂಬಂತೆ ಒಂದು ದಿನ ಇದ್ದಕಿದ್ದಂತೆ ವಾಗೀಶನಿಗೆ ಅತಿ ಭಯಂಕರ ಜಠರ ರೋಗವು ಕಾಣಿಸಿಕೊಂಡಿತು. ಆಗ ಅವನು ಜೈನ ತೀರ್ಥಂಕರರನ್ನೆಲ್ಲ ಸ್ಮರಿಸಿದನು. ಏನು ಮಾಡಿದರೂ ಆ ನೋವು ಕಡಿಮೆಯಾಗದೆ ಕ್ಷಣಕ್ಷಣಕ್ಕೆ ಹೆಚ್ಚಾಗುತ್ತಲೇ ಹೋಗಲು ನಿರಾಶನಾದ ವಾಗೀಶನು ತನ್ನನ್ನು ತನ್ನ ಅಕ್ಕನಬಳಿ ಹೊತ್ತುಕೊಂಡು ಹೋಗಿರೆಂದು ಹೇಳಲು ಪರಿಚಾರಕರು ಹಾಗೆಯೇ ಮಾಡಿದರು.

ವಾಗೀಶನ ಸೋದರಿಯು ಅವನು ಶೈವನಾಗುವದಾದರೆ ಅವನ ಮುಖವನ್ನು ನೋಡುವದಾಗಿ ಹೇಳಲು ಅದಕ್ಕವನು ಒಪ್ಪಿಕೊಂಡು ಭಸ್ಮವನ್ನು ಧರಿಸಿದನು. ಆಗ ಆ ಸಾಧ್ವಿಯ ಮಹಿಮೆಯಿಂದ ಅವನ ಉದರ ಶೂಲಿಯು ಮಾಯವಾಗಿಬಿಟ್ಟಿತು. ಅಂದಿನಿಂದಲೇ ಅವನು ಜೈನ ಮತವನ್ನು ತ್ಯಜಿಸಿ ಮಹಾಶಿವಭಕ್ತನಾಗಿಬಿಟ್ಟನು. ಇಂಥ ದೊಡ್ಡ ಪಂಡಿತನು ಮತಾಂತರ ಹೊಂದಿದುದನ್ನು ಕಂಡು ಜೈನರಿಗೆ ಬಹಳ ಕೋಪಬಂದಿತು. ಅವನಿಗೆ ನಾನಾರೀತಿಯ ತೊಂದರೆಗಳನ್ನು ಕೊಡತೊಡಗಿದರು. ಆದರೂ ಅವನ ಮನಸ್ಸು ಮತ್ತೆ ತಿರುಗದೇ ಹೋಯಿತು.

ಇಷ್ಟಾದರೂ ಜೈನರಿಗೆ ತೃಪ್ತಿಯಾಗದೆ ಅವನಿರುವ ಸ್ಥಾನದಲ್ಲಿ ವಿಷ

ಸರ್ಪಗಳೇ ಮೊದಲಾದ ಘಾತುಕ ಜಂತುಗಳನ್ನು ಬಿಡತೊಡಗಿದರು. ವಾಗೀಶನ ಭಕ್ತಿಯೆದುರು ಯಾವ ಜಂತುಗಳ ಆಟವೂ ನಡೆಯದಾಯಿತು. ಆದರೂ ವಾಗೀಶನು ಜೈನರ ಉಪಟಳಕ್ಕೆ ಬೇಸತ್ತು ಮದುರೆಯನ್ನು ತ್ಯಜಿಸಬೇಕೆಂದು ಯೋಚಿಸಿ ಅದರಂತೆ ತಿರಿವರಿಗೆಯ ಕಡೆಗೆ ನಡೆದನು.

ಮಾರ್ಗದಲ್ಲಿಯ ಹೊಳೆಯೊಂದನ್ನು ದಾಟುವಾಗ ಕುಷ್ಠ ರೋಗಿಯೊಬ್ಬನು ತನ್ನನ್ನೂ ಆ ದಂಡೆಗೆ ತಲುಪಿಸಬೇಕೆಂದು ಬೇಡಿಕೊಳ್ಳಲು ವಾಗೀಶನು ಹಾಗೆಯೇ ಆಗಲೆಂದು ಅವನನ್ನು ಆಚೆಯ ದಡಕ್ಕೆ ತಲುಪಿಸಿದನು. ಆಗ ಕುಷ್ಠರೋಗಿಯ ವೇಷದಿಂದ ಬಂದಿದ್ದ ಶಂಕರನು ಪ್ರತ್ಯಕ್ಷನಾಗಿ ಅವನಿಗೆ ತಿರಿನಾವುಕನೆಂದು ಹೆಸರಿಟ್ಟು ಹರಿಸಿದನು. ಅಲ್ಲಿಂದ ಅವನು ಅಲ್ಲಿಯ ಮಹಾಲಿಂಗವನ್ನು ಪೂಜಿಸುತ್ತ ಆನಂದದಲ್ಲಿರಲೊಂದು ದಿನ ಓರ್ವ ಶಿವಭಕ್ತನು ಬಂದು ಕೆಂಪು ಕಣಗಿಲೆಯ ಹೂವನ್ನು ತಂದುಕೊಟ್ಟು ಇದನ್ನು ಈಶ್ವರಾರ್ಪಣ ಮಾಡಬೇಕೆಂದು ಕೇಳಿಕೊಂಡನು.

ಆಗ ವಾಗೀಶನು ಪುಷ್ಪಗಳನ್ನು ಲಿಂಗಕ್ಕೇರಿಸಲೆಂದು ತಿರುಪಾಡುಗಳನ್ನು ಹಾಡುತ್ತ ಈಶ್ವರನ ಗದ್ದುಗೆಯ ಸಮೀಪಕ್ಕೆ ಬಂದು ಕೈಚಾಚಲು ಶಿವಲಿಂಗದೊಳಗಿಂದ “ ಪೂವಿಷ್ಟಸಿದರ್ ” ಎಂಬ ಶಬ್ದವು ಹೊರಟಿತು. ಅದನ್ನು ಕೇಳಿದೊಡನೆ ವಾಗೀಶನು ಗಾಬರಿಯಾಗಿ ಹಾಗೆಯೇ ನಿಂತಿರಲು ಶಿವಲಿಂಗದಿಂದ ಮತ್ತೆ “ ವಾಗೀಶ್ವರಾ ! ನಿನಗೆ ಉಪದೇಶವಿಲ್ಲ. ಹೀಗಿದ್ದು ನನ್ನನ್ನು ಹೇಗೆ ಮುಟ್ಟುವೆ ? ” ಎಂಬ ಧ್ವನಿ ಹೊರಟಿತು. ಆಗ ಅವನು ಕೈಯೊಳಗಿನ ಹೂವಗಳನ್ನು ಅಲ್ಲಿಯೇ ಚಲ್ಲಿ “ ವಿಶ್ವಕ್ಕೆಲ್ಲ ನೀನೇ ಗುರುವಾಗಿರುವಾಗ ನಿನಗಿಂತ ಹೆಚ್ಚಿನ ಗುರುಗಳು ನನಗೆ ಉಂಟೇ ? ” ಎಂದು ನುಡಿದು ತನ್ನಲ್ಲಿಯ ಸಾಮರ್ಥ್ಯದಿಂದ ಕವಿತೆಗಳನ್ನು ರಚಿಸಿ ಹಾಡತೊಡಗಲು ಮಹಾದೇವನು ಗುರುರೂಪವನ್ನು ತಾಳಿಬಂದು ಶಿಷ್ಯೋತ್ತಮನಿಗೆ ವಿಭೂತಿಯನ್ನಿತ್ತು ತಲೆಯ ಮೇಲೆ ವರದ ಹಸ್ತವನ್ನಿರಿಸಿ ದೀಕ್ಷೆಯನ್ನಿತ್ತು ಅಂತರ್ಧಾನನಾದನು. ಅಲ್ಲಿಂದಲೇ ಅವನು ಎಲ್ಲ ಕಡೆಗೂ ಅಲೆದಾಡತೊಡಗಿದನು. ( ಆ ರೀತಿ ಅಲೆಯುವಾಗ ತಿರುಮಣ್ಣೂರಿಗೆ ಹೋಗಿ ಅಲ್ಲಿ ಅಃಪೂತಿ ಎಂಬವನಿಗೆ ಗುರುವಾಗಿ ಅವನನ್ನು ನಂದಿಯ ಮುಖಾಂತರ ಕೈಲಾಸಕ್ಕೆ ಕಳುಹಿಸಿದ್ದು ಹಿಂದೆಯೇ ಹೇಳಲಾಗಿದೆ. ಆದುದರಿಂದ ಇಲ್ಲಿ

ಆ ವಿಷಯವು ಅನವಶ್ಯಕವೆಂದು ಬಿಡಲಾಗಿದೆ. )

ಆ ರೀತಿಯಾಗಿ ಅಃಪೂತಿಯು ನಂದಿಯೊಡನೆ ಶಿವನ ಸನ್ನಿಧಿಗೆ ಹೋಗಲು ವಾಗೀಶನಿಗೆ ತನ್ನ ಶಿಷ್ಯನ ಉತ್ಕರ್ಷೆಯನ್ನು ಕಂಡು ಸಂತೋಷವೂ, ಓರ್ವ ಉತ್ತಮ ಶಿಷ್ಯನು ಇಲ್ಲವಾದನೆಂಬ ವ್ಯಾಕುಲವೂ ಏಕ ಕಾಲಕ್ಕೆ ಉಂಟಾಗಿ ತಿರುವರಿಗೆಯ ಅಧಿಪತಿಯಾದ ಮಹಾದೇವನೆಡೆಗೆ ಬಂದು ಶಾಸ್ತ್ರೋಕ್ತವಾಗಿ ಪೂಜಿಸಿ ತನ್ನಲ್ಲಿಯ ಪ್ರತಿಭೆಯಿಂದ ರಚಿಸಿದ ಕವಿತೆಯನ್ನು ಲಿಂಗಮೂರ್ತಿಯ ಮನತಣಿಯುವಂತೆ ಅತಿಭಕ್ತಿಯಿಂದ ಸ್ತುತಿಸಲು ಶಂಕರನಿಗೆ ಸಂತೋಷವಾಯಿತು. ಆ ಲಿಂಗುವಿನ ಮುಖ ದಿಂದ “ ಬಾ ” ಎಂಬ ಧ್ವನಿಯಾಯಿತು. ಆಗ ವಾಗೀಶನು “ಹರಹರಾ ! ಶರಣಾರ್ಥಿ ” ಎಂದು ಆ ಲಿಂಗಮುಖದಲ್ಲಿ ಬೆರೆತುಬಿಟ್ಟನು. ಭಕ್ತಕಿಂಕರ ನಾದ ಶಂಕರನು ಪ್ರಮಥರಿಗೆ ವಾಗೀಶನ ಪರಿಚಯುವನ್ನು ಮಾಡಿಕೊಟ್ಟು ಅವನಿಗೆ ಸಾಯುಜ್ಯಪದವಿಯನ್ನು ದಯಪಾಲಿಸಿದನು

ಕಲುಷ ರೂಪಿನ ಜೈನ ಕುಲಪಂಕ ಮಂದಾಟ ।
ಮಲಹರನ ಚರಣವಿಡಿದ ವಾಗೀಶ ನೀ ।
ನೆಲಿಸು ವದನಾಂಬುಜ ದೊಳೆನ್ನ ॥

—ಶ್ರೀ ನಿಜಗುಣ ಶಿವಯೋಗಿಗಳು.

# ೪೦. ಕುಲಶ್ಚಿಯರ್ನು

ಜೈನರ ಪ್ರಾಬಲ್ಯವೆಂಬ ಕಲಂಕದ ಹೊರತಾಗಿ ಪಾಂಡ್ಯರಾಜ್ಯವು ಸುಖಸಂಪತ್ತುಗಳ ನೆಲೆವೀಡಾಗಿತ್ತು. ಆದರೆ ಅಲ್ಲಿ ಶಿವಾಲಯ ಮಾತ್ರ ಅಪರೂಪವಾಗಿದ್ದವು. ಎಲ್ಲಿ ನೋಡಿದಲ್ಲಿ ಜೈನರೇ ಕಂಡು ಬರುತ್ತಿದ್ದರು. ಶೈವರು ಮಾತ್ರ ಎಲ್ಲಿಯೋ ಒಬ್ಬರು ಸಿಕ್ಕುತ್ತಿದ್ದರು. ಅಲ್ಲದೆ ಅವರು ತಮ್ಮ ಅಧಿದೇವನಾದ ಶಿವನನ್ನು ಆರಾಧಿಸಲು ಕೂಡ ಅಂಜಬೇಕಾಗುತ್ತಿತ್ತು. ಅಷ್ಟೊಂದು ಜೈನರ ಪ್ರಾಬಲ್ಯವು ಬೆಳೆದಿದ್ದಿತು.

ಆ ರಾಜ್ಯದ ರಾಜಧಾನಿಯಾದ ಮಧುರೆಯಲ್ಲಿ ಕುಲಶ್ಚಿಯರ್ನೆಂಬ ಶಿವಭಕ್ತನಿದ್ದನು. ಸದಸದ್ವಿವೇಕಿಯೂ, ವ್ಯವಹಾರ ಚತುರನೂ, ಶಂಕರ ನಲ್ಲಿ ಅಚಲವಾದ ಶ್ರದ್ಧೆಯುಳ್ಳವನೂ ಆದ ಇವನು ಅಲ್ಲಿಯ ಜೈನ ಧೊರೆ ಯಾದ ಕೂನಪಾಂಡ್ಯನ ಸಚಿವನಾಗಿದ್ದನು. ಆದರೆ ನಿಷ್ಕಾರಣವಾಗಿ ಶೈವ ರನ್ನು ಪೀಡಿಸುವ ಜೈನರ ನಡವಳಿಕೆಯು ಅವನಿಗೆ ಹೇಸಿಕೆಯನ್ನುಂಟು ಮಾಡಿತ್ತು. ಅವನು ಆಗಾಗ ಶಂಕರನನ್ನು ಧ್ಯಾನಿಸಿ ಮನದಲ್ಲಿ— “ದೇವಾ ! ಈ ಜೈನರು ಅಹಿಂಸೆಯೆಂಬುದನ್ನು ಕೇವಲ ನಾಲಿಗೆಯ ಮೇಲೆ ಇರಿಸಿ ಕೊಂಡಿದ್ದಾರೆಯೇ ವಿನಹ ಕೃತಿಯ ರೂಪದಲ್ಲಿ ತರಲೊಲ್ಲರಲ್ಲ! ಕಟುಕರ ಕೈಯಿಂದ ಶೈವರನ್ನು ರಕ್ಷಿಸು ” ಎಂದು ಬೇಡಿಕೊಳ್ಳುತ್ತಿದ್ದನು.

ಇವನ ಮನದೊಳಗಿನ ಆಶೆಯು ಈಡೇರಲೆಂದೇ ವಿಕ್ರಮ ಚೋಳನ ಮಗಳಾದ ಮಂಗರಸಿಯು ಪಾಂಡ್ಯರಾಯನ ಪತ್ನಿಯಾದಳು. ಆಕೆಯು ಕೂಡ ಶೈವಳಿದ್ದು ಮಹಾ ಶಿವಭಕ್ತೆಯಾಗಿದ್ದಳು. ಹೀಗಾಗಿ ಈರ್ವರೂ ಶೈವಮತದ ಉತ್ಕರ್ಷೆಯನ್ನು ನಿರೀಕ್ಷಿಸತೊಡಗಿದರು. ಕುಲಶ್ಚಿಯರ್ನನ್ನು ಅನುದಿನವೂ ಅನ್ಯರಿಗೆ ಗೋಚರವಾಗದಂತೆ ಅನುರಾಗಯುಕ್ತವಾದ ಭಕ್ತಿ ಯಿಂದ ತ್ರಿಕಾಲದಲ್ಲಿಯೂ ಶಿವನನ್ನು ಆರಾಧಿಸುತ್ತಿದುದರಿಂದಲೂ, ಹಾಗೂ ಆತನಲ್ಲಿ ಉಗ್ರ ಗಣಾಚಾರವು ಪೂರ್ಣವಾಗಿ ನೆಲೆಸಿದ್ದುದರಿಂದಲೂ ಮುಂದೆ ಜರುಗುವಂಥ ಅನೇಕ ಸಂಗತಿಗಳು ಹೊಳೆಯತೊಡಗಿದವು.

ಶಿವಪ್ರೇರಣೆಯಿಂದ ಅರಿತುಕೊಂಡ ಭವಿಷ್ಯಕಾಲದ ಅನೇಕ ಸಂಗತಿ ಗಳನ್ನು ತನ್ನ ವಿಶ್ವಾಸಪಾತ್ರಳಾದ ಅರಸಿಗೆ ತಿಳಿಸಿ ಹನ್ನೆರಡು ಸಾವಿರ ಶೂಲ ಗಳನ್ನು ಗೌಪ್ಯವಾಗಿ ತಯಾರಿಸಿ ಬೈಗೆ ಎಂಬ ಹೊಳೆಯ ಮಳಲಲ್ಲಿ ಮುಚ್ಚಿಟ್ಟನು. ಈ ಸಂಗತಿಯನ್ನೂ ರಾಣಿಗೆ ತಿಳಿಸಲು ಅವಳಿಗೆ ಸಂತೋಷವಾಯಿತು. (ಮುಂದೆ ಅರಸನು ಶೈವಮತವನ್ನು ಸ್ವೀಕರಿಸುವನೆಂತಲೂ, ಆಗ ಹನ್ನೆರಡು ಸಾವಿರ ಜೈನರನ್ನು ಶೂಲಕ್ಕೇರಿಸುವನೆಂತಲೂ, ಕುಲಶ್ಚರ್ಯ ನಿಗೆ ಮೊದಲೆ ತಿಳಿದು ಬಂದಿತ್ತು. ಈ ವಿಷಯವನ್ನು ಪಿಳ್ಳೆ ನಾಯನರ ಚರಿತ್ರೆಯಲ್ಲಿ ಹೇಳಲಾಗಿದೆ.) ಆದರೂ ತಾವು ಕೈಕೊಂಡಿರುವ ಕಾರ್ಯ ಕ್ರಮಗಳನ್ನು ಮಾತ್ರ ಅವರೀರ್ವರೂ ಅತ್ಯಂತ ಗುಪ್ತವಾಗಿರಿಸಿದ್ದರು.

ಮುಂದೆ ಕುಮಾರನು (ಪಿಳ್ಳೆ ನಾಯನಾರನು) ಮಧುರೆಗೆ ಬಂದ ನಂತರ ಕೂನ ಪಾಂಡ್ಯನಿಗೆ ವಿಪರೀತ ಜ್ವರ ಬಾಧೆಯುಂಟಾಯಿತು. ಯಾವ ಜೈನರಿಂದಲೂ ನಿವಾರಿಸುವದಾಗಲಿಲ್ಲ. ಆಗ ಅರಸನು ತನ್ನ ಪತ್ನಿಯ ಆದೇಶದಂತೆ ಕುಮಾರನನ್ನೇ ಕರೆಯಿಸಲು ಕುಮಾರನು ಅಲ್ಲಿಗೆ ಬಂದು ಅರ್ಧನೋವನ್ನು ನಾನು ನಿಲ್ಲಿಸುತ್ತೇನೆ, ಉಳಿದರ್ಧವನ್ನು ಜೈನರು ನಿವಾರಿಸಲಿ ಎಂದು ಅರ್ಧ ನೋವನ್ನು ಶಿವನ ಅನುಗ್ರಹದಿಂದ ಹೋಗಲಾಡಿಸಿದನು. ಆದರೆ ಉಳಿದರ್ಧ ನೋವನ್ನು ಕಳೆಯಲು ಜೈನರಿಗೆ ಸಾಧ್ಯವಾಗದೆ ಹೋಯಿತು. ಆಗ ಕುಮಾರನು ಆ ಅರ್ಧ ನೋವನ್ನೂ ಹೋಗಲಾಡಿಸಿ ಆ ಅರಸನಿಗಿದ್ದ ಕೂನು ರೋಗವನ್ನೂ ಹೋಗಲಾಡಿಸಿ ಶೈವನನ್ನಾಗಿಮಾಡಿ ಶಿವ ದೀಕ್ಷೆಯನ್ನು ಕೊಟ್ಟನು.

ಜ್ವರವನ್ನು ಸರಿಪಡಿಸಿದಾಕ್ಷಣಕ್ಕೆ ಅವನು ನಿಪುಣ ವೈದ್ಯನಾಗುತ್ತಾನೆಯೇ, ಇಲ್ಲ. ಜಿನಮಂತ್ರ-ಹಾಗು ಶಿವ ಮಂತ್ರಗಳನ್ನೂ ಬರೆದ ಓಲೆ ಗಳನ್ನು ಬೆಂಕಿಯಲ್ಲಿ ಹಾಕೋಣ ಸುಡದೆಯೆ ಯಾವುದು ಹಾಗೆಯೇ ಉಳಿಯುತ್ತದೆಯೋ ಅದು ಶ್ರೇಷ್ಠ ಧರ್ಮ ಎಂದರು. 'ಹಾಗೆಯೇ ಆಗಲೆಂದು ಕುಮಾರನು ಒಪ್ಪಿದಾಗ ಅದೇ ರೀತಿ ಮಾಡಲಾಯಿತು. ಜಿನಮಂತ್ರದ ಓಲೆಯು ಸುಟ್ಟುಹೋಯಿತು. ಆಗ ಅವರು ಕೊನೆಯ ಉಭಯ ಪಕ್ಷದ ಮಂತ್ರಾಕ್ಷರಗಳಿರುವ ಓಲೆಯನ್ನು ಹೊಳೆಯಲ್ಲಿ ತೇಲಿಬಿಡಬೇಕು. ಯಾವ ಮಂತ್ರದ ಓಲೆಯು ಪ್ರವಾಹದ ಎದುರು ಹೋಗುವದೋ ಅದುವೇ ಶ್ರೇಷ್ಠ

ಧರ್ಮ ಎಂದರು. ಆಗ ಅರಸನು ಇದರಲ್ಲಿ ಸೋತವರನ್ನು ಶೂಲಕ್ಕೇರಿಸು ವೆನೆಂದು ಹೇಳಲು ಜೈನರು ಒಪ್ಪಿಕೊಂಡರು. ಅರಸನು ಅದೇ ರೀತಿಯ ವ್ಯವಸ್ಥೆ ಮಾಡಿ ಹೊಳೆಯಲ್ಲಿ ತೇಲಿಬಿಡಲು ಜೈನ ಮಂತ್ರದ ಓಲೆಯು ಪ್ರವಾಹದಗುಂಟ ಹರಿದು ಹೋಯಿತು. ಶಿವ ಮಂತ್ರದ ಓಲೆಯು ಪ್ರವಾ ಹದ ಎದುರು ಮೂರು ಗಾವುದ ದೂರ ಹೋಯಿತು.

ಹನ್ನೆರಡು ಸಾವಿರ ಜೈನರನ್ನು ಒಮ್ಮೆಲೆ ಶೂಲಕ್ಕೇರಿಸಲು ಅಷ್ಟೊಂದು ಶೂಲದ ಕಂಬಗಳನ್ನು ಯಾವಾಗ ನಿರ್ಮಿಸಬೇಕೆಂದು ಚಿಂತಾಕ್ರಾಂತನಾಗಿ ರಲು ಸಿವಭಕ್ತನಾದ ಕುಲಶ್ಚಾರ್ಯನು ತಾನು ಮಳಲಲ್ಲಿ ಮುಚ್ಚಿಟ್ಟ ಶೂಲದ ಕಂಭಗಳ ಬಗ್ಗೆ ಅರಸನಿಗೆ ತಿಳಿಸಿ ಅವನ ಚಿಂತೆಯನ್ನು ಹೋಗ ಲಾಡಿಸಲು ಅರಸನು ಸಂತಸಬಟ್ಟು ಆ ಜೈನರನ್ನು . ಶೂಲಕ್ಕೇರಿಸಿದನು. ಗಣಾಚಾರವು ಕೃತಿಯಲ್ಲಿಳಿಯಿತೆಂದು ಕುಲಶ್ಚರ್ಯನು ಆನಂದದಿಂದ ಮೈಮರೆತನು. ಆಗ ಕೈಲಾಸಪತಿಯು ಆ ಶಿವಭಕ್ತನಿಗೆ ಕಾಣಿಸಿಕೊಂಡು ದಂಪತಿಗಳಾದ ಸುಂದರಪಾಂಡ್ಯ–ಮಂಗರಸಿ ಹಾಗು ಜ್ಞಾನ ಸಂಬಂಧರು ನೋಡುತ್ತಿರುವಂತೆ ಕುಲಶ್ಚರ್ಯನನ್ನು ಕೈಲಾಸಕ್ಕೆ ಕರೆದೊಯ್ದು ಗಣ ಪದವಿಯನ್ನು ದಯಪಾಲಿಸಿದನು.

ಶಿವನಿಂದೆಗೈವ ಬಹು ಸವಣರಸು ದೆಗೆವ ಶೂ ।
ಲವನಿಂದು ಮೋದ ಸವಿದಿಹ ಕುಲಶ್ಚರ್ಯ ।
ನವಿರತಂ ಬುದ್ಧಿ ಕೊಡಲೆನಗೆ ॥

—ಶ್ರೀ ನಿಜಗುಣ ಶಿವಯೋಗಿಗಳು.

# ೪೧. ಅವಘುಡೆಯ ಪೆರುಮಾಳೆಯರು

ವಿಶ್ವಪಾಲ, ವಿಶ್ವಂಭರ, ವಿಶ್ವಮೂರ್ತಿಯೆಂದು ಯೋಗಿ ಜನಪ್ರಿಯ ನೆಂದು ಸದ್ಭಕ್ತರು ಪ್ರೀತಿಸುವ ಶಂಕರನ ನಿವಾಸವಾಗಿ ಸರ್ವತೋಪರಿ ಯಾಗಿ ರಾರಾಜಿಸುವ ಚೋಳಪ್ರದೇಶದಲ್ಲಿ ತಿರುನಾಗವೆಂಬ ಪಟ್ಟಣವು ಎಲ್ಲ ಬಗೆಯ ಐಸಿರಿಯಿಂದ ಶೋಭಿಸುತ್ತಿತ್ತು. ಅಲ್ಲಿ ಶಿವಭಕ್ತರು ಎಲ್ಲ ಬಗೆಯ ವ್ಯವಸಾಯವನ್ನವಲಂಬಿಸಿದ ಪ್ರಜರು, ತಂತಮ್ಮ ಕರ್ತವ್ಯವನ್ನು ಚನ್ನಾಗಿ ಅರಿತುಕೊಂಡ ಜನರು ಇದ್ದರು. ಅಲ್ಲಿಯ ಶಿವಾಲಯಗಳು ಆಸ್ತಿಕರ ಮಾನವನ್ನು ಸೆಳೆಯುತ್ತಿದ್ದವು. ಅಲ್ಲಿಯ ಒಡೆಯನಾದ ಅವಘುಡೆಯ ಪೆರುಮಾಳನೆಂಬವನು ಪ್ರಜಾಪಾಲಕನೂ, ಶಿವೋಪಾಸನೆಯಲ್ಲಿ ದಕ್ಷನೂ ದಾನಶೂರನೂ ಆಗಿ ಮೆರೆಯುತ್ತಿದ್ದನು. ಇವನಿಗೆ ಧನಪಾಲನೆಂಬ ವೈಶ್ಯ ಮಿತ್ರನಿದ್ದು ಅವನು ಕೂಡ ಶಿವಭಕ್ತಿ ದುರಂಧರನಾಗಿದ್ದನು.

ಕಾಲಾನುಕ್ರಮದಿಂದ ಆ ಸೀಮೆಯೊಳಗೆ ಮಳೆಯು ಬಾರದೆ ಬರವು ತಲೆದೋರಲು ಜನರು ಅನ್ನಾನ್ನಗತಿಕರಾಗತೊಡಗಿದರು. ಆಗ ಧನಪಾ ಲನು ಶೈವಸಮಾಜದವರನ್ನೆಲ್ಲ ಪ್ರೀತಿಯಿಂದ ಕರೆಯಿಸಿಕೊಂಡು ಅವರಿಗೆ ಆಶ್ರಯವಿತ್ತನು. ಮುಂದೆ ಈಶಕೃಪೆಯಿಂದ ಮಳೆಯಾಗಲು ಅವರೆಲ್ಲ ಹೊರಟು ಹೋದರು. ದಾನಿಯಾದ ಅವಘುಡೆಯ ಪೆರುಮಾಳನು ಬರ ಗಾಲದಲ್ಲಿ ತಾನು ವಿಶೇಷವಾಗಿ ಅನ್ನದಾನವನ್ನು ಮಾಡಲಿಲ್ಲವಲ್ಲ! ಎಂದು ಹಳಹಳಿಬಟ್ಟು ತನ್ನ ಸ್ನೇಹಿತನ ಔದಾರ್ಯಕ್ಕೆ, ದಾನಶೂರತ್ವಕ್ಕೆ ಮೆಚ್ಚಿ ಅಚ್ಚರಿಪಟ್ಟನು. ಮುಂದೆ ತನ್ನಲ್ಲಿಯ ತಪ್ಪಿಗಾಗಿ ಪಶ್ಚಾತ್ತಾಪಪಟ್ಟು ಶಿವ ಶಿವಾ ನನಗೆ ಧೊರೆತನವೇ ಬೇಡವೆಂದು ನಿಶ್ಚಯಿಸಿ ಗೆಳೆಯನಾದ ಧನ ಪಾಲನ ಮನೆಗೆ ಹೋದನು. ಆಗ ಆ ವೈಶ್ಯನು ಅರಸನನ್ನು ಆದರದಿಂದ ಬರಮಾಡಿಕೊಂಡು ಸತ್ಕರಿಸಿ ಬಂದ ಕಾರಣವೇನೆಂದು ಕೇಳಲು ಅರಸನು, "ಮಿತ್ರನೇ ನಾನು ರಾಜ್ಯವನ್ನೆಲ್ಲ ನಿನಗೆ ಕೊಡುತ್ತೇನೆ. ಆದರೆ ನೀನು ಬರಗಾಲದಲ್ಲಿ ಅನ್ನದಾನಮಾಡಿ ಸಂಚಯಿಸಿದ ಪುಣ್ಯವನ್ನು ನನಗೆ ಧಾರೆ

ಎರೆ" ಎನ್ನಲು ಧನಪಾಲನು ಹಿಂದೆ ಮುಂದೆ ನೋಡದೆ ಹಾಗೆಯೆ ಮಾಡಲು
ಆ ಕ್ಷಣವೇ ಅವಘಡೆಯ ಪೆರುಮಾಳನಿಗೆ ಅನಂತ ರೂಪಿಯಾದ ಗಿರಿಜಾ
ರಮಣನು ತನ್ನ ನಿಜರೂಪದಿಂದ ಕಾಣಿಸಿಕೊಳ್ಳಲು ಅವನೀಶನು ಅವನ
ಅಡಿಗಳ ಮೇಲೆ ಬಿದ್ದುಕೊಂಡು ನಾನಾ ವಿಧವಾಗಿ ಸ್ತುತಿಸತೊಡಗಿದನು.
ಆಗ ಶಂಕರನು ಆ ಭಕ್ತನನ್ನು ಹಿಡಿದೆತ್ತಿ ಅವನ ವ್ಯೆದಡವಿ ಪುಷ್ಪಕ ವಿಮಾ
ನವನ್ನು ತರಿಸಿ ಅದರಲ್ಲಿ ಕುಳ್ಳಿರಿಸಿಕೊಂಡು ಕೈಲಾಸಕ್ಕೆ ಕರೆದೊಯ್ದು ಅವ
ನಿಗೆ ಅಮರವಾದ ಗಣಪದವಿಯನ್ನು ಅನುಗ್ರಹಿಸಿದನು.

ಶರಣರ್ಗೆ ತನಗುಳ್ಳ ಧರಣಿಯೊಪಿತನಿತ್ತು ।
ಪರಮ ಪದವಾಳು ವಡವಕ್ಷಿಯ ಪೆರುಮಾಳೆ ।
ವಿರತಿಯನು ಬೇಡುವೆನು ನಿನ್ನ॥

—ಶ್ರೀ ನಿಜಗುಣ ಶಿವಯೋಗಿಗಳು.

---

# ೪೨. ನೇಳ್ಕುತ್ತರು

ಆಸ್ತಿಕರ ತಾಣವಾಗಿಯೂ, ಭೂಮಿತಾಯಿಗೆ ತಿಲಕ ಸಮಾನವಾಗಿಯೂ ಒಪ್ಪುವಂಥ ಚೋಳ ಮಂಡಳದಲ್ಲಿ ಧನ-ಧಾನ್ಯ ಸಂಪತ್ತಿನಿಂದಲೂ ಶಿವಭಕ್ತರ ಸಮೂಹದಿಂದಲೂ ಖ್ಯಾತಿ ಹೊಂದಿದ ಮಣಿಮಂದಪತ್ತೂರು ಎಂಬ ಪಟ್ಟಣವು ಅತಿ ಪವಿತ್ರವಾದ ಕಾವೇರಿ ನದಿಯ ತೀರದಲ್ಲಿದ್ದಿತು. ಶೈವರಿಂದ ತುಂಬಿ ತುಳುಕುವ ಆ ನಗರದಲ್ಲಿ ಶಿವಭಕ್ತಿಪರಾಯಣನಾದ ನೇಳ್ಕುತ್ತನೆಂಬೋರ್ವ ಶೈವನು ವಾಸಿಸುತ್ತಿದ್ದನು.

ಸದಾ ಸತ್ಯ ಸನ್ಮಾರ್ಗವನ್ನು ಆಚರಿಸಿ ಅದನ್ನು ಭಕ್ತರ ಸಮೂಹಕ್ಕೆ ತೋರಿಸುತ್ತಿರುವಂಥ ಬ್ರಹ್ಮನಿಷ್ಠರಾದ ಶೈವಾಚಾರ್ಯರಿಂದ ಅತ್ಯಂತ ಗುರುಭಕ್ತನಾದ, ಗುರುವನ್ನೇ ಶಿವನೆಂದು ನಂಬಿದ, ಗುರುವಿಗೂ ಶಿವನಿಗೂ ಅಭಿನ್ನಭಾವವನ್ನು ತಳೆದು ಗುರುವೇ ಸಕಲ ಸೌಭಾಗ್ಯ ಸರ್ವಸ್ವವೆಂದು ಭಾವಿಸಿ, ಗುರುವೇ ಸದ್ಗತಿಗೆ ಕಾರಣನೆಂದು ಗುರುವಿನಲ್ಲಿಯೇ ಕಲ್ಯಾಣೋತ್ಪತ್ತಿಯಿದೆಯೆಂದು ಭಾವಿಸಿದ ನೇಳ್ಕುತ್ತನು ಸದುಪದೇಶವನ್ನು ಪಡೆದು, ಗುರುವಿನಾಜ್ಞೆಯನ್ನು ಮೀರದೆ, ಗುರುವಿನ ಸೇವೆ, ಗುರುವಿನ ಶುಶ್ರೂಷೆಗಳೇ ಪಾದೋದಕ ಪ್ರಸಾದಗಳೆಂದು ಭಾವಿಸಿಕೊಂಡಿದ್ದನು.

ಈತನು ಗುರುವಿನ ಸಮಾನಾಸ್ನದಲ್ಲಾಗಲಿ, ನಮುಪಙ್ತಿಯಲ್ಲಾಗಲೀ ಎಂದೂ ಕುಳಿತುಕೊಳ್ಳುತ್ತಿದ್ದಿಲ್ಲ. ಅಹಂಕಾರ—ಮಮಕಾರಗಳಂತೂ ಇವನಿಂದ ಸಾವಿರಾರು ಹರಿದಾರಿಗಳ ದೂರದಲ್ಲಿದ್ದವು. ಅಲ್ಲದೆ ಈತನು ಸತಿ ಸುತರ ಪರಿವೆಯನ್ನು ಕೂಡ ತೊರೆದು ತ್ರಿಕಾಲದಲ್ಲಿಯೂ ಗುರುವಿನ ಬಳಿಯಿದ್ದುಕೊಂಡು ಗುರುವಿನ ಪಾದಗಳಲ್ಲಿ ಭಕ್ತಿಯುಳ್ಳವನಾಗಿ ಗುರುವಿನ ಮಂದಿರದ ಬಾಗಿಲವನ್ನು ಕಾಯುತ್ತಿದ್ದನು.

ಇಂಥ ಭಕ್ತನ ನಿಷ್ಕಪಟ ಬುದ್ಧಿಗೆ ಮೆಚ್ಚಿದ ಗುರುಗಳು ಒಂದು ದಿವಸ ಅವನನ್ನು ಕರೆದು– "ಇಂದು ನಾವು ನಿನಗೊಂದು ಮಾತನ್ನು ಹೇಳುತ್ತೇವೆ.

ಅದನ್ನು ನೀನು ಮೀರದೆ ನಡೆಸಿಕೊಡಬೇಕು ಮಗುವೇ! ನಿನಗೆ ನಮ್ಮನ್ನು ಬಿಟ್ಟಿರಲು ಮನಸ್ಸಾಗದಿದ್ದರೆ ನಮ್ಮ ಆವುಗೆಗಳನ್ನು ತೆಗೆದುಕೊಂಡು ಮನೆಗೆ ಹೋಗಿ ಶಿವಭಕ್ತನಾಗಿ ಇರೆಂದು " ಹೇಳಿ ಆವುಗೆಗಳನ್ನು ಕೊಟ್ಟರು. ಆಗ ಮೊಳ್ಳೃತ್ತನು ಮಹಾಪ್ರಸಾದವೆಂದು ಹೇಳಿ ಆವುಗೆಗಳನ್ನು ತಲೆಯ ಮೇಲಿರಿಸಿಕೊಂಡು ಮನೆಗೆ ಹೋದನು.

ಅಂದಿನಿಂದ ಅವನು ಆವುಗೆಗಳನ್ನೇ ತನ್ನ ಗುರುವೆಂದು ಭಾವಿಸಿ ಪೂಜಿಸುತ್ತ ತನ್ನ ಕಾಯಕವನ್ನು ಪ್ರಾರಂಭಿಸಿದನು. ಈ ರೀತಿಯಾಗಿ ಅವನು ಶಿವಾನಂದ ಪಡೆಯುತ್ತ ಎಷ್ಟೋ ವರ್ಷಗಳನ್ನು ಕಳೆದನು. ಹೀಗಿರಲೊಂದು ದಿನ ಮೊಳ್ಳೃತ್ತನು ಬೆಳಗಿನ ಝಾವದಲ್ಲೆದ್ದು ತನ್ನ ಗುರುವನ್ನು ಸ್ಮರಿಸುತ್ತ ಕಾವೇರಿ ನದಿಗೆ ಬಂದು ಸ್ನಾನವನ್ನು ತೀರಿಸಿಕೊಂಡು ಭಸ್ಮ ರುದ್ರಾಕ್ಷಗಳನ್ನು ತಳೆದು ಗುರುವಿನ ಧ್ಯಾನವನ್ನು ಮಾಡಿ ತನ್ನ ತಲೆಯ ಮೇಲಿರಿಸಿಕೊಂಡ ಗುರುವಿನ ಅಪೂರ್ವ ಆವುಗೆಗಳನ್ನು ಉಕ್ಕೇರಿದ ಭಕ್ತಿಯಿಂದ ಪೂಜಿಸಿ ಬಾರಿಬಾರಿಗೂ ಗುರುವನ್ನು ಪ್ರಾರ್ಥಿಸತೊಡಗಿದನು.

ಆಗ ಕೃಪಾಮೂರ್ತಿಯೂ, ಎಲ್ಲವನ್ನು ಬಲ್ಲವನು ಆದ ಮಹಾದೇವನಿಗೆ ಅತ್ಯಂತ ಆನಂದವುಂಟಾಗಿ ಪ್ರತ್ಯಕ್ಷನಾಗಲು ಮೊಳ್ಳುತ್ತನು ತಲೆಯ ಮೇಲೆ ಗುರುವಿನ ಆವುಗೆಗಳಿರುವದರಿಂದ ಸಾಕ್ಷಾತ್ ಸಾಂಬನಿಗೆ ತಲೆಬಾಗಿ ನಮಸ್ಕರಿಸದೆ ಹಾಗೆಯೆ ಆನಂದಭರಿತನಾಗಿ ನೋಡುತ್ತ ನಿಂತುಕೊಂಡನು ಈ ಪರಿಯಾಗಿ ನಿಂತುಕೊಂಡಿರುವ ಭಕ್ತನನ್ನು ಕಂಡು ಶಂಕರನು- " ಭಕ್ತನೇ! ಹರಿಬ್ರಹ್ಮರಿಗೂ ದುರ್ಲಭನಾದ ನಾನು ನಿನಗೆ ಪ್ರತ್ಯಕ್ಷನಾಗಿರುವಾಗ ನೀನು ನನಗೆ ತಲೆಬಾಗಿಸಿ ನಮಸ್ಕರಿಸದೆ ನಿಂತುಕೊಳ್ಳಬಹುದೇ?" ಎಂದನು. ಆಗ ಮೊಳ್ಳುತ್ತನು ಅತ್ಯಂತ ವಿನಯದಿಂದ-- " ಶಂಕರನೇ! ದಯಾಮಯನೇ! ಘನಲಿಂಗವೆಂದು ಸಾರುವ ಆಗಮುಕ್ತಿಯನ್ನನುಸರಿಸಿ ನಿನ್ನ ಸ್ವರೂಪವನ್ನೇ ನಾನು ಅನುದಿನವೂ ಪೂಜಿಸುತ್ತಿರುವೆನು. ಅದು ನಿನ್ನ ಪೂಜೆಯಲ್ಲವೇ? ಆ ಪಾದಪ್ರದಕ್ಷಣೆ, ನಮಸ್ಕಾರಗಳು ನಿನಗೆ ಅರ್ಪಿತವಾಗುವದಿಲ್ಲವೇ? ನನ್ನ ತಲೆಯ ಮೇಲಿರುವ ಆವುಗೆಗಳೇ ನಿನ್ನ ಅಡಿದಾವರೆಗಳಲ್ಲವೇ? ಎಂದು ನುಡಿದನು.

ಅವನ ಮಾತುಗಳನ್ನು ಕೇಳಿ ಚಂದ್ರಶೇಖರನಿಗೆ ಅತ್ಯಂತ ಸಂತೋಷವಾಗಿ ಅವನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ಅನುಗ್ರಹಿಸಿದನು.

ಮನಸಿಜಾರಿಯ ಪಾದವನಜಮಂ ಪೊತ್ತು ಪಾ ।
ವನತೆಯಿಂದರಸು ತನ ಪಾಂತ ವೇಳ್ಕುತ್ತ ।
ರೆನಗೆ ಸಂಪದ ದೊಳಿರಿಸುವದು ॥

—ಶ್ರೀ ನಿಜಗುಣ ಶಿವಯೋಗಿಗಳು.

# ೪೩-೪೪. ಸೌಂದರಪಾಂಡ್ಯ ಮತ್ತು ಮಂಗಾಯಕ್ಕರಸಿಯರು

ಜೈನ ಧರ್ಮಾವಲಂಬಿಯಾದ ಕೂನಪಾಂಡ್ಯನು ಪಿಳ್ಳೈನಾಯನಾರು ವಿನ ಅನುಗ್ರಹದಿಂದ ಶೈವನಾಗಿ ದೀಕ್ಷೆಪಡೆದು ಬೆನ್ನಿನಕೂನನ್ನು ಕಳೆದು ಕೊಂಡು ಸುಂದರ ಪಾಂಡ್ಯನಾದುದೂ ಮುಂದೆ ಹನ್ನೆರಡು ಸಾವಿರ ಜೈನ ರನ್ನು ಕುಲಶ್ಚಯನನು ಮೊದಲೇ ತಯಾರಿಸಿದ ಶೂಲಕಂಬಕ್ಕೆ ಏರಿಸಿ ದುದೂ ಈ ಹಿಂದೆಯೇ ವಿವರಿಸಿದೆ. ಅಲ್ಲದೆ ಈ ಅರಸನು ಮೊದಲೊಮ್ಮೆ ಪಗಲ್ಚೋಳನ ರಾಹುತನಾದ ಮೊನೆಯಾಂಡನಿಂದ ಸೋತು ಬಂದುದೂ ಈ ಹಿಂದೆ ಹೇಳಿದೆ. ಚೋಳಕುಲದೀಪಕರು ಶಿವಾಧೀನರಾದ ಬಳಿಕ ವಿಕ್ರಮಚೋಳನ ಮಗಳಾದ (ಪಗಲ್ಚೋಳನ ಸೋದರಿ) ಮಹಾಶಿವಭಕ್ತೆ ಮಂಗರಸಿಯನ್ನು ಈ ಪಾಂಡ್ಯರಾಜನು ಹೊತ್ತುಸಾಧಿಸಿ ಬಲವಂತದಿಂದ ಎತ್ತಿಕೊಂಡು ಬಂದು ಮದುವೆಯಾದನು. ತನ್ನ ಇಚ್ಛೆಯಿರದಿದ್ದರೂ ಮಂಗರಸಿಯು ಪಾಲಿಗೆ ಬಂದುದು ಪಂಚಾಮೃತವೆಂದು ಬಗೆದು ಅವನ ಅರಮನೆಯಲ್ಲಿರದೆ ಪ್ರತ್ಯೇಕವಾದ ಉದ್ಯಾನವನದಲ್ಲಿದ್ದುಕೊಂಡು ಗುಪ್ತ ವಾಗಿ ಶಿವಪೂಜೆಯಲ್ಲಿ ನಿರತಳಾಗಿದ್ದಳು. ( ಮುಂದೆ ಇದೇ ರಾಣಿಯ ಹೇಳಿಕೆಯಂತೆ ಅರಸನು ಶೈವನಾದುದನ್ನೂ ಹೇಳಲಾಗಿದೆ ಅದಕ್ಕಾಗಿ ಇಲ್ಲಿ ಅದು ಅಪ್ರಸ್ತುತ. )

ಕುಲಶ್ಚಯರ್ನನು ಕೈಲಾಸಕ್ಕೆ ತೆರಳಿದ ನಂತರ ದಂಪತಿಗಳೀರ್ವರೂ ನಿಷ್ಠೆಯಿಂದ ಶಿವನನ್ನು ಪೂಜಿಸತೊಡಗಿದರು. ಆಗ ಈಶ್ವರಾನುಗ್ರಹ ಹಾಗು ಕುಮಾರನ (ಪಿಳ್ಳೈನಾಯನಾರನ) ಹೇಳಿಕೆಯಂತೆ ಮಂಗಾಯಕ್ಕರಸಿಯು ಗರ್ಭಿಣಿಯಾದಳು. ಲೋಕಮಾತೆಯೇ ತನ್ನ ಉದರಲ್ಲಿ ಜನಿಸುವಳೆಂದು ಕುಮಾರನು ಹೇಳಿದ್ದುದು ಅವಳ ಲಕ್ಷದಲ್ಲಿದ್ದಿತು. ಪಾಂಡ್ಯರಾಜನೂ ಆ ಮಾತನ್ನು ಮರೆತಿರಲಿಲ್ಲ. ಒಂದು ದಿನ ಅರಸನು— " ರಾಣೀ ನಿನ್ನ ಉದ

ರದಲ್ಲಿ ಸಾಕ್ಷಾತ್ ಜಗನ್ಮಾತೆಯೇ ಹುಟ್ಟಲಿದ್ದಾಳೆ. ಅವಳಿಗೆ ತಕ್ಕ ವರನು ಯಾರು ? '' ಎಂದು ಕೇಳಿದನು.

ಆದಕ್ಕೆ ರಾಣಿಯು ನಾನು ನಾಚಿ— '' ಶರ್ವಾಣಿಗೆ ಒಪ್ಪುವ ವರನೆಂದರೆ ದೇವದೇವನಾದ ಮಹಾದೇವನಲ್ಲದೆ ಇನ್ನಾರು?" ಎಂದು ಹೇಳಲು ಅರಸನು "ನನ್ನ ಮನದಲ್ಲಿದ್ದುದನ್ನೇ ನೀನೂ ಹೇಳಿದೆ" ಎಂದು ಸಂತೋಷಬಟ್ಟನು. ಇದೇ ರೀತಿ ದಿನಗಳು ಉರುಳತೊಡಗಿದವು. ಅರಸಿಯು ಹೆಣ್ಣು ಶಿಶುವಿಗೆ ಜನ್ಮವಿತ್ತಳು. ಮಂಗಲಮಯವಾಗಿ ಪ್ರಕಾಶಿಸುವ ಆ ಶಿಶುವಿಗೆ ಮೊದಲೇ ಹಿರಿಯರಿಂದ ನಿರ್ಧರಿಸಿದಂತೆ ಶರ್ವಾಣಿಯೆಂದು ನಾಮಕರಣ ಮಾಡಿದರು. ಶಿಶುವು ಬಿದಿಗೆಯ ಚಂದ್ರನಂತೆ ಬೆಳೆಯತೊಡಗಿ, ಮದುವೆಗೆ ಯೋಗ್ಯಳಾದ ಕನ್ಯೆಯಾದಳು.

ಶಿವಸಿಷ್ಠಾಪರರೂ, ಸರಳಹೃದಯಿಗಳೂ, ನಿರ್ಮಲ ಹೃದಯಿಗಳೂ ಆದ ಆ ಅರಸು ದಂಪತಿಗಳು ಮಧುರಾಧಿಪತಿಯಾದ ಚೊಕ್ಕನಯನಾರು ಲಿಂಗದೇವನನ್ನು ವಿಧಿವತ್ತಾಗಿ ಪೂಜಿಸಿ ತಮ್ಮ ಮಗಳ ಮದುವೆಯ ಬಗೆಗೆ ನಿವೇದಿಸಿಕೊಂಡು ಬಂದು ಅವಳ ಪರಿಣಯವನ್ನು ಮಾಡಬೇಕೆಂದು ನಿಶ್ಚಯಿಸಿದರು. ಭಕ್ತರ ಭಕ್ತಿಯನ್ನು ಪರೀಕ್ಷಿಸುವಲ್ಲಿ ಕಡು ಜಾಣನೂ, ಅವರ ಅಭೀಷ್ಟೆಗಳನ್ನು ಪೂರೈಸುವಲ್ಲಿ ಅತಿಕುಶಲನೂ ಆಗಿದ್ದ ಮಹಾದೇವನು ಆ ದಂಪತಿಗಳ ಮನದಿಚ್ಛೆಯನ್ನು ಪೂರೈಸಲೋಸುಗ ತರುಣ ಜಂಗಮನ ವೇಷವನ್ನು ತಳೆದು ಅಲ್ಲಿಗೆ ಬರಲು ಆ ರಾಜದಂಪತಿಗಳು ಮದುವಣಿಗನ ಕಾಂತಿಯಿಂದೊಪ್ಪುವ ಆ ತರುಣ ಜಂಗಮ ಮೂರ್ತಿಯನ್ನು ಆದರದಿಂದ ಕರೆದು ಯೋಗ್ಯ ಆಸನದಲ್ಲಿ ಕುಳ್ಳಿರಿಸಿ ಅವನ ಪಾದಾಭಿಷೇಕ ಮಾಡಿ, ಬೆಲೆಯುಳ್ಳ ವಸ್ತ್ರಗಳನ್ನುಡಿಸಿ, ಪಾದತೀರ್ಥವನ್ನು ಸೇವಿಸಿ ಹರ್ಷಿತರಾದ ಬಳಿಕ-- '' ಮಹಾಸ್ವಾಮಿಗಳು ಇತ್ತ ಕಡೆಗೆ ದಯಪಾಲಿಸಿದ ಕಾರ್ಯವಾವುದು ? '' ಎಂದು ಕೈಮುಗಿದು ಕೇಳಿಕೊಂಡರು.

ಆಗ ವೇಷಧಾರಿಯಾದ ಪರಮಾತ್ಮನು-- '' ದಂಪತಿಗಳೇ ! ನೀವು ನನಗೆ ಕನ್ಯಾದಾನ ಮಾಡಬೇಕು. ಅದಕ್ಕಾಗಿಯೇ ನಾನು ಬಂದಿರುವೆನು'' ಎಂದು ಹೇಳಲು ಶಿವಭಕ್ತಿಯ ಪ್ರಭಾವದಿಂದ ಸೂಜ್ಞರಾದ ಆ ದಂಪತಿಗಳು ಆ ಕ್ಷಣವೇ ಲಗ್ನಕ್ಕೆ ಒಡಂಬಟ್ಟು ಸಚಿವರನ್ನು ಕರೆಯಿಸಿ ವಿವಾಹ ಮಂಟಪ

ವನ್ನು ಸಿದ್ಧಪಡಿಸಲು ಆಜ್ಞಾಪಿಸಿ, ಪಟ್ಟಣವನ್ನೆಲ್ಲ ಸಿಂಗರಿಸಲು ಪುರ ಜನರಿಗೆ ಆಜ್ಞೆಯನ್ನಿತ್ತರು.

ಇಹದಲ್ಲಿಯು ಕೈಲಾಸವೇನೋ ಎಂಬಂತೆ ವಿವಾಹ ಮಂಟಪವು ಸಿದ್ಧವಾಯಿತು. ಸುಮುಹೂರ್ತವು ಸಮೀಪಿಸಿದ್ದುದನ್ನು ಕಂಡು ಶಿವಭಕ್ತರನ್ನು ಕರೆದು ತಂದು ಮಂಗಲ ವಾದ್ಯಗಳು ಮೊಳಗುತ್ತಿರುವಾಗಲೆ ಮಂಚದ ಮೇಲೆ ವಧೂ-ವರರನ್ನು ಮುಹೂರ್ತಗೊಳಿಸಿದರು. ವೇದಘೋಷವು ನಡೆಯಿತು. ರಾಜದಂಪತಿಗಳ ಆನಂದಕ್ಕೆ ಎಣೆಯಿಲ್ಲದಂತಾಯಿತು. ಶಿವಾರ್ಪಿತವೆಂದು ಕೈಎತ್ತಿ ಧಾರೆಯೆರೆಯುತ್ತಲೆ ಅಕ್ಷತಾರೋಪಣವಾಯಿತು. ದೇವದುಂದುಭಿಗಳು ಮೊಳಗಿದವು. ದೇವತೆಗಳು ಜಯಜಯವೆಂದರು. ಕೂಡಲೇ ದೇದೀಪ್ಯಮಾನವಾದ ವಿಮಾನವೊಂದು ಕೆಳಕ್ಕಿಳಿಯಿತು. ಅದರ ಪ್ರಕಾಶವನ್ನು ನೋಡುವದಾಗದೆ ವಧೂವರರು ಹಾಗು ವರನ ಅತ್ತೆಮಾವಂದಿರ ಹೊರ್ತಾಗಿ ಎಲ್ಲರೂ ಕಣ್ಣುಮುಚ್ಚಿಕೊಂಡರು. ಅವರೆಲ್ಲರೂ ಕಣ್ಣು ತೆರೆದಾಗ, ವಧೂ—ವರರು ಹಾಗು ಅರಸ—ಅರಸಿಯರು ಅಲ್ಲಿರಲಿಲ್ಲ. ಈ ರೀತಿಯಾಗಿ ಆ ರಾಜದಂಪತಿಗಳು ಈಶಕೃಪೆಗೆ ಪಾತ್ರರಾಗಿ ಗಣಪದವಿಯನ್ನು ಪಡೆದನು.

ಎಸೆವಿಳೆಯು ನೈನಾರ ದೆಸೆಯಿಂದೆ ದೀಕ್ಷೆಗೊಂ ।
ಡಸಮಲಿಂಗವೊಳು ಬೆರೆದ ಮಂಗಾಯಕ್ಕ ।
ರಸಿಯರ್ಗೆ ತನುಜ ನೆನಿಸುವೆನು ॥

o o o

ಜ್ಞಾನ ಸಂಬಂಧದಿಂದಾ ನಂದರಸರೂಪ ।
ನಾನು ತಂದೆಸೆದ ಸುಗುಣಿ ಸೌಂದರ ಪಾಂಡ್ಯ ।
ನೀನೆನ್ನ ಪುಣ್ಯದಧಿ ದೈವ ॥

—ಶ್ರೀ ನಿಜಗುಣ ಶಿವಯೋಗಿಗಳು.

# ೪೫. ವಾಹಿಲ್ಯರು (ಓಹಿಲ)

ಭುವನ ಮಂಡಲದಲ್ಲಿ ಚೋಳ ಮಂಡಲವು ಶೈವರಿಂದ ತುಂಬಿ ತುಳುಕುತ್ತದೆಂಬುದು ಎಲ್ಲರಿಗೂ ಗೊತ್ತಿದ್ದ ಮಾತು. ಆ ಮಂಡಲವು ಭವ್ಯವಾದ ಶಿವಾಲಯಗಳಿಂದಲೂ, ಸದ್ಭಕ್ತರ ಸಮೂಹದಿಂದಲೂ ಶೋಭಿಸುತ್ತಿತ್ತು. ಈ ರೀತಿಯಾಗಿರುವ ಆ ಮಂಡಲದಲ್ಲಿ ಪುಣ್ಯವಾಹಿನಿಯಾದ ಕಾವೇರಿಯ ತೀರದಲ್ಲಿ ಪೊನ್ನೆ ಎಂಬ ಹೆಸರಿನ ನಗರವು ಶಿವಾಲಯಗಳಿಂದಲೂ, ಭಗವದ್ಭಕ್ತರಾದ ಮಾನವ ಶ್ರೇಷ್ಠರಿಂದಲೂ ರಾರಾಜಿಸುತ್ತಿತ್ತು. ಶಿವಭಕ್ತರ ಗುಂಪಿಗೆ ಶ್ರೇಷ್ಠನಾದವನೂ, ಪ್ರಾಣಲಿಂಗಿಯೂ ಶಿವಾನಂದ ಸುಖಸಾಗರದಲ್ಲಿ ಮನವಾರೆ ನಲಿದಾಡುವವನೂ ಆದ ವಾಹಿಲ್ಯನೆಂಬ ಸುಂಗನವನು ಆ ನಗರದಲ್ಲಿದ್ದುಕೊಂಡು ಶಿವಭಕ್ತರ ಪ್ರೀತಿಗೆ ಪಾತ್ರನಾಗಿದ್ದನು.

ಪರಹಿತಕಾಂಕ್ಷಿಯೂ, ಸನ್ಮಾರ್ಗಪ್ರವರ್ತಕನೂ ಆದ ವಾಹಿಲ್ಯನು ಶಿವಗಣ ಸಮೂಹವನ್ನು ಎಲ್ಲ ವಿಧದಿಂದಲೂ ತೃಪ್ತಿಗೊಳಿಸುತ್ತ ಅವರೊಂದಿಗೆ ಶಿವಾನುಭವ ಪ್ರಸಂಗಭಾಗಿಯಾಗಿ ಸದ್ಗುರುವಿನ ಕಾರುಣ್ಯವನ್ನು ಪಡೆದು, ಶಿವಮಂತ್ರಾಧಿಕಾರಿಯಾಗಿ, ಆ ಕ್ರಮ–ವಿಧಿಗಳ ಬಗೆಗೆ ಚನ್ನಾಗಿ ಅರಿತುಕೊಂಡು ಮಾನಸ ಪೂಜೆಯಲ್ಲಿ ವಿಶಾರದನಾಗಿದ್ದನು. ಕರುಣಾಕರನಾದ ಶಂಕರನಿಗೆ ಅನುದಿನವೂ ನೂತನ ತರಹದ ಕುಸುಮಗಳನ್ನು ಅರ್ಪಿಸುತ್ತ ಪ್ರಾಣಲಿಂಗ ಪೂಜಾಧುರಂಧರನಾಗಿ, ಅದರಲ್ಲಿಯೇ ಸಂತೋಷಭರಿತನಾಗಿ ಕಾಲಕಳೆಯುತ್ತಿರಲು ಕೆಲವರುಷಗಳು ಸಂದವು.

ಹೀಗಿರಲೊಂದು ದಿನ ವಾಹಿಲ್ಯನು ಮಲಗಿಕೊಂಡು ಏಳುವಾಗ ಶೈವೋಪದೇಶವನ್ನು ಕೊಟ್ಟ ಗುರುವನ್ನು ಸ್ಮರಿಸಿ ಮುಖಮಾರ್ಜನೆಯನ್ನು ತೀರಿಸಿಕೊಂಡು ತ್ರಿಪುಂಡ್ರ ಧಾರಿಯಾಗಿ ಕಾವೇರಿಯ ತೀರಕ್ಕೆ ಬಂದು ಸ್ನಾನಾದಿಕಾರ್ಯಗಳನ್ನು ತೀರಿಸಿ ನದಿಯ ತೀರದ ಬಿಲ್ವ ವೃಕ್ಷದಡಿಯಲ್ಲಿ ದರ್ಭೆಗಳನ್ನು ಹಾಸಿ ಪದ್ಮಾಸನದಲ್ಲಿ ಕುಳಿತು ಭಸ್ಮವನ್ನು ಶಾಸ್ತ್ರೋಕ್ತ

ವಾಗಿ ತಳೆದು, ರುದ್ರಾಕ್ಷಗಳನ್ನು ಧರಿಸಿ ತನ್ನ ಶರೀರವನ್ನೇ ದೇಗುಲವನ್ನಾಗಿ ಮಾಡಿಕೊಂಡು, ಹೃತ್ಕಮಲವನ್ನು ಲಿಂಗವೆಂದು ಭಾವಿಸಿಕೊಂಡು ಬೇರೆಯಾವುದರ ಪರಿವೆಯಿಲ್ಲದೆ ಸುಗಂಧಮಯವಾದ ಅಪರಿಮಿತ ಪುಷ್ಪಗಳನ್ನು ತಂದು ಪೂಜಿಸಿ ಸಂತೋಷಸಾಗರದಲ್ಲಿ ವಿಹರಿಸುತ್ತ ತನ್ನ ಮನೆಯ ಕಡೆಗೆ ಬರುತ್ತಿದ್ದನು.

ಶೃತಿ, ಉಪನಿಷತ್ತುಗಳಿಗೂ ಕೂಡ ಗೋಚರವಾಗದಿರುವ ಗಿರಿಜಾರಮಣನಿಗೆ ವಾಹಿಲ್ಯನ ಭಕ್ತಿಯ ರೀತಿಯು ತುಂಬಾ ಮೆಚ್ಚುಗೆಯಾಗಿ ಆತನಿಗೆ ಅನುಗ್ರಹವನ್ನಿಯಲೋಸುಗ ಓರ್ವ ಉದ್ದಂಡನನ್ನು ಕಳುಹಿದನು. ತನ್ನ ಆನಂದದಲ್ಲಿಯೇ ಮಗ್ನನಾಗಿ ಮನೆಯ ಕಡೆಗೆ ಬರುತ್ತಿದ್ದ ವಾಹಿಲ್ಯನನ್ನು ಶಿವಪ್ರೇರಿತನಾದ ಉದ್ದಂಡನು ಆತನನ್ನು ಮಾತನಾಡಿಸಿದನು— "ಭಕ್ತಶ್ರೇಷ್ಠಾ ! ಇದೇನು ? ಈ ರೀತಿ ಯಾವುದರ ಅರಿವೆಯೂ ಇಲ್ಲದೆ ಹೊರಟಿರುವಿರಲ್ಲ ! ಇದರ ಕಾರಣವೇನೆಂದು ನಾನು ಕೇಳಿದರೆ ನಿನಗೆ ಕೋಪಬರಲಿಕ್ಕಿಲ್ಲವಷ್ಟೆ ?"

ಆಗ ವಾಹಿಲ್ಯನು ನಿದ್ರೆಯಿಂದೆಚ್ಚೆತ್ತವರಂತೆ, ತನ್ನ ಆನಂದ ಲೋಕದಿಂದ ನಿಜ ಜಗತ್ತಿಗೆ ಬಂದು— "ಪೂಜ್ಯರೇ ! ನಾನು ಪ್ರತಿನಿತ್ಯವೂ ಹೃತ್ಕಮಲದಲ್ಲಿ ಲಿಂಗಮೂರ್ತಿಯನ್ನು ಅಣಿಗೊಳಿಸಿ ಭಾವನಾ ಶಕ್ತಿಯಿಂದ ತೃಪ್ತಿಯಾಗುವಂತೆ ಪೂಜಿಸುತ್ತೇನೆ ಆದರೆ ಈದಿನ ಅತ್ಯಂತ ಸುಗಂಧಮಯವಾದ ದೇವಪುಷ್ಪಗಳನ್ನು ಸದಾಶಿವನಿಗೆ ಅರ್ಪಿಸಿರುವದರಿಂದ ನನಗೆ ಅತೀವ ಆನಂದವುಂಟಾಗಿದೆ" ಎಂದು ನುಡಿದನು.

ಆಗ ಶಿವಪ್ರೇರಿತ ಜಂಗಮನು— "ಮಾನವರು ದೇವಪುಷ್ಪಗಳಿಂದ ಪೂಜಿಸುದದು ವಿಚಿತ್ರವಾಗಿದೆ." ಯೆನ್ನಲು ವಾಹಿಲನಿಗೆ ಒಮ್ಮೆಲೆ ಕಂಪನವುಂಟಾಗಿ ತನ್ನೆದುರು ನಿಂತ ಜಂಗಮನಿಗೆ "ಶರಣಾರ್ಥಿ-ಶರಣಾರ್ಥಿ" ಎಂದೆನ್ನುತ್ತ ತನ್ನ ಪೂಜೆಯ ನಿಜಸ್ವರೂಪವನ್ನು ತೋರಿಸಬೇಕೆಂಬ ಭಕ್ತಿಯ ಉದ್ರೇಕದಲ್ಲಿ ತನ್ನ ಹೊಟ್ಟೆಯನ್ನೇ ಬಗೆದು ತೋರಿಸದನು.

ಆಗ ಭಕ್ತವತ್ಸಲರಾದ ಭಗವಂತನು ಅವನಲ್ಲಿಯ ಭಕ್ತಿಗೆ ಮೆಚ್ಚಿ

ತನ್ನ ನಿಜರೂಪವನ್ನು ತೋರಿಸಿ ಕೈಲಾಸಕ್ಕೆ ಕರೆದೊಯ್ದು ಅಮರವಾದ ಗಣಪದವಿಯನ್ನಿತ್ತನು.

ಪರಮನಂ ಮಾನಸಾಂತರ ದೊಳರ್ಚಿಸಿ ಮುಕ್ತಿ ।
ತರುಣಿಯೋಳಗಲದಿಹ ವಾಹಿಲ್ಯರೆನ್ನ ।
ದುರಿತ ಸಂಕುಳವ ನೊರಸುವದು ॥

—ಶ್ರೀ ನಿಜಗುಣ ಶಿವಯೋಗಿಗಳು.

# ೪೬. ಕಳಚತ್ತಿಯಾಂಡರು

ಭೂಮಂಡಲದೊಳಗಿನ ಸಮಸ್ತ ಪ್ರಾಣಿಗಳಲ್ಲಿ ಮಾನವನೇ ಅತಿ ಶ್ರೇಷ್ಠನೆಂದೂ, ವಿಚಾರಶೀಲನೆಂದೂ ನಿರ್ವಿವಾದವಾಗಿ ಹೇಳಬಹುದು. ಅಲ್ಲದೆ ಇದು ಎಲ್ಲರಿಗೂ ಗೊತ್ತಿದ್ದ ಸಂಗತಿಯೂ ಆಗಿದೆ. ನಿಜವಾದ ಶಿವ ಭಕ್ತಿಯಿಂದ ಕೂಡಿದ ಸುಜನರಿಗೆ ಪಂಚಾಚಾರ ಪರಾಯಣತೆಯೇ ಮಿಗಿಲಾದ ಆಭರಣವೆಂದು ಹೇಳಬಹುದು. ಆ ಐದು ವಿಧವಾದ ನಿಯಮಗಳನ್ನು ಶಿವಭಕ್ತರು ತಮ್ಮ ಶಕ್ತ್ಯಾನುಸಾರವಾಗಿ ಪಾಲಿಸುತ್ತಿದ್ದರೂ ಅದರಲ್ಲಿಯ ಗಣಾಚಾರ ವ್ರತವನ್ನು ಮನದಣಿಯೆ ಪೂರೈಸುವದು ಬಿಗಿಯಾದ ಹಾಗು ಪ್ರಚಂಡವಾದ ಕೆಲಸವೆಂತಲೂ ಹೇಳಬಹುದು.

ಶಿವಗ್ರಂಥಗಳನ್ನು ತುಚ್ಛವಾಗಿ ಕಾಣುವದು, ಪರಮಾತ್ಮನನ್ನು ಹಳಿಯುವದು, ಸ್ಥಾವರ ಲಿಂಗಗಳ ಭದ್ರತೆಗೆ ಭಂಗತರುವದು, ಶೈವರನ್ನು ನಿಂದಿಸುವದು, ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಶಿವಧರ್ಮವನ್ನು ಮಾನ್ಯತೆಯಿಂದ ಪರಿಗಣಿಸದಿರುವ ಶಿವದ್ರೋಹವನ್ನು ಕಂಡೊಡನೆ ಸಾಧ್ಯವಾದರೆ ನಿವಾರಿಸುವದು, ನಿಗ್ರಹಿಸುವದು, ಶಪಿಸುವದು, ಖಂಡಿಸುವದು, ಅದು ತನ್ನಿಂದಾಗದಿದ್ದರೆ ಆ ಸ್ಥಾನದಿಂದ ದೂರವಾಗುವದು ಗಣಾಚಾರವಾಗಿದೆ.

ಮುಕ್ತಿಪ್ರದವಾದ ಶಿವಾಲಯಗಳ ನೆಲೆಯಾಗಿ ಸದಾಚಾರದಲ್ಲಿ ನಿರತರಾದ ಭಕ್ತರ ಗುಂಪಿನಿಂದ ಶೋಭಿಸುವ ಹಾಗು ಸುಖ—ಸಮೃದ್ಧಿಗಳಿಗಾಗಿ ಹೆಸರು ಪಡೆದ ಪುಣ್ಯಭೂಮಿಯಾದ ಚೋಳಧರೆಯಲ್ಲಿ ಕಣಂಜಿ ಎಂಬ ಪಟ್ಟಣವು ಮಂಗಲಮಯವಾಗಿ ಪ್ರಕಾಶಿಸುತ್ತಿತ್ತು. ಆ ನಗರದಲ್ಲಿ ಮನೋ ಎಂಬ ಕುಲದಲ್ಲಿ ಜನ್ಮವೆತ್ತಿದ, ನಿಸ್ಸೀಮ ಶಿವಭಕ್ತನಾದ ಕಳಚತ್ತಿಯಾಂಡನೆಂಬ ಪುಂಗವನು ಶಿವಭಕ್ತರಿಗೆ ಪ್ರಾಣಸ್ವರೂಪದಂತಿದ್ದ ಂಚಾಚಾರಗಳನ್ನು ಅರಿತುಕೊಂಡು ಅದರಂತೆ ವರ್ತಿಸುತ್ತ ಅದರಲ್ಲಿಯ

ಗಣಾಚಾರವನ್ನೇ ಮುಖ್ಯವಾಗಿರಿಸಿಕೊಂಡು ಅದನ್ನೇ ಉಗ್ರವಾಗಿ ಕಾರ್ಯ ರೂಪಕ್ಕೆ ತರುತ್ತಿದ್ದನು.

ಜಂಗಮ ನಿಂದೆ, ಗುರುನಿಂದೆ, ಶಿವನಿಂದೆಗಳೇ ಮೊದಲಾದ ದ್ರೋಹ ಗಳನ್ನು ಎಳ್ಳಷ್ಟೂ ಸಹಿಸದೆ ಅಂಥವರನ್ನು ಧೀರತನದಿಂದ ಎದುರಿಸಿ ಸಿಂಹ ನಂತೆ ಮೆರೆಯುತ್ತಿದ್ದನು. ಅಂಥವರು ಅಂದರೆ ಶೈವ ದ್ರೋಹಿಗಳು ಭೂಮಿಗೆ ಭಾರರು ಅಂಥವರು ಜೀವಿಸಿರಲೇ ಕೂಡಲೇ ಎಂದು ಅವರ ಭಾರವನ್ನು ಇಳಿಸಿಬಿಡುತ್ತಿದ್ದನು. ತನ್ನಲ್ಲಿಯ ಈ ರೀತಿಯ ಕಾಯಕದಲ್ಲಿ ಕಳಚತ್ತಿಯಾಂಡನು ಕೊಂಚವೂ ಚ್ಯುತಿ ಬರಗೊಡುತ್ತಿದ್ದಿಲ್ಲ. ಆವ ನಲ್ಲಿಯ ಉಗ್ರ ಗಣಾಚಾರ ವೃತ್ತಿಯ ಪ್ರತಿಭೆಯ ದಿಗ್‌ದಿಶೆಗಳಲ್ಲಿ ಹರಡಿ ಕೊಂಡಿತ್ತು.

ಕೈಲಾಸದಲ್ಲಿರುವ ಶಂಕರನಿಗೂ ಈ ಕಳಚತ್ತಿಯಾಂಡನನ್ನು ಪರೀಕ್ಷಿ ಸುವ ಅಪೇಕ್ಷೆಯಾಯಿತು. ಕೂಡಲೇ ಅವನು ಮಾನವ ರೂಪದಿಂದ ಉದ್ದಂಡ ವೇಷವನ್ನು ಧರಿಸಿ ಗುರು—ಲಿಂಗ—ಜಂಗಮ ಪ್ರೇಮಿಯಾದ ಆಕಳ ಚತ್ತಿಯಾಂಡನಲ್ಲಿಗೆ ಬಂದು ಆತನ ಎದುರಿನಲ್ಲಿಯೇ ನಿಂತುಕೊಂಡು ಭೀಕರದಿಂದ—“ ಬೂದಿಬಡಕ ಜಂಗಮರಿಗೆ ಶಿವಸ್ವರೂಪರೆಂದು ಭಾವಿ ಸುವ ಸ್ಮಶಾನದಲ್ಲಿದ್ದುಕೊಂಡು, ಪಿಶಾಚಿಗಳೊಂದಿಗೆ ತಿರುಗಾಡುತ್ತಿರು ವಂಥವನಿಗೆ ಭಗವಂತನೆಂದು ತಿಳಿದುಕೊಂಡಂಥ ಮೂರ್ಖನು ನೀನೇ ಅಲ್ಲವೇ ? ” ಎನ್ನಲು ಕಳಚತ್ತಿಯಾಂಡನಿಗೆ ವಿಪರೀತ ಕೋಪ ಬಂದಿತು. ಕಣ್ಣುಗಳು ಕೆಂಪಗಾದವು. ಕೂಡಲೇ ಕೈಯ ಟೊಂಕದಲ್ಲಿ ಅಲೆದಾಡು ತ್ತಿದ್ದ ಕತ್ತಿಯ ಮೇಲೆ ಹೋಯಿತು. ಇದನ್ನೆಲ್ಲ ಗಮನಿಸುತ್ತಿದ್ದ ಉದ್ದಂಡ ರೂಪಿ ಶಿವನು ಸುಮ್ಮನೆ ನಿಂತುಕೊಂಡಿದ್ದನು.

ಖಡ್ಗವನ್ನು ಒರೆಯಿಂದ ಹಿರಿದ ಕಳಚತ್ತಿಯಾಂಡನು ಅವನದೊಂದು ಕೈಯನ್ನು ಹಿಡಿದು ಖಡ್ಗವನ್ನು ಮೇಲಕ್ಕೆತ್ತಲು ಪರಮೇಶ್ವರನು ತನ್ನ ನಿಜರೂಪವನ್ನು ತೋರಿಸಿದನು. ಕೂಡಲೇ ಆ ಶಿವಭಕ್ತನು ದೇವದೇವ ನಾದ್ದ ಆ ಮಹಾದೇವನ ಪಾದಗಳ ಮೇಲೆ ಬಿದನು. ಆಗ ಶಂಕರನು

ಭಕ್ತನನ್ನು ಸಾಂತ್ವನಗೊಳಿಸಿ ಕೈಲಾಸಕ್ಕೆ ಕರೆದೊಯ್ದು ಅವನಿಗುಚ್ಚವಾದ ಗಣಪದವಿಯನ್ನು ಅನುಗ್ರಹಿಸಿದನು.

ಅಸಮಾಕ್ಷ ನಿಂದಕರ ರಸನೆಗಳನುಗಿದು ಸಂ ।
ತಸವ ನೊಳಕೊಂಡ ಕಳಚತ್ತಿಯಾಂಡನೀ ।
ನಸುಗಾಯ್ವುದೆನ್ನ ಜನವರ್ಯ ॥

—ಶ್ರೀ ನಿಜಗುಣ ಶಿವಯೋಗಿಗಳು.

---

# ೪೭. ತಂಡೇಶನು

ಒಳ್ಳೆಯ ಮಾರ್ಗವನ್ನು ಅವಲಂಬಿಸಿ ತನಗೂ ತನ್ನ ಅಕ್ಕ-ಪಕ್ಕದಲ್ಲಿರುವವರಿಗೂ ಹಿತವಾಗುವಂತೆ ನಡೆದುಕೊಳ್ಳುವಂಥವನೇ ವಿಪ್ರನು. ಬ್ರಹ್ಮನಲ್ಲಿ ರಮಮಾಣನಾಗಿ ಬ್ರಹ್ಮನನ್ನು ಅರಿತುಕೊಳ್ಳುವವನೇ ಬ್ರಾಹ್ಮಣನು. ಭೂಸುರರೆಂದು ಕರೆಯಲ್ಪಡುವ ಬ್ರಹ್ಮನಿಷ್ಠರಾದ ಜನರ ಗುಂಪಿನಿಂದ ಅಲಂಕರಿಸುವ ಕೇರಿಗೆ ಅಗ್ರಹಾರವೆನ್ನುವರು.

ಅನವರತವೂ ಸನ್ಮಾರ್ಗವನ್ನು ಬಿಡದೆ ಆಚರಿಸುವಂಥ ಶೈವರಿಂದ ಶೋಭಿಸುವ ಚೋಳ ಮಂಡಲದಲ್ಲಿ ಕಾವೇರಿನದಿಯ ತೀರದೊಳಗೆ ಸಲ್ಲೀಲೆ ಎಂಬ ಪುರವಿದ್ದಿತು. ಶೈವರಿಂದ ತುಂಬಿದ ಅಗ್ರಹಾರದ ಬ್ರಾಹ್ಮಣರ ಸಮೂಹದೊಳಗೆ ಮಂದಮತಿಯಾದ ವಿಪ್ರನೋರ್ವನು ಶಿವಭಕ್ತಿ ಪಾರಾಯಣೆಯಾದ ಪತ್ನಿಯೊಂದಿಗೆ ಸಂಸಾರ ಸಾಗಿಸುತ್ತಿದ್ದನು. ಆ ಸಾಧ್ವಿಯಲ್ಲಿದ್ದ ನಿರ್ಮಲವಾದ ಶಿವಭಕ್ತಿಯ ಪ್ರತೀಕವೋ ಏನೋ ಎಂಬಂತೆ ಆ ವಿಪ್ರನಿಗೆ ಸುಮನೋಹರ ಕುಮಾರನೊಬ್ಬನು ಜನಿಸಿದನು.

ಆ ಕುಮಾರನು ತಾಯಿಯ ಅಪ್ಪಣೆಯಂತೆ ಯಾವಾಗಲೂ ಶಿವಭಕ್ತರೊಂದಿಗೇ ಕಾಲಕಳೆಯುತ್ತಿದ್ದನು. ಅಲ್ಲದೆ ಅವರ ಬಾಲಕರೊಂದಿಗೆ ಸ್ನೇಹ ಬೆಳೆಯಿಸಿ ಅವರೊಟ್ಟಿಗೆ ಆಟವಾಡುತ್ತಿದ್ದನು. ಆ ಭಕ್ತರ ಮಕ್ಕಳೊಂದಿಗೆ ಮಣ್ಣಿನ ಲಿಂಗವನ್ನು ಮಾಡಿ ಪೂಜಿಸಿ ಆನಂದಪಡುತ್ತ ಪತ್ರಿ-ಪುಷ್ಪ ಪಲ್ಲವಾದಿಗಳನ್ನು ಧರಿಸುತ್ತಿದ್ದನು. ಅದೇ ಆನಂದದಲ್ಲಿ ಆ ತಂಡೇಶನು (ವಿಪ್ರಕುಮಾರನು) ಹಸಿವೆ ನೀರಡಿಕೆಗಳ ಪರಿವೆಯೂ ಇಲ್ಲದೆ ಶಿವಪೂಜಾ ವಿನೋದದಲ್ಲಿಯೇ ಕಾಲ ಕಳೆಯತೊಡಗಿದನು. ಇದನ್ನು ಕಂಡು ಅಗ್ರಹಾರದ ಕೆಲ ಹುಡುಗರು ಅವನ ತಂದೆಗೆ ಹೇಳಿದರು. ಅದನ್ನು ಕೇಳಿ ಮೂರ್ಖನಾದ ಆ ಬ್ರಾಹ್ಮಣನು ಬಹಳ ಸಂತಾಪಗೊಂಡನು.

ಸಿಟ್ಟಿಗೆದ್ದ ಆ ವಿಪ್ರನು ಇವನನ್ನು ಹಾಗೆಯೇ ಬಿಟ್ಟರೆ ಎಲ್ಲವೂ ಅನರ್ಥವಾಗುವದೆಂದು ಭಾವಿಸಿ ತಂಡೇಶನನ್ನು ತನ್ನ ಮನೆಯೊಳಗಿನ ಗೋವುಗಳನ್ನು ಕಾಯ್ದುಕೊಂಡು ಬರಲಿಕ್ಕೆ ಅಪ್ಪಣೆ ಮಾಡಿದನು. ಇದರಿಂದ ತಂಡೇಶನಿಗೆ ದುಃಖದ ಬದಲು ಆನಂದವೇ ಆಯಿತು. ಏಕಾಂತದಲ್ಲಿ ಮನದಣಿಯುವಂತೆ ಶಿವಲಿಂಗ ಪೂಜೆಯನ್ನು ಸಾಗಿಸತೊಡಗಿದನು. ಗೋವುಗಳನ್ನು ಅಡವಿಯಲ್ಲಿ ಮೇಯಲಿಕ್ಕೆ ಬಿಟ್ಟು ತಾನು ಮನೆಯಿಂದ ಕದ್ದು ತಂದ ಭಸ್ಮ-ರುದ್ರಾಕ್ಷಿಗಳನ್ನು ತಳೆದು ಲಿಂಗಗಳನ್ನು ರಚಿಸಿ ಗೋಕ್ಷೀರದಿಂದ ಅಭಿಷೇಕ ಮಾಡಿ, ಪುಷ್ಪಗಳನ್ನು ಮುಡಿಸಿ ಆನಂದಿತನಾಗತೊಡಗಿದನು. ಈ ರೀತಿಯಾಗಿ ಇವನು ತನ್ನ ಕಾಯಕವನ್ನು ನಡೆಸಿರಲು ಕೆಲ ದನಗಾಹಿ ಹುಡುಗರು ತಂಡೇಶನ ತಂದೆಯ ಬಳಿಹೋಗಿ— "ನಿನ್ನ ಕುಮಾರನು ಗೋವಿನ ಹಾಲನ್ನೆಲ್ಲ ಲಿಂಗದ ಮೇಲೆ ಸುರುವಿ ನಷ್ಟಮಾಡುತ್ತಿದ್ದಾನೆ. ಎಲ್ಲ ಕೆಲಸಗಳನ್ನು ಬಿಟ್ಟು ಲಿಂಗಪೂಜೆಯಲ್ಲಿಯೇ ಮಗ್ನನಾಗಿರುತ್ತಾನೆ" ಎಂದು ಹೇಳಲು ಆ ವಿಪ್ರನು ಸಿಟ್ಟಿಗೆದ್ದು ಅಡವಿಗೆ ಬಂದು ನೋಡಲು ಅಲ್ಲಿ ಅದೇ ಪರಿಸ್ಥಿತಿಯಿದ್ದಿತು. ಹಾಲೆಲ್ಲ ಭೂಮಿಯ ಮೇಲೆ ಬಿದ್ದು ಕೆಸರನ್ನುಂಟು ಮಾಡಿತ್ತು. ಅದನ್ನು ಕಂಡು ಅವನು ಕುಪಿತನಾಗಿ ಶಿವ ಭಕ್ತರೆಲ್ಲ ಈ ಪರಿಯ ಮರುಳರೇ ಇರುತ್ತಾರೆ. ಎಂದು ಬಾಯಿಗೆ ಬಂದಂತೆ ಅನ್ನುತ ತಂಡೇಶನು ಅತಿ ನಲುಮೆಯಿಂದ ಸಿದ್ಧಗೊಳಿಸಿದ ಲಿಂಗವನ್ನು ತನ್ನ ಕಾಲಿನಿಂದ ಕೆಡಿಸಿ ಬಿಟ್ಟನು. ತನ್ನ ತಂದೆಯ ಈ ರೀತಿಯ ವರ್ತನೆಯಿಂದ ತಂಡೇಶನ ಮನಸ್ಸು ಬಹಳವಾಗಿ ನೊಂದಿತು. ಕೂಡಲೇ ಕೋಪವೂ ಬಂದುಬಿಟ್ಟಿತು. ಆಗ ಅವನು ತನ್ನೆದುರು ನಿಂತವನು ತಂದೆಯೆಂಬುದನ್ನು ಗಣನೆಗೆ ತಾರದೆ ಉಗ್ರಗಣಾಚಾರ ವ್ರತವನ್ನು ಕೈಕೊಂಡು ಪಕ್ಕದಲ್ಲಿಯೇ ಇರಿಸಿಕೊಂಡಿದ್ದ ಹದನಾದ ಕೊಡಲಿಯಿಂದ ತನ್ನ ತಂದೆಯ ರುಂಡವನ್ನು ಮುಂಡದಿಂದ ಬೇರೆ ಮಾಡಿ ಬಿಟ್ಟನು.

ಆಗ ಸರ್ವಾಂತರ್ಯಾಮಿಯೂ, ಸರ್ವಸಾಕ್ಷಿಭೂತನೂ, ತಂಡೇಶನ ಉಪಾಸನಾಮೂರ್ತಿಯೂ ಆದ ಭಗವಂತನು ಅವನಲ್ಲಿಯ ಉಗ್ರ ಗಣಾಚಾರಕ್ಕೂ ನಿಷ್ಕಲ್ಮಿಷವಾದ ಭಕ್ತಿಗೂ ಮೆಚ್ಚಿ ಪ್ರತ್ಯಕ್ಷನಾಗಿ, ತಂಡೇಶನ

ತಂದೆಗೆ ಪ್ರಾಣದಾನ ಮಾಡಿ ತಂಡೇಶನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ದಯಪಾಲಿಸಿದನು.

ಪಿತನೊಮ್ಮೆ ಪಾರ್ವತಿಯ ಪತಿಯಂ ನಿರಾಕರಿಸೆ ।
ಶ್ರುತಿ ವಿಧಿಗಳು ಕದವ ನಿಂದಿಹ ತಂಡೇಶ ।
ನತಿ ಭಕ್ತಿ ಸೌಖ್ಯವೆನಗಕ್ಕು ॥

—ಶ್ರೀ ನಿಜಗುಣ ಶಿವಯೋಗಿಗಳು

## ೪೮. ಕೊಲ್ಪುಲಿಯಾಂಡರು

ನಾನಾವಿಧವಾದ ಐಸಿರಿಯಿಂದಲೂ, ವಿವೇಕವಂತರಾದ ಜನಸವಾಲ ದಾಯಿದಿಂದಲೂ ಹಾಗು ಭವ್ಯವಾದ ಶಿವಾಲಯಗಳಿಂದಲೂ ಶೋಭಿಸು ವಂಥ ಚೋಳಮಂಡಲವು ಚೋಳರಾಜ್ಯವು ಆರ್ಯಾವರ್ತದ ದಕ್ಷಿಣ ಭಾಗ ದಲ್ಲಿ ರಾರಾಜಿಸುತ್ತಿತ್ತು. ಆ ಪ್ರದೇಶದಲ್ಲಿ ತಿರುವಣ್ಣಾಮಾಲೆ ಎಂಬ ನಗರಿಯು ಐಸಿರಿಯ ಆಗರವಾಗಿದ್ದಿತು. ಅಲ್ಲಿ ವಿವೇಕ ಸಂಪನ್ನನೂ, ಸಾಹಸಿಯೂ, ಆದ ಕೊಲ್ಪುಲಿಯಾಂಡನೆಂಬ ಶಿವಭಕ್ತನು ವಾಸಿಸುತ್ತಿದ್ದನು.

ಅವನಲ್ಲಿ ಸಂಚಿತವಾದ ಪುಣ್ಯಬಲದಿಂದಲೋ ಇಲ್ಲವೆ ಸತ್ಯ ಪಾರಾ ಯಣತೆ ಗುರುಭಕ್ತರೊಡನೆ ಒಡನಾಟ-ಶಿವಾನುರಾಗಿಗಳ ಸ್ನೇಹದಿಂದಲೋ ಅವನಿಗೆ ಪರಮಪೂಜ್ಯರ ಸಂದರ್ಶನವಾಗಲು ನಿರ್ಮಲ ಹೃದಯನಾದ ಅವನು ಆ ಮಹಿಮರಿಂದ ಶಿವ ಮಂತ್ರಾಧಿಕಾರವನ್ನು ಹೊಂದಿ ತಂದೆ-ತಾಯಿ, ಪತ್ನಿ-ಪುತ್ರರೊಡಗೂಡೆ ಸುಸಂಸ್ಕೃತನಾದನು. ಶಿವಾನುಭವದಲ್ಲಿ ಲವಲವಿಕೆ, ಗುರುಚರಣಧ್ಯಾನ, ಉದ್ಯೋಗ ತತ್ಪರತೆ ಹಾಗು ಸತ್ಪಾತ್ರ ದಾನಗಳು ಅವನಲ್ಲಿ ಸ್ವಾಭಾವಿಕ ಗುಣಗಳಾದವು. ಭೂರುದ್ರರೆನ್ನಿಸುವ ಸತ್ಶೀಲ ಜಂಗಮ ಮೂರ್ತಿಗಳನ್ನು ಪ್ರಮಥರೆಂದು ಭಾವಿಸಿ ಅವರನ್ನು ಬಹು ಗೌರವದಿಂದ ಸತ್ಕರಿಸಿ, ಅನ್ನ-ವಸ್ತ್ರಾದಿಗಳಿಂದ ತೃಪ್ತಿಗೊಳಿಸಿ ದಕ್ಷಿಣೆ ಯನ್ನು ಅರ್ಪಿಸುತ್ತಿದ್ದನು.

ಶಿವಜ್ಞಾನವನ್ನು ಬಲ್ಲವನಾದ ಕೊಲ್ಪುಲಿಯಾಂಡನು ಮುಂದೆ ಭಯಂ ಕರ ಬರಗಾಲವು ಬರುವದೆಂಬುದನು ಅರಿತುಕೊಂಡು ತಾನು ವ್ಯಾಪಾ ರದಲ್ಲಿ ಗಳಿಸಿದ ಸಂಪತ್ತನ್ನೂ ಹಾಗು ಧಾನ್ಯವನ್ನೂ ತನ್ನ ಮಾತಾಪಿತರ ವಶಕ್ಕೊಪ್ಪಿಸಿ ಇಷ್ಟರಲ್ಲಿಯೇ ಭಯಂಕರ ಬರವು ಬೀಳುವದು. ಮಾಹೇಶ್ವರ ತೃಪ್ತಿಯನ್ನು ನಾನು ಈ ವರೆಗೆ ನಡೆಯಿಸಿದಂತೆ ನೀವು ಭಕ್ತಿಯಿಂದ ಕೊಂಚವೂ ಚ್ಯುತಿ ಬಾರದಂತೆ ನಡೆಯಿಸಿಕೊಂಡು ಹೋಗಬೇಕು. ಶಿವ ಚಿಹ್ನದ ಅಂಕಿತವುಳ್ಳವರು ಬಂದೊಡನೆ ಸತ್ಕಾರವನ್ನು ಮಾಡದಿದ್ದರೆ ನನ್ನ

ಶೀಲಕ್ಕೆ ಭಂಗ ಬರುವದು. ಅಲ್ಲದೆ ಸತ್ವವೂ ಕಡಿಮೆಯಾಗುವದು ಎಂದು ಹೇಳಿ ವ್ಯಾಪಾರಕ್ಕಾಗಿ ದ್ವೀಪಾಂತರಕ್ಕೆ ಹೊರಡಲಣಿಯಾದನು. ತನ್ನ ಸತಿಗೂ ಅದರಂತೆಯೇ ಉಪದೇಶ ಮಾಡಿ ಹೋದನು.

ಅನಂತರ ಮುಂದೆ ಕೆಲಕಾಲವು ಗತಿಸಿದ ನಂತರ ಮಳೆಯು ಸಕಾಲಕ್ಕೆ ಬಾರದಿರಲು ಭಯಂಕರ ಕ್ಷಾಮವು ತಲೆದೋರತೊಡಗಿತು. ಆ ಸಮಯದಲ್ಲಿ ಕೆಲದಿನಗಳ ವರೆಗೆ ಕೊಲ್ಪುಲಿಯಾಂಡನ ಮನೆಯಲ್ಲಿ ಜಂಗಮ ತೃಪ್ತಿಯು ಸರಿಯಾಗಿಯೇ ನಡೆಯಿತು. ಆದರೆ ಮುಂದೆ ಕೆಲವೇ ದಿವಸಗಳಲ್ಲಿ ಆ ಮನೆಯು ಅನೇಕ ಸಂಬಂಧಿಕರು ಬಂದು ನೆಲೆಯಿಸಿಬಿಟ್ಟರು. ಅತಿಥಿಗಳಂತೆ ಬಂದವರು ಕೆಲತಿಂಗಳುಗಳ ವರೆಗೆ ಹಾಗೆಯೇ ಇದ್ದುಬಿಟ್ಟುದರಿಂದ ಗಣ ಸಮೂಹದ ಸತ್ಕಾರಕ್ಕೆ ತಡೆಯುಂಟಾಗತೊಡಗಿತು. ಕಲ್ಪವೃಕ್ಷದಂತಿದ್ದ ಭಕ್ತಶಿರೋಮಣಿಯ ಗೃಹವು ಎರವಾಯಿತೆಂದು ಶಿವಭಕ್ತರು ಮರುಗುತ್ತ ಮರಳಿದರು. ಮುಂದೆ ಕೆಲವೇ ದಿನಗಳಲ್ಲಿ ಈಶ್ವರೀ ಕೃಪೆಯಿಂದ ಮಳೆಯಾಗಲು ಬಂದ ಸಂಬಂಧಿಕರೆಲ್ಲ ಹೋಗಿಬಿಟ್ಟರು.

ವ್ಯಾಪಾರಕ್ಕಾಗಿ ವಿದೇಶಗಳಿಗೆ ಹೋದ ಕೊಲ್ಪುಲಿಯಾಂಡನು ಮರಳಿ ಬಂದು ಗುರುಜಂಗಮರ ಆತಿಥ್ಯವು ಸರಿಯಾಗಿ ನಡಿಯಿತೆ ? ಎಂದು ಮಾತಾಪಿತರನ್ನು ಕೇಳಲು, ಅವರು ಯಾವುದನ್ನೂ ಮರೆಮಾಡದೆ ಇದ್ದುದನ್ನು ಇದ್ದಂತೆ ನಿಜವನ್ನೇ ಹೇಳಿಬಿಟ್ಟರು. ಅದನ್ನು ಕೇಳಿ ಆ ಭಕ್ತಾಗ್ರಣಿಗೆ ಬಹಳ ದುಃಖವಾಯಿತು. ಬಟ್ಟೆ-ಅನ್ನ ಹಾಗು ಧನ ಇವು ಸಂಸಾರಿಗಳ ಪಾಲಾಗಿ ಜಂಗಮ ತೃಪ್ತಿಗೆ ಭಂಗ ಬಂದುದು ಅವನಿಗೆ ಅತಿ ಕೆಡಕೆನ್ನಿಸಿತು. ಆಗ ಅವನು ತನ್ನಲ್ಲಿಯ ಕೋಪವನ್ನು ಪ್ರಕಟಿಸದೆ ಸುಮ್ಮನಿದ್ದು ತನ್ನ ಸಂಬಂಧಿಕರನ್ನೆಲ್ಲ "ಉಡುಗೊರೆಗಳನ್ನು ಕೊಡುತ್ತೇನೆ, ಬರಬೇಕು'' ಎಂದು ಹೇಳಿ ಕರೆಯಿಸಿಕೊಂಡನು. ಅವರೆಲ್ಲರೂ ಬಂದೊಡನೆ ಅವರನ್ನು ತನ್ನ ಮನೆಯಲ್ಲಿ ಸಾಲಾಗಿ ನಿಲ್ಲಿಸಿ ಎಲ್ಲರ ರುಂಡಗಳನ್ನೂ ಕತ್ತರಿಸಿ ಹಾಕಿದನು.

ಕೊಲ್ಪುಲಿಯಾಂಡನ ಉಗ್ರಗಣಾಚಾರಕ್ಕೂ ಹಾಗು ಅವನಲ್ಲಿಯ ಜಂಗಮನಿಷ್ಠೆಗೂ ಮೆಚ್ಚಿದ ಭಕ್ತವತ್ಸಲ, ಪರಂಜ್ಯೋತಿಸ್ವರೂಪನಾದ

ಮಹದೇವನು ಮೆಚ್ಚಿ ಅವನಿಗೆ ತನ್ನ ನಿಜರೂಪವನ್ನು ತೋರಿಸಿ ಬಂಧು ಜನರನ್ನು ಬದುಕಿಸಿ ಅವನನ್ನು ಕೈಲಾಸಕ್ಕೆ ಕರೆದೊಯ್ದು ಅತ್ಯುನ್ನತವಾದ ಗಣಪದವಿಯನ್ನು ಅನುಗ್ರಹಿಸಿದನು.

ಬಲು ಬರಂ ಬೋರಲದರೊಳು ಭಕ್ತರರ್ಥವುಂ ।
ನಲಿದುಂಡ ಬಂಧುಗಳ ನಿಕ್ಕೆ ಮಿಕ್ಕ ಕೊಲ್ ।
ಪುಲಿಯಾಂಡರೆನ್ನ ಪೊರೆಯುವದು ॥

—ಶ್ರೀ ನಿಜಗುಣ ಶಿವಯೋಗಿಗಳು.

# ೪೯. ಎಳೆಯಾಂಡ ಗುಡಿಮಾರನು

ಶೈವ ಕುಲದೀಪಕರ ನಾಡಾಗಿ ಶಿವಾಲಯಗಳ ಬೀಡಾಗಿ ಮಂಗಲದ ನಿವಾಸವಾಗಿ ಸಕಲೈಶ್ವರ್ಯ ಸಂಪನ್ನವಾದ ಚೋಳ ಧರೆಯು ಮೆರೆಯುತ್ತಿತು. ಅಲ್ಲಿಯ ಎಳೆಯಾಂಡ ಗ್ರಾಮದಲ್ಲಿ ಗುಡಿಮಾರನೆಂಬ ಒಕ್ಕಲಿಗನು ಸದಾ ಗುರು-ಲಿಂಗ-ಜಂಗಮರ ಸೇವೆಯಲ್ಲಿ ಇದ್ದುಕೊಂಡು ಸತ್ಕರ್ಮಗಳಲ್ಲಿಯೇ ನಿರತನಾಗಿದ್ದುದರಿಂದ ಅವನಿಗೆ ಎಳೆಯಾಂಡ ಗುಡಿಮಾರನೆಂದು ಕರೆಯುತ್ತಿದ್ದರು. ತಾದು ಮಾಡುವ ಪ್ರತಿಯೊಂದು ಕಾರ್ಯವನ್ನೂ ಶಿವ ಭಾವನೆಯಿಂದ ಮಾಡುತ್ತಿದ್ದನು. ಅಲ್ಲದೆ ಜಂಗಮ ಸಮೂಹಕ್ಕೆ ತೃಪ್ತಿಯಾಗಬೇಕೆಂಬ ಉದ್ದೇಶದಿಂದಲೇ ಕಾರ್ಯತತ್ಪರನಾಗುತ್ತಿದ್ದನು.

ಈ ರೀತಿ ಮಾಡುತ್ತ ಹೊರಟಿದ್ದರಿಂದ ಅವನ ಹೆಸರು ನಾಲ್ಕುಕಡೆಗೂ ಹಬ್ಬಿ ರಜಿತಗಿರಿಯವರೆಗೂ ತಲುಪಿತು. ಆಗ ಪರಮೇಶ್ವರನಿಗೆ ಇವನನ್ನು ಪರೀಕ್ಷಿಸಬೇಕೆಂಬ ಲವಲವಿಕೆಯುಂಟಾಯಿತು. ಧನ-ಕನಕ ಸಮೃದ್ಧವಾದ ಗುಡಿಮಾರನ ಮನೆಯಲ್ಲಿ ಬಡತನದ ಲಕ್ಷಣಗಳು ತಲೆದೋರತೊಡಗಿ ಕೊನೆಗೆ ದರಿದ್ರ ಲಕ್ಷ್ಮಿಯು ತಾಂಡವವಾಡತೊಡಗಿದಳು. ಆದರೂ ಆ ಧೀರನು ಲೆಕ್ಕಿಸದೆ ತನ್ನ ಉಪಜೀವನಕ್ಕೆಂದು ಒಂದು ಗದ್ದೆಯನ್ನಿರಿಸಿಕೊಂಡು ಮನೆ-ಹೊಲಗಳೆಲ್ಲವನ್ನು ಮಾರಿ ಜಂಗಮ ಸೇವೆಯನ್ನು ಮಾಡಿದನು. ಅದೂ ಮುಗಿದು ಹೋಗಲು ಬಹು ಸಮಯ ಬೇಕಾಗಲಿಲ್ಲ. ಹೀಗಾಗಿ ಅವನು ಧನದಿಂದ ಕಡುದರಿದ್ರನಾಗಿಬಿಟ್ಟನು.

ಅವನ ಸತಿ-ಸುತರಿಗೆ ಒಂದು ಹೊತ್ತಿನ ಊಟವೂ ಸಮಯಕ್ಕೆ ಸರಿಯಾಗಿ ದೊರೆಯದಂತಾಯಿತು. ಆದರೂ ಆ ಭಕ್ತನು ಕಂಗೆಡಲಿಲ್ಲ. ಹೇಗೋ ದಿನಗಳನ್ನು ನೂಕುತ್ತ ನಡೆದಿದ್ದನು. ಹೀಗಿರಲೊಂದು ಸಲ ಅತಿವೃಷ್ಟಿಯು ಪ್ರಾರಂಭವಾಗಿಬಿಟ್ಟಿತು. ಹತ್ತಿದ ಮಳೆಯು ಎರಡು ಮೂರು ದಿನಗಳ ವರೆಗೆ ಬಿಡಲೇ ಇಲ್ಲ. ಯಾರಿಗೂ ಹೊರಬರಲು ಅವಕಾಶವಿರಲಿಲ್ಲ. ಅಂಥ ಸಮಯದಲ್ಲಿ ಗುಡಿಮಾರನು ಕೈಕಟ್ಟಿಕೊಂಡು ತನ್ನ ಗುಡಿಸ

ಲೊಳಗೆ ಕುಳಿತುಕೊಳ್ಳದ ವಿನಹ ಗತ್ಯಂತರವಿರಲಿಲ್ಲ, ಅದೇ ರೀತಿ ಕುಳಿತು ಕೊಂಡಿರುವಾಗ ಪರಮೇಶ್ವರನು ತೀರ ವೃದ್ಧನ ವೇಷವನ್ನು ಧರಿಸಿ ಮಳೆ ಯೊಳಗೆ ತೋಯಿಸಿಕೊಳ್ಳುತ್ತ ಅವನ ಬಾಗಿಲ ಬಳಿ ಬಂದು ನಡುಗುವ ಸ್ವರದಲ್ಲಿ, “ ಬಾಗಿಲು ತೆರೆಯಿರಿ, ನನಗೆ ಹಸಿವೆಯಾಗಿದೆ. ಚಳಿಯಿಂದಾಗಿ ನಡುಗುತ್ತಿದ್ದೇನೆ ” ಎಂದು ಕೂಗಿಕೊಂಡನು, ಆಗ ಭಕ್ತನು ಚಟಕ್ಕನೆ ಎದ್ದು ಬಾಗಿಲು ತೆರೆದು ವೃದ್ಧರೂಪಿ ಶಿವನನ್ನು ಒಳಗೆ ಕರೆದೊಯ್ದು ಕುಳ್ಳಿರಿ ಸಿದನು. ಚಳಿಯಿಂದ ಆ ವೃದ್ಧನು ನಡುಗತೊಡಗಿದ್ದನು. ಉಟ್ಟ ಬಟ್ಟೆ ಗಳೂ ತೊಯ್ದುಹೋಗಿದ್ದವು. ಅದನ್ನು ಕಂಡು ಅವನ ಮನ ಕರಗಿತು. ಎರಡು ದಿವಸ ಮಳೆಯು ಒಂದೇ ಸವನೆ ಹತ್ತಿದ್ದರ ಪರಿಣಾಮವಾಗಿ ಮನೆ ಯೊಳಗೆ ಕಟ್ಟಿಗೆಗಳೂ ಇರಲಿಲ್ಲ. ಆದರ ಮನೆಯ ಜಂತಿಗಳನ್ನು ಹಿರಿದು ಬೆಂಕಿ ಹೊತ್ತಿಸಿ ಅದರ ಬಳಿ ವೃದ್ಧನನ್ನು ಕೂಡ್ರಿಸಿದನು.

ಎರಡು ದಿವಸಗಳಿಂದ ತಾವೇ ಉಪವಾಸವಿರುವಾಗ ಇವನಿಗೇನು ಮಾಡಬೇಕೆಂಬುದು ತೋಚದೆ ಅವನು ತನ್ನ ಪತ್ನಿಯನ್ನು ಕೇಳಿದನು. ಆಗ ಸಾಧ್ವಿಯು ಎರಡು ದಿನಗಳ ಹಿಂದೆ ಗದ್ದೆಯಲ್ಲಿ ಹಾಕಿದ ಬತ್ತಗಳನ್ನು ಆರಿಸಿಕೊಂಡುಬರಲುಹೇಳಿದಳು. ಕೂಡಲೆ ಅವನು ಅಂಥ ಮಳೆಯಲ್ಲಿಯೇ ಹೋಗಿ ಬತ್ತಗಳನ್ನು ಆರಿಸಿ ತಂದು ಅಡಿಗೆ ಮಾಡಲು ಪತ್ನಿಗೆ ಕೊಟ್ಟು ತಾನು ವೃದ್ಧನ ಬಳಿ ಮಾತನಾಡುತ್ತ ಕುಳಿತುಕೊಂಡನು. ಆಗ ಅವನ ಪತ್ನಿಯು ತನ್ನ ಮಗನನ್ನು ಕರೆದು ಹಿತ್ತಲಿನೊಳಗಿಂದ ರೇರೇಸೊಪ್ಪನ್ನೂ ಕದಳಿಯ ಫಲಗಳನ್ನು ತರಲು ಕಳಿಸಿದನು. ಆ ಹುಡುಗನು ಕೂಡ ಕತ್ತಲೆ ಯಲ್ಲಿ ಭೋರ್ಗರೆಯುತ್ತಿರುವ ಮಳೆಯೊಳಗೆ ಹಿತ್ತಲಿನಲ್ಲಿಹೋಗಿ ಸೊಪ್ಪನ್ನು ಕಿತ್ತಿಕೊಂಡು ಕದಳಿ ಫಲವನ್ನು ತೆಗೆಯುವಾಗ ಸರ್ಪದಂಶದಿಂದ ಅಲ್ಲಿಯೇ ಬಿದ್ದು ಮರಣಹೊಂದಿದನು.

ಹಿತ್ತಲದೊಳಗೆ ಹೋದ ಕುಮಾರನು ಎಷ್ಟೊತ್ತಾದರೂ ಬಾರದೆ ಹೋಗಲು ಆ ತಾಯಿಯು ತಾನೇ ಹೋಗಿ ಬಿದ್ದುಕೊಂಡಿದ್ದ ಮಗನನ್ನು ನೋಡಿ ಕೊಂಚವೂ ಚಿಂತಿಸದೆ ಸೊಪ್ಪನ್ನೂ ಫಲಗಳನ್ನೂ ತಂದು ಬೇಯಿಸಿ ಅಡುಗೆಯನ್ನು ಅಣಿಗೊಳಿಸಿ ಪತಿಯೆದುರು ಮಗನ ಗತಿಯನ್ನು ವಿವರಿಸಿ ವೃದ್ಧನನ್ನು ಊಟಕ್ಕೆ ಕರೆಯಲು ಹೇಳಿದಳು. ಅದರಂತೆ ಅವನು ವೃದ್ಧ

ನನ್ನು ಊಟಕ್ಕೆ ಕುಳ್ಳಿರಿಸಿದಾಗ ಆ ವೃದ್ಧನು ಅವನನ್ನೂ ಊಟಕ್ಕೆ ಕರಿಯಲು ಅವನೂ ಕುಳಿತುಕೊಂಡನು. ಮಗನು ಸತ್ತ ಸಂಗತಿಯು ಗೊತ್ತಿದ್ದರೂ ಊಟಕ್ಕೆ ಕುಳಿತನಲ್ಲ! ಎಂದ ವೃದ್ಧನು, " ಹೇ ಭಕ್ತನೇ ನಿನ್ನಮಗನನ್ನೂ ಊಟಕ್ಕೆ ಕರೆ " ಎಂದನು. ಆಗ ಆ ಗುಡಿಮಾರನು ತನ್ನಪತ್ನಿಯ ಮುಖವನ್ನು ನೋಡಲು ಅ ನೋಟದ ಇಂಗಿತವನ್ನರಿತ ಸಾಧ್ವಿಯು ತನ್ನ ಮಗನನ್ನು ಕೂಗಲು ಸತ್ತುಬಿದ್ದಿದ್ದ ಆ ಕುವರನು ಎದ್ದು ಒಳಗೆ ಬಂದನು. ಆಗ ಶಂಕರನು ಮೂವರಿಗೂ ತನ್ನ ನಿಜ ರೂಪವನ್ನು ತೋರಿಸಿ ಅವರನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ಅನುಗ್ರಹಿಸಿದನು.

ಮಳೆಯೊಳ್ಳೆತರೆ ಶೂಲಿ ಮೊಳೆವಿತ್ತನಟ್ಟು ಭೂ ।
ತಳವರಿಯಲಿಕ್ಕ ದೆಳೆಯಾಂಡ ಗುಡಿಮಾರ ।
ರೆಳಸಿ ಮಾಡೆನಗೆ ಮುದವನು ॥

——ಶ್ರೀ ನಿಜಗುಣ ಶಿವಯೋಗಿಗಳು.

# ೫೦. ಇಹಃಪಗೆಯಾಂಡನು

ಚೋಳಮಂಡಲದಲ್ಲಿಯ ಕಾವೇರಿಯೆಂಬ ನಗರವನ್ನು ಇಹಃಪಗೆ ಯಾಂಡನೆಂಬ ದೊರೆಯು ಆಳುತ್ತಿದ್ದನು. ಶಿವಭಕ್ತನಾದ ಅವನು ತನ್ನ ಪ್ರಜರಿಗೆ ಎಲ್ಲ ವಿಧವಾದ ಸೌಲಭ್ಯಗಳನ್ನು ಮಾಡಿಕೊಡುವದರಲ್ಲಿ ಹಿಂದೆ ಮುಂದೆ ನೋಡುತ್ತಿರಲಿಲ್ಲ. ಪ್ರಜೆಗಳ ಮೇಲಿನ ಮಮತೆಯಂತೆ ಅವನ ಲ್ಲಿಯ ಗುರುಲಿಂಗ-ಜಂಗಮರಲ್ಲಿಯ ಆಸ್ಥೆಯೂ ಕೂಡ ವರ್ಣನಾತೀತವಾ ಗಿತ್ತು. ಈತನಿಗೆ ಒಂದು ನೂರು ಜನ ಮಡದಿಯರಿದ್ದರು. ಅವರಲ್ಲಿ ರತ್ನವತೀ ರಾಣಿಯು ಅತ್ಯಂತ ಸುಂದರಿಯಾಗಿದ್ದಳು. ಇವಳು ತನ್ನ ಪತಿಯ ಎಲ್ಲ ಕಾರ್ಯಗಳಲ್ಲೂ ನೆರವಾಗಿ ಅವನ ಯಾವ ಕಾರ್ಯಕ್ಕೂ ಚ್ಯುತಿ ಬರದಂತೆ ಎಚ್ಚರಿಕೆಯಿಂದ ನಡೆದುಕೊಳ್ಳುತ್ತಿದ್ದಳು. ಅರಸನೂ ಕೂಡ ಯಾರಾದರೂ ಭಕ್ತರು ಬಂದೊಡನೆ ಎದ್ದು ಹೋಗಿ ಅವರನ್ನು ಆದರದಿಂದ ಸತ್ಕರಿಸಿ ಯೋಗ್ಯತೆಗೆ ತಕ್ಕಂತೆ ದಾನಮಾಡಿ ಕಳುಹಿಸುತ್ತಿದ್ದನು. ಇವನನ್ನು ಸಿಂಧು ಬಲ್ಲಾಳನೆಂದೂ ಕರೆಯುತ್ತಿದ್ದರು.

ಈ ರೀತಿ ವರ್ತಿಸುತ್ತಿರುವಾಗ ಇವನ ಕೀರ್ತಿಯು ಎಲ್ಲೆಡೆಗೂ ಹಬ್ಬಿತು. ಕರುಣಾನಿಧಿಯಾದ ಶಂಕರನಿಗೂ ಕೂಡಾ ಇವನನ್ನು ಪರೀಕ್ಷಿಸ ಬೇಕೆಂಬ ಇಚ್ಛೆಯುಂಟಾಗಿ ಸೌಂದರ್ಯದ ಖನಿಯಂತಿರುವ ತಪಸ್ವಿಯ ವೇಷ ತಳೆದು ಆ ನಗರಕ್ಕೆ ಬಂದನು. ಅವನ ಸೌಂದರ್ಯವನ್ನು ನೋಡಿ ಆ ಪುರದ ನಾರಿಯರು ಬೆರಗಾದರು. ಕೆಲವರಂತೂ ಇವನನ್ನು ಕಣ್ಣು ತುಂಬಾ ನೋಡದ ಹೆಣ್ಣಿನ ಜನ್ಮ ವ್ಯರ್ಥವೆಂದು ಬಗೆದರು. ಈ ರೀತಿಯಾಗಿ ಜನರು ನಾನಾ ಬಗೆಯಾಗಿ ಮಾತನಾಡುತ್ತಿದ್ದರೂ ಅತ್ತಕಡೆಗೆ ಲಕ್ಷವೀಯದೆ ಆ ತಪ ಸ್ವಿಯು ಅರಮನೆಯ ಕಡೆಗೆ ಬರಲು ಅವನೀಶನು ಅವನನ್ನು ನೋಡಿ ದೊಡನೆಯೇ ಒಂದು ಬಗೆಯ ತೃಪ್ತಿಯಾದಂತಾಯಿತು. ಕೂಡಲೇ ಅವನು ತಪಸ್ವಿಯನ್ನು ಆದರದಿಂದ ಕೈ ಹಿಡಿದು ಒಳಗೆ ಕರೆದು ಕೊಂಡು ಹೋಗಿ ಕಾಂಚನ ಪೀಠದಲ್ಲಿ ಕುಳ್ಳಿರಿಸಿ ಅವನ ಪಾದಗಳಿಗೆ

ಮಜ್ಜನಗೈದು ಆ ತೀರ್ಥವನ್ನು ತಲೆಯಲ್ಲಿ ಧರಿಸಿ ರಾಣಿವಾಸದ ಮಡದಿಯು ರನ್ನು ಕರೆಯಿಸಿ ಆರತಿಯನ್ನು ಎತ್ತಿಸಿ ಕೈಮುಗಿದುಕೊಂಡು ಅಂಜಲಿಬದ್ಧ ನಾಗಿ ನಿಂತುಕೊಂಡು, "ಶಿವಸ್ವರೂಪರೇ! ಸ್ನಾನ ಶಿವಾರ್ಚನೆಯನ್ನು ಪ್ರಸಾದವನ್ನು ಸ್ವೀಕರಿಸಬೇಕು" ಎಂದು ವಿನಯದಿಂದ ಕೇಳಿಕೊಂಡು ಮತ್ತೊಮ್ಮೆ ದಿವ್ಯಚರಣಗಳ ಮೇಲೆ ಮಸ್ತಕವನ್ನಿರಿಸಿದನು. ಆಗ ಆ ತಪ ಸ್ವಿಯು, "ಅರಸನೇ! ನೀನು ದಾನಿಯೆಂಬುದು ನನಗೂ ಗೊತ್ತು. ನಿಮ್ಮ ಮನೆಯಲ್ಲಿ ಪ್ರಸಾದವನ್ನು ಸ್ವೀಕರಿಸಲು ನಾನು ಬಂದಿಲ್ಲ. ಅಲ್ಲದೆ ನಾನು ಬೇಡಿದ ವಸ್ತುವನ್ನು ಕೊಡಲು ನಿನ್ನಿಂದ ಸಾಧ್ಯವೂ ಇಲ್ಲವೆಂದು ಹೇಳಲು ಸಿಂಧುಬಲ್ಲಾಳನು ಅತ್ಯಂತ ನಮ್ರನಾಗಿ, "ಸ್ವಾಮೀ! ತಾವು ಅಪ್ಪಣೆಯು ನ್ನಾದರೂ ಕೊಟ್ಟು ನೋಡಿರಿ" ಎಂದು ಬೇಡಿಕೊಂಡನು. ಆಗ ಆ ತಪ ಸ್ವಿಯು, "ಭೂಪತಿಯೇ! ನನಗೆ ನಿನ್ನ ಪಟ್ಟದರಾಣಿಯೂ, ಅತ್ಯಂತ ಸೌಂದರ್ಯವತಿಯೂ ಆದ ರತ್ನಾವತಿಯು ಬೇಕೆ"ನ್ನಲು ಅರಸನು ಕೊಂಚವೂ ವಿಚಲಿತನಾಗದೆ ಹಾಗೆಯೇ ಆಗಲೆಂದು ರತ್ನಾವತಿಯನ್ನು ತಪಸ್ವಿಯ ವಶಕ್ಕೊಪ್ಪಿಸಲು ಅವನು, "ನಾನು ನಿನ್ನ ಪತ್ನಿಯನ್ನು ಕರೆದೊ ಯ್ಯುತ್ತಿರವೆನೆಂಬ ಸಿಟ್ಟಿನಿಂದ ನನ್ನನ್ನು ಕೊಲ್ಲಬಹುದು. ಅದಕ್ಕಾಗಿ ನಮ್ಮಿರ್ವರನ್ನು ಊರ ಹೊರಮುಗ್ಗಲಿನ ವರೆಗೆ ಒಯ್ದು ಮುಟ್ಟಿಸು" ಎಂದು ಹೇಳಲು ಆರಸನು ಹಾಗೆಯೇ ಮಾಡಿದನು. ಓರ್ವ ಸನ್ಯಾಸಿಯು ಅರಸನ ಪತ್ನಿಯನ್ನು ಕರೆದೊಯ್ಯುತ್ತಿರುವದನ್ನು ಕಂಡು ಎಲ್ಲರೂ ಮರುಗಿದರು. ಆದರೆ ತುಟಿ ಅಲುಗಾಡಿಸುವ ಧೈರ್ಯ ಮಾತ್ರ ಯಾರಿಗೂ ಬರಲಿಲ್ಲ. ಆಗ ಶಂಕರನು ಅವನಲ್ಲಿಯ ಭಕ್ತಿಗೆ ಮೆಚ್ಚಿ ತನ್ನ ನಿಜರೂಪವನ್ನು ತೋರಿಸಿ ಸತಿಪತಿಗಳೀರ್ವರನ್ನೂ ಕೈಲಾಸಕ್ಕೆ ಕರೆದೊಯ್ದು ಅವರಿಗೆ ಅಮರವಾದ ಗಣಪದವಿಯನ್ನು ಅನುಗ್ರಹಿಸಿದನು.

ಮಡದಿಯನು ಮೇಶಂಗೆ ಕೊಡಲೊಯ್ಯುತಿರೆ ಕಂಡು ।<br>
ತಡೆಯ ಬಂಧುಗಳ ನಿರದಿಹಃಪಗೆಯಾಂಡ ।<br>
ರ ಡಿಗಳೆನಗೀಗೆ ಮುಕ್ತಿಯನು॥

—ಶ್ರೀ ನಿಜಗುಣ ಶಿವಯೋಗಿಗಳು.

# ೫೧. ಮೆರೆಮಿಂಡದೇವರು

ವಿಖ್ಯಾತವಾದ ಚೋಳಧರಿತ್ರಿಯಲ್ಲಿ ತಿರುವಾರೂರೆಂಬ ಪಟ್ಟಣವು ಭೂಸುರರಿಂದಲೂ, ಭಸ್ಮಪ್ರಿಯರಾದ ಶಿವನ ಭಕ್ತಸಮೂಹದಿಂದಲೂ, ಶಿವಾಲಯಗಳಿಂದಲೂ ಮೆರೆಯುತ್ತಿತ್ತು. ಅತ್ಯಂತ ಸಮೃದ್ಧಿಯಾದ ಆ ನಾಡಿನಲ್ಲಿ ಆಗಾಗ ಜಾತ್ರೆಗಳೂ ಜರಗುತ್ತಿದ್ದವು. ಅತ್ಯಂತ ಉಗ್ರವಾದ ಗಣಾಚಾರ ವ್ರತವನ್ನು ಕೈಕೊಂಡ ಮೆರೆಮಿಂಡದೇವನೂ ಅಲ್ಲಿಯೇ ವಾಸಿಸುತ್ತಿದ್ದನು.

ಒಂದು ಸಲ ತಿರುವಾರೂರಾಧಿಪತಿಯ ಜಾತ್ರೆಯು ಸಮೀಪಿಸಲು ಭಕ್ತಸಮೂಹವು ಹೆಚ್ಚಿನ ಸಂಖ್ಯೆಯಲ್ಲಿ ಅಲ್ಲಿಗೆ ಬರತೊಡಗಿತು. ಅದನ್ನು ಕಂಡು ಗಣಾಚಾರ ಪಟುವಾದ ಮೆರೆಮಿಂಡನು ಸಂತೋಷಪಡುತ್ತಿದ್ದನು. ಉತ್ಸವದ ದಿನ ಭಕ್ತರು ಸಂಭ್ರಮದಿಂದ ತೇರು ಎಳೆಯುವದು ನೋಡುತ್ತ ಆನಂದಪಡುತ್ತ ನಿಂತಿರುವಾಗ, ರೂಪ-ಯೌವನಗಳಿಂದ ಕಾಂತಿಯುತನಾದ ನಂಬಿಯಣ್ಣನೆಂಬ ಶೈವನು ಕುದುರೆಯಿಂದಿಳಿದು ಅಲ್ಲಿ ಕುಳಿತಿರುವ ಸದ್ಭಕ್ತರನ್ನು ಗಮನಿಸದೆ ಗರ್ಭಗುಡಿಯ ಕಡೆಗೆ ಹೋಗುವದನ್ನು ನೋಡಿ ಅವನಿಗೆ ಸಿಟ್ಟು ಬಂದು, "ಈ ರೀತಿ ಸೊಕ್ಕಿನಿಂದ ಹೋಗುತ್ತಿರುವ ಇವನು ಯಾರು?" ಎಂದು ಕೇಳಿದನು.

ಆಗ ಅಲ್ಲಿಯೇ ಕುಳಿತುಕೊಂಡಿದ್ದವರಲ್ಲೊಬ್ಬನು, "ಭಕ್ತಾ! ಇವನು ಶಿವನ ಪ್ರೀತಿಯ ಪುತ್ರನು. ಈಶ್ವರನು ಈತನಿಗೆ ದಿನಾಲು ಪಡಿಹೊನ್ನು ಕೊಟ್ಟು ರಕ್ಷಿಸುತ್ತಿದ್ದಾನೆ" ಎನ್ನಲು ಮೆರೆಮಿಂಡನು, "ಇಂಥ ಸೊಕ್ಕಿನವರಿಗೆ ಶಿವನು ಹೊನ್ನು ಕೊಡುತ್ತಾನೆಯೆ? ಇವನನ್ನು ಹೊಡೆಯಿರಿ ಹಿಡಿಯಿರಿ" ಎಂದು ಗಲಾಟೆಯೆಬ್ಬಿಸಿದನು. ಕೂಡಲೇ ಜನರೆಲ್ಲ ನಂಬಿಯಣ್ಣನನ್ನು ಮುತ್ತಿಕೊಳ್ಳಲು ಧಾವಿಸಲು ಅವನು ಗರ್ಭಗುಡಿಯೊಳಗೆ ಹೋಗಿ ಬಾಗಿಲಿಕ್ಕಿಕೊಂಡು ಶಿವಮೂರ್ತಿಯನ್ನು ಪ್ರಾರ್ಥಿಸಿ ಪರಿಸ್ಥಿತಿಯನ್ನು ವಿವರಿಸಿದನು.

ಆಗ ಶಂಕರನು ನಡಗುತ್ತ, "ವತ್ಸಾ ನೀನು ಈ ರೀತಿ ಸೊಕ್ಕಿನಿಂದ ಬರಬಾರದಾಗಿತ್ತು. ಶಿವಭಕ್ತರೆಂದರೆ ನಿನಗೆ ಕಣ್ಣಲ್ಲಿ ಕಾಣಿಸುವದಿಲ್ಲವೇ? ಅವರಿಗೂ ಕೂಡ ನನ್ನಷ್ಟೇ ಮರ್ಯಾದೆಯನ್ನು ಕೊಡಬೇಕು" ಎನ್ನಲು ನಂಬಿಯು, "ತಂದೆಯೇ! ನೀನೇ ಇಷ್ಟೊಂದು ಹೆದರಿದರೆ ನನ್ನ ಗತಿ ಯೇನು?'' ಎಂದನು. ಆಗ ಶಂಕರನು ಸದ್ಯದ ಸಮಯವೇ ಹಾಗೆ ಬಂದಿದೆ. ಈಗ ಇಲ್ಲಿಯ ಕೆವಾಕ್ಷದೊಳಗಿಂದ ಈರ್ವರೂ ಹೊರಗೆ ಹೋಗೋಣವೆಂದು ಹೇಳಿ ಹೊರಗೆ ಹೋಗಿ ಅವನಿಗೆ ಚನ್ನಾಗಿ ತಿಳಿಹೇಳಿ ಅನಂತರ ಜಂಗಮಾಕಾರದಿಂದ ಶಿವಾಲಯದ ಬಳಿ ಬಂದು ದೂರದಿಂದಲೇ ಮೆರೆ-ಮಿಂಡನನ್ನು ತೋರಿಸಿ ಅವನಿಗೆ ಶರಣಾಗತನಾಗೆಂದು ನಂಬಿಗೆ ಹೇಳಲು ಅವನು ಅದೇ ರೀತಿ ಮಾಡಿದನು.

ಆಗ ಮೆರೆಮಿಂಡನಿಗೆ ಪಶ್ಚಾತ್ತಾಪವಾಯಿತು. ಸಾಕ್ಷಾತ್ ಶಿವನ ಪುತ್ರನೆಂದು ತಿಳಿದುಬಂದರೂ ತಾನು ಆ ರೀತಿ ಜರಿದು ಮಾತನಾಡಿದ್ದು ಅಕ್ಷಮ್ಯ ಅಪರಾಧವಾಯಿತು. ಇನ್ನು ತಾನು ಜೀವಿಸಬಾರದು ಎಂದು ನಿರ್ಧರಿಸಿ ಟೊಂಕದಲ್ಲಿ ನೇತಾಡುತ್ತಿದ್ದ ಖಡ್ಗದಿಂದ ಶಿರವನ್ನು ಕತ್ತರಿಸಿ ಕೊಳ್ಳುವ ಸಿದ್ಧತೆಯಲ್ಲಿದ್ದಾಗ ಪರಮೇಶ್ವರನು ಅಲ್ಲಿಗೆ ಬಂದು ತನ್ನ ನಿಜ ರೂಪವನ್ನು ತೋರಿಸಲು ಆ ಭಕ್ತಶ್ರೇಷ್ಠನು ಅವನ ಪಾದಗಳಿಗೆರಗಿದನು. ಆಗ ಅವನನ್ನು ಆದರದಿಂದ ಮೇಲೆತ್ತಿ ಕೈಲಾಸಕ್ಕೆ ಕರೆದೊಯ್ದು ಗಣಪದ ವಿಯನ್ನು ಅನುಗ್ರಹಿಸಿದನು.

ಕರಿಗೊರಲ ನಾದೊಡರಿ ಮರೆದು ಶರಣರ್ಗೆ ಬಂ।
ದೆರಗದಿಹ ನಂಬಿಯೊಡಗೂಡಿ ಪೊರಗೆಂದ।
ಮೆರೆಮಿಂಡರೆನಗೆ ಶರಣಕ್ಕೆ ॥

—ಶ್ರೀ ನಿಜಗುಣ ಶಿವಯೋಗಿಗಳು.

## ೫೨. ಚಾರಮನು

ಚೇರಧರಿತ್ರಿಯೊಳು ಕರುಂಡಗನೂರೆಂಬ ಪಟ್ಟಣವು ಸಕಲ ಐಶ್ವರ್ಯದ ಆಗರವಾಗಿ ಚಾರಮನೆಂಬ ಶೈವ ಧೊರೆಯ ರಾಜಧಾನಿಯಾಗಿತು. ಚಾರಮನು ಮಹಾ ಶಿವಭಕ್ತನಾಗಿದ್ದನು. ಆತನು ದಿನಾಲು ತನಗೆ ಸಂತೋಷವಾಗುವಂತೆ ನಾನಾವಿಧವಾಗಿ ಶಿವಲಿಂಗ ಪೂಜೆಯನ್ನು ಮಾಡುತ್ತಿದ್ದನು. ಇವನ ಮೇಲೆ ಪ್ರೀತಿಗೊಂಡ ಶಂಕರನು ಇವನು ಪೂಜೆಮಾಡುವಾಗ ಗೆಜ್ಜೆಗಳ ಮಂಜುಳ ನಿನಾದಗೈಯ್ಯುತ್ತಿದ್ದನು. ಅದನ್ನು ಆಲಿಸಿ ಈ ನೃಪತಿಯು ಆನಂದತುಂದಿಲನಾಗುತ್ತಿದ್ದನು.

ಒಂದು ಸಲ ಇವನು ಪೂಜೆ ಮಾಡುವಾಗ ಗೆಜ್ಜೆಯ ಶಬ್ದವು ಬಾರದಿರಲು ಚಾರಮನು ವ್ಯಥೆಗೊಂಡು ''ದೇವಾ ನನ್ನಮೇಲೆ ಸಿಟ್ಟಾದೆಯಾ?'' ಎಂದು ಬೇಡಿಕೊಳ್ಳಲು ಕರುಣಾಕರನಾದ ಶಂಕರನು ಅಶರೀರವಾಣಿಯಿಂದ '' ಭಕ್ತಾ! ನೀನು ಅನ್ಯಥಾ ಭಾವಿಸಿಕೊಳ್ಳಬೇಡ. ತಿರುವಾನೂರಿನಲ್ಲಿ ಸೌಂದೆರನೆಂಬ ಭಕ್ತನಿರುವನು. ಅವನು ಇಂಪಾದ ತಿರುಪಾಡುಗಳನ್ನು ಹಾಡುತ್ತಿದ್ದುದರಿಂದ ನನ್ನ ಲಕ್ಷ್ಯ ಅತ್ತ ಕಡೆಗೆ ಹೋಗಿ, ನೀನು ಪೂಜೆಮಾಡುವ ಸಮಯ ಅಲಕ್ಷವಾಯಿತು. ಅದಕ್ಕೇ ಗೆಜ್ಜೆಯ ಸಪ್ಪಳವಾಗಲಿಲ್ಲ " ಎಂದನು.

ಅದನ್ನು ಕೇಳಿ ಚಾರಮನಿಗೆ ಅಚ್ಚರಿಯಾಯಿತು. ಸೌಂದರನ ತಿರುಪಾಡುಗಳನ್ನು ತಾನೂ ಆಲಿಸಬೇಕೆಂಬ ಉತ್ಕಟೇಚ್ಛೆಯುಂಟಾಗಿ ಯೋಗಿಯ ವೇಷವನ್ನು ಧರಿಸಿ ಸೌಂದರನ ನಗರಕ್ಕೆ ಬಂದನು. ಆ ಸಮಯದಲ್ಲಿ ಸೌಂದರನು ತಿರುವಾಂಕೂರೇಶ್ವರನ ಆಲಯದಲ್ಲಿ ಶಿವಸೇವೆಗೆ ಹೋಗಿರುವನೆಂದು ತಿಳಿದುಬರಲು ಅಲ್ಲಿಗೇ ಹೋಗಿ ಅವನನ್ನು ನೋಡಿ ಆನಂದಿಸಿದನು. ಮರುಕ್ಷಣವೇ ಅಂಥವನನ್ನು ಕಂಡು ನಮಸ್ಕರಿಸಲಿಲ್ಲವಲ್ಲ! ಎಂದು ಖೇದಪಟ್ಟುಅಲ್ಲಿಯೇ ಇದ್ದಗಿಡದಡಿಯಲ್ಲಿ ಮಲಗಿಕೊಳ್ಳಲು ಕನಸಿನಲ್ಲಿ ಶಂಕರನು ಬಂದು, '' ಚಾರಮನೇ! ನನ್ನ ತನುಜನಾದ

ಬಂಬಿಯು ಯಾವ ಕಾರ್ಯದಲ್ಲಿದ್ದರೂ ನೀನು ಅವನನ್ನು ವಂದಿಸು ” ಎಂದು ಹೇಳಿದಂತಾಗಲು ಆ ಭೂವರನು ಚಟಕ್ಕನೆ ಎದ್ದು ಕುಳಿತು ಸೌಂದರನ ಬಳಿಗೆ ಹೋಗಿ ವಂದಿಸಿದನು.

ಆಗ ಸೌಂದರನು ಅವನ ಕ್ಷೇಮವನ್ನು ಅವನು ಅರಸನೆಂಬದನ್ನೂ ತಿಳಿದುಕೊಂಡು ಅವನನ್ನು ಅತಿಯಾಗಿ ಸತ್ಕರಿಸಿ ತನ್ನ ಮನೋವಲ್ಲಭೆಯಾದ ಪರಿವಿನಾಚಿಯ ಮನೆಗೆ ಕರೆದೊಯ್ದು ಸ್ನಾನಭೋಜನಾದಿಗಳಿಂದ ತೃಪ್ತಿಪಡಿಸಿ ಶಿವಗೋಷ್ಟಿಯಲ್ಲಿಯೇ ರಾತ್ರಿಯನ್ನು ಕಳೆದನು. ಈ ರೀತಿಯಾಗಿ ಚಾರಮನು ಸೌಂದರ ಅತಿಥ್ಯದಲ್ಲಿ ಕೆಲವು ದಿನಗಳ ವರೆಗೆ ಇದ್ದುಕೊಂಡು ಕೊನೆಗೊಂದು ಸೌಂದರನನ್ನು ತನ್ನನಗರಕ್ಕೂ ಒಂದು ಸಲ ಬರಬೇಕೆಂದು ಬಿನ್ನವಿಸಿಕೊಂಡು ತನ್ನ ನಗರಕ್ಕೆ ಹೊರಟು ಹೋದನು.

ಮುಂದೆ ಕೆಲ ದಿನಗಳ ನಂತರ ಸೌಂದರನಂಬಿಯು ಚಾರಮನಿಗೆ ವಚನಕೊಟ್ಟಂತೆ ಒಂದು ದಿನ ಕುಡುಂಗನೂರಿಗೆ ಹೊರಟನು. ಈಶ್ವರನ ಸುತನು ತನ್ನ ನಗರಕ್ಕೆ ಆಗಮಿಸಲಿರುವ ಸಂಗತಿಯನ್ನು ಕೇಳಿ ಆನಂದಿತನಾದ ಚಾರಮನು ಪುರವನ್ನು ಸಿಂಗರಿಸಿ, ಚತುರಂಗಬಲದೊಡನೆ ಪಟ್ಟಣದ ಹೊರಗಡೆ ಹೋಗಿ ಅವನನ್ನು ಎದುರುಗೊಂಡು ಪಾದಗಳಿಗೆರಗಿ ಅತಿ ಮರ್ಯಾದೆಯಿಂದ ಊರೊಳಗೆ ಕರೆತಂದು ಅವನಿಗಾಗಿ ತೆರವುಮಾಡಿಸಿಟ್ಟಿದ್ದ ಸೌಧದಲ್ಲಿ ಸೌಂದರನಿಗೆ ಇಳಿದುಕೊಳ್ಳುವ ವ್ಯವಸ್ಥೆ ಮಾಡಿದನು.

ಚಾರಮನು ಶಿವಸುತನಾದ ಸೌಂದರನನ್ನುಕೆಲ ದಿನಗಳ ವರೆಗೆ ತನ್ನ ಬಳಿ ಇರಿಸಿಕೊಂಡು ನಾನಾರೀತಿಯಿಂದ ಸತ್ಕರಿಸಿದನು. ಒಂದು ದಿನ ಸೌಂದರನು ತಿರುವಂಜಕಳೇಶ್ವರ ದೇವಾಲಯಕ್ಕೆ ಹೋಗಿ ಪೂಜೆಯಲ್ಲಿ ಮಗ್ನನಾಗಿದ್ದಾಗ ಇಂದ್ರನು ಐರಾವತವನ್ನು ಕೊಟ್ಟು ಕಳುಹಿದನು. ಸೌಂದರನು ಅದನ್ನೇರಿ ಕುಳಿತುಕೊಳ್ಳಲು ಅದು ನಿಮಿಷಾರ್ಧದಲ್ಲೇ ಅಂತರಿಕ್ಷಕ್ಕೆ ಹಾರಿತು. ಅದನ್ನು ನೋಡಿದವರೆಲ್ಲರೂ ತುಂಬಾ ಅಚ್ಚರಿಗೊಂಡು ಆಕಾಶವನ್ನೇ ನೋಡುತ್ತ ನಿಂತುಕೊಂಡರು.

ಸೌಂದರನ ಮಂತ್ರಿಯಾದ ತುಂಬುರನೆಂಬವನಿಗೆ ತಾನು ಇಲ್ಲಿಯೇ ಉಳಿದುಕೊಂಡೆನಲ್ಲ ಎಂಬ ಹಳಹಳೆ ಪ್ರಾರಂಭವಾಗಿ ಚಾರಮನ ಬಳಿ ಬಂದು ನಡೆದ ಸಂಗತಿಯನ್ನೆಲ್ಲ ಅರುಹಿದನು. ಅದೇ ಆಗ ಸ್ನಾನಕ್ಕೆ

ಹೊರಟಿದ್ದ ಚಾರಮುನಿಗೆ ಉಂಬುರನ ಮಾತು ಕೇಳಿ ದುಃಖವಾಯಿತು. ಶಿವಸುತನು ತನಗೆ ಹೇಳದೆ ಹೋದನಲ್ಲ! ಎಂಬ ವ್ಯಥೆಯುಂಟಾಗಿ ಸೌಂದರನು ತನಗೆ ಕೊಟ್ಟಿದ್ದ ಅಶ್ವವನ್ನೇರಿ ತಾನು ಅಂತರಿಕ್ಷಕ್ಕೆ ಹಾರಿದನು. ವೇಗದಲ್ಲಿ ಗಾಳಿಯೊಂದಿಗೆ ಸ್ಪರ್ಧಿಸುವ ಆ ತೇಜಿಯು ಕೆಲವೇ ಸಮಯದಲ್ಲಿ ಸೌಂದರನ ಐರಾವತವನ್ನು ಕೂಡಿಕೊಂಡನು.

ಕೈಲಾಸದ ಮಹಾದ್ವಾರವು ಬಂದೊಡನೆ ಅವರೀರ್ವರೂ ಗಜ-ತುರಗಗಳಿಂದ ಕೆಳಗಿಳಿಯಲು ಕುರುಂಬನು ನಂದಿಧ್ವಜವನ್ನು ಎತ್ತಿಹಿಡಿದು ಅವರ ಮುಂದೆ ಹೊರಟನು. ಮೂವರೂ ಈ ರೀತಿ ಹೊರಟಿರಲು ಪ್ರವೇಶ ದ್ವಾರದ ಬಳಿ ನಂದಿಮಹಾಕಾಳಿರು ಚಾರಮುನನ್ನು ತಡೆದು, "ಚಾರ-ಮನೇ! ನಿನಗೆ ಉಪದೇಶವಿಲ್ಲದ್ದರಿಂದ ನೀನು ಒಳಗೆ ಹೋಗಲಾರಿ" ಎಂದು ನುಡಿಯಲು ಸೌಂದರನು, "ನೀನು ವ್ಯಥೆಪಡಬೇಡ ನಾನು ಒಳಗೆ ಹೋಗಿ ನಿನ್ನನ್ನು ಕರೆಯಿಸಿಕೊಳ್ಳುತ್ತೇನೆ" ಎಂದು ನುಡಿದು ಒಳಗೆ ಹೋಗಿ ಶಿವನಲ್ಲಿ ಅರಿಕೆ ಮಾಡಿಕೊಂಡನು.

ಆಗ ಶಿವನು ನಂದೀಶ್ವರನನ್ನು ಕರೆದು ಚಾರಮುನಿಗೆ ಉಪದೇಶ ಮಾಡುವಂತೆ ಆಜ್ಞಾಪಿಸಲು ಅವನು ಅದರಂತೆ ಚಾರಮುನಿಗೆ ಉಪದೇಶವನ್ನು ಮಾಡಿ ಶಿವನ ಒಡ್ಡೋಲಗದೊಳಗೆ ಕರೆತರಲು ಚಾರಮುನು ಅಲ್ಲಿಯ ಶೋಭೆಯನ್ನೂ ಜಗದ್ರಕ್ಷಕ ಸದಾಶಿವನನ್ನೂ ಕಣ್ಣು ತುಂಬಾ ನೋಡಿ ಇಂದಿಗೆ ನನ್ನ ಜನ್ಮ ಸಾರ್ಥಕವಾಯಿತು ಎಂದುಕೊಳ್ಳುತ್ತಿರಲು ಭಕ್ತ ಚಿಂತಾಮಣಿಯಾದ ಫಾಲನೇತ್ರನು ಅವನಿಗೆ ಗಣಪದವಿಯನ್ನಿತ್ತು ರಕ್ಷಿಸಿದನು.

ಪೇಳದೈದಲು ನಂಬಿ ಕೇಳಿ ಕೈಲಾಸಕ್ಕೆ ।
ದಾಳಿಯಿಟ್ಟ ತುಲಬಲ ಚಾರಮನ ಚರಣ ।
ದೂಳಿಗದ ಭಂಟನೆನಿಸುವೆನು ॥

—ಶ್ರೀ ನಿಜಗುಣ ಶಿವಯೋಗಿಗಳು.

# ೫೩. ಕಲಿಯನಾಯನಾರು

ಭಾರತದ ದಕ್ಷಿಣದಲ್ಲಿ ತಿರುವತ್ತೂರ ಎಂಬ ಪಟ್ಟಣವು ಭಗವದ್ಭಕ್ತರ ನಿವಾಸಸ್ಥಾನವೂ ಶಿವಾಲಯಗಳ ಬೀಡೂ, ಮಂಗಲದ ಆಗರವೂ ಆಗಿ ಸಕಲೈಶ್ವರ್ಯಗಳಿಂದ ಶೋಭಿಸುತ್ತಿತ್ತು. ಅಲ್ಲಿಯ ಶೈವರಲ್ಲಿ ಕಲಿನಾಯನಾರು ಎಂಬವನು ಬಹು ಸರಳ ಹೃದಯಿಯೂ, ಹಿಡಿದ ಛಲವನ್ನು ಬಿಡದವನೂ ಸತ್ಕಾರ್ಯಪ್ರೇಮಿಯೂ, ಪರಹಿತಕಾಂಕ್ಷಿಯೂ, ಗುರು—ಲಿಂಗ ಜಂಗಮರಲ್ಲಿ ನಿಷ್ಠೆಯುಳ್ಳವನೂ ಆಗಿದ್ದನು. ಶಿವನ ಕೃಪೆಯಿಂದ ಈತನು ಶ್ರೀಮಂತನಿದ್ದಂತೆ ನಿಗರ್ವಿಯೂ ಆಗಿದ್ದನು.

ದೀನ—ದಲಿತ ಹಾಗು ಪೀಡಿತರೇ ಮುಂತಾದ ಅಸಹಾಯರಿಗೂ ಶಿವಭಕ್ತರ ಸಮೂಹಕ್ಕೂ ಕೊಡುಗೈ ಧೊರೆಯಾಗಿದ್ದ ಕಲಿಯನಾಯನಾರು, ತಿರುವತ್ತೂರಿನ ದೇವಾಲಯಗಳಲ್ಲೆಲ್ಲ ಅತಿ ಪ್ರಸಿದ್ಧವಾದ ತಿರುವತ್ತೂರಾಧಿಪನ ಮಂದಿರಕ್ಕೆ ಪ್ರತಿನಿತ್ಯವೂ ಹೋಗಿ ಆ ಮಹಾದೇವನನ್ನು ಯಥಾವತ್ತಾಗಿ ಪೂಜಿಸಿ ಖಂಡಗ ಪ್ರಮಾಣದ ಎಣ್ಣೆಯಿಂದ ಅನೇಕ ಸಹಸ್ರ ದೀವಿಗೆಗಳಿಂದ ನೀರಾಜನವನ್ನು ತಪ್ಪದೇ ಬೆಳಗಿ ಶಿವಪೂಜಾನಂದ ವಿಕಸಿತನಾಗಿ ಕಾಲಕ್ಷೇಪ ಮಾಡುತ್ತಿರಲು ದಿಕ್‌ದಿಗಂತದವರೆಗೆ ಇವನ ಕೀರ್ತಿಯು ಗಾಳಿಯಂತೆ ಹಬ್ಬತೊಡಗಿತು.

ಈ ರೀತಿಯಾಗಿ ಕಲಿಯನಾಯನಾರನು ದಿನಂಪ್ರತಿ ಲಕ್ಷಗಟ್ಲೆ ನೀರಾಜನವನ್ನು ತಿರುವತ್ತೂರಾಧಿಪನಿಗೆ ಮಾಡುತ್ತಿರುವಂತೆ ಅರವತ್ತು ವರುಷಗಳು ಗತಿಸಿದವು. ಅವನ ವ್ರತವನ್ನು, ಭಕ್ತಿಯನ್ನು ಪರೀಕ್ಷಿಸಲೋಸುಗ ಶಿವಪ್ರೇರಣೆಯಿಂದ ಅವನಲ್ಲಿಯ ಧನವೆಲ್ಲ ತೀರಿಹೋಗಿ ಬಡತನ ಪ್ರಾಪ್ತವಾಯಿತು. ಆಗ ಅವನಿಗೆ ಮುಂದೇನು ಮಾಡಬೇಕೆಂಬ ಚಿಂತೆಯುಂಟಾಯಿತು. ತನ್ನ ನಿಲಯಕ್ಕೆ ಭಂಗ ಬರುವದಿಲ್ಲ! ಎಂದು ಉಸುರುಗರೆದನು. ತನ್ನ ಛಲವು ಪೂರೈಸದ ಹೊರ್ತು ಅನ್ನವನ್ನಾದರೂ ಹೇಗೆ ಸ್ವೀಕರಿಸಬೇಕೆಂಬ ಯೋಚನೆಯುಳ್ಳವನಾಗಿ ಐದು ದಿನಗಳವರೆಗೆ

ಉಪವಾಸವನ್ನು ಮಾಡಿದನು. ಅನಂತರ ಅವನಿಗೊಂದು ಯೋಚನೆಯು ಹೊಳೆಯಿತು.

ಆ ಯೋಚನೆಯು ತಲೆಯೊಳಗೆ ಬರುತ್ತಲೇ, ಆಹಾ ! ನಾನೆಂಥ ಅವಿವೇಕಿಯು, ಮೂಢನು, ಚಂದ್ರಧರನನ್ನು ನಿಶ್ಚಲನಾಗಿ ಪೂಜಿಸಿದ ಕಾರಣವಾಗಿಯೇ ನನಗೆ ಮೋಹವು ಆವರಿಸಿ ಭ್ರಮೆಯುಂಟಾಯಿತು. ಆತನ ಕೃಪಾಕಟಾಕ್ಷದಿಂದಲೇ ನನಗೆ ಈ ಯೋಚನೆಯು ಹೊಳೆದು ಒಳ್ಳೆಯದಾಯಿತು. ನನ್ನ ಶರೀರದಲ್ಲಿಯೇ ಅತ್ಯಂತ ಶ್ರೇಷ್ಠವಾದ ತೈಲವು ಇರುವಾಗ ಬೇರೆ ತೈಲಕ್ಕಾಗಿ ಏಕೆ ಆಶೆ ಪಡಬೇಕು ? ಈ ಐದು ದಿನಗಳು ನನ್ನ ಸ್ವಾಮಿಯೆದುರು ನೀರಾಜನವಿಲ್ಲದೆ ಹೋಯಿತಲ್ಲ. ನಾನೆಂಥ ಶಿವದ್ರೋಹಿಯು ? ಈಗಲಾದರೂ ನಾನು ಶೀಲವನ್ನು ಕಾಪಾಡಿಕೊಳ್ಳುತ್ತೇನೆ ಎಂದುಕೊಂಡು ಆನಂದಿತನಾದನು.

ಅನಂತರ ಅವನು ಶೀಘ್ರವಾಗಿ ಮಿಂದು ಶುಚಿರ್ಭೂತನಾಗಿ ಶಿವಾಲಯಕ್ಕೆ ಬಂದು ಮತ್ತೆ ಅಲ್ಲಿಯ ಬಾವಿಯಲ್ಲಿ ಸ್ನಾನಮಾಡಿ, ಭಸ್ಮ ಸ್ನಾನ-ಉದ್ಧೂಳನವನ್ನೂ ಮಾಡಿ, ಸರ್ವಾಂಗದಲ್ಲಿ ರಕ್ಷೆಯೆನ್ನಿಸುವಂಥ ವಿಭೂತಿಯನ್ನು ನಲುಮೆಯಿಂದ ಬಳೆದು, ಪವಿತ್ರವಾದ ರುದ್ರಾಕ್ಷಗಳನ್ನು ಕ್ರಮವಾಗಿ ಧರಿಸಿ ತನ್ನಲ್ಲಿಯ ನೈಜ ಭಕ್ತಿಯಿಂದ ಪರಮೇಶನನ್ನು ಪೂಜಿಸಿ ನಿತ್ಯಕ್ರಮದ ನೀರಾಜನಕ್ಕಾಗಿ ಖಡ್ಗವನ್ನು ತೆಗೆದುಕೊಂಡು ಮೂರ್ತಿಯೆದುರು ಒಂದು ಕೊಪ್ಪರಿಗೆಯನ್ನಿರಿಸಿ ಆ ದಯಾಸಿಂಧುವಿನ ಹೆಸರನ್ನೇ ಸ್ತುತಿಸುತ್ತ ಹದನಾದ ಅಲಗಿನಿಂದ ತನ್ನ ಅಂಗದಲ್ಲಿ ಒಂದು ರಂಧ್ರವನ್ನು ಮಾಡಿದನು.

ರಂಧ್ರದ್ವಾರದಿಂದ ಕೆಂಪು ತೈಲವು ಪ್ರವಹಿಸತೊಡಗಿತು. ಅವನಲ್ಲಿಯ ಶಿವಭಕ್ತಿಯ ಪ್ರಭಾವದಿಂದಲೋ ಅಥವ ಭಕ್ತರನ್ನು ಕಾಪಾಡುವ ಆ ಮಹಾಮಹಿನ ಕೃಪೆಯಿಂದಲೋ ನೀರಾಜನಕ್ಕೆ ಸಾಕಾಗುವಷ್ಟು ತೈಲವು ಹೊರಟಿತು. ಆಗ ಅವನು ನೀರಾಜನದ ಬತ್ತಿಗಳನ್ನೆಲ್ಲ ಕೊಪ್ಪರಿಗೆಯ ತೈಲದಲ್ಲಿ ಅದ್ದಿ ನೀರಾಜನವನ್ನು ಮಾಡಿ ತನ್ನ ಶೀಲವನ್ನು ಪೂರೈಸಿ ಭಗವಂತನನ್ನು ಕೊಂಡಾಡಿದನು.

ಆಗ ಪರಮಾತ್ಮನು ಇವನಲ್ಲಿಯ ಭಕ್ತಿಯ ಅತಿರೇಕತೆಗೆ ಮೆಚ್ಚಿ ತನ್ನ ನಿಜರೂಪವನ್ನು ತೋರಿಸಿ, ಅವನನ್ನು ಸಂತೈಸಿ ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ದಯಪಾಲಿಸಿದನು.

ಇಂದು ಧರನಿದರ ಸೊಡರಂದವಳಿವುತ್ತ ಮಿರ ।
ಲಂದು ನಿಜರುಧಿರ ವೆರದಚ್ಚ ಕಲಿಯನಾ ।
ರೊಂದಿಪುದೆನಗಂಡ ವರವನು ॥

—ಶ್ರೀ ನಿಜಗುಣ ಶಿವಯೋಗಿಗಳು.

## ೫೪. ಐಯಡಿಯರು

ಸಜ್ಜನರ ನಿವಾಸಸ್ಥಾನವಾಗಿಯೂ, ಶಿವಮಂದಿರಗಳ ಬೀಡಾಗಿಯೂ ಇರುವ ಚೋಳಮಂಡಲದಲ್ಲಿ ತಿರುವಣ್ಣೂರೆಂಬ ನಗರವು ಅತಿ ಪ್ರಸಿದ್ಧವಿದ್ದಿತು. ಅದು ಐಯಡಿಯನೆಂಬ ಭುವನೀಶನ ರಾಜಧಾನಿಯಾಗಿದ್ದಿತು. ಈ ಅರಸನು ಶಿವಜ್ಞಾನ ವಿಚಕ್ಷಣರಿಗೆ ಪ್ರಮಥಾಂಶ ಸಂಭೂತನೆಂದು ಗೋಚರವಾಗುತ್ತಿದ್ದಿತು. ಶಾಂತಿ, ಸಮಾಧಾನ, ಸ್ಥೈರಣೆ ಹಾಗು ಶಿವತೇಜಗಳು ಸಾಕ್ಷಾರವಾಗಿ ಆ ಭುವನೀಶನ ಮುಖಮಂಡಲದಲ್ಲಿ ಎದ್ದು ಕಾಣುತ್ತಿದ್ದವು. ಅವನು ಪ್ರಜರನ್ನು ಪುತ್ರವಾತ್ಸಲ್ಯದಿಂದ ಕಾಣುತ್ತ ಶಿವಪೂಜಾ ದುರಂಧರನಾಗಿ ರಾಜ್ಯವಾಳುತ್ತಿದ್ದನು.

ಈ ರೀತಿಯಾಗಿ ಐಯಡಿಯನು ಭೂಪತಿಯ ಸದ್ಧರ್ಮವನ್ನು ಕಾಯ್ದುಕೊಂಡು ಪ್ರಜಾರಂಜಕನಾಗಿ ಶಿವಪ್ರೀತಿಯನ್ನು ಸಂಪಾದಿಸುತ್ತಿರಲು ಅವನಿಗೆ ತನ್ನಲ್ಲಿಯ ಶುಭಕರ್ಮ ಕ್ರಿಯಾದಿಗಳಿಗನುಗುಣವಾಗಿ ಕಲ್ಯಾಣಕರವಾದ ಬಯಕೆಯೊಂದು ತಲೆದೋರಿತು. ಪ್ರಜಾಕೋಟಿಗೆಲ್ಲ ಹಿತಕರವಾಗುವಂತೆ ರಾಜ್ಯಭಾರವನ್ನು ನಡೆಯಿಸಲು ಬೇಕಾಗುವಷ್ಟನ್ನು ಇರಿಸಿ ಉಳಿದ ಹಣವನ್ನೆಲ್ಲ ಜೀರ್ಣಗೊಂಡ ಶಿವಾಲಯಗಳ ಉದ್ಧಾರ ಕಾರ್ಯವನ್ನು ಕೈಕೊಳ್ಳಬೇಕೆಂಬ ಯೋಚನೆಯು ಅವನ ಮನದಲ್ಲಿ ಮೂಡಿತು.

ಕೂಡಲೆ ಅವನು ಬೊಕ್ಕಸದ ಅಧಿಪತಿಗಳಿಗೆ ತನ್ನ ನಿರ್ಣಯವನ್ನು ತಿಳಿಸಿ ನಾಲ್ಕೂ ಕಡೆಗೂ ದೂತರನ್ನು ಬಿಟ್ಟು ಕುಶಲ ಶಿಲ್ಪಿಗಳನ್ನು ಕರೆಯಿಸಿಕೊಂಡು ಅವರೆಲ್ಲರಿಗೂ ಮೊದಲಿನಕಿಂತಲೂ ಹೆಚ್ಚು ಸುಂದರವಾದ ಶಿವಾಲಯಗಳನ್ನು ನಿರ್ಮಿಸಲು ಆಜ್ಞಾಪಿಸಿದನು. ಅಲ್ಲದೆ ಎಲ್ಲೆಲ್ಲಿ ಶಿವಪೂಜೆಗಳು ನಿಂತು ಹೋಗಿದ್ದವೋ ಅಲ್ಲಿ ಮತ್ತೆ ಪೂಜೆಯನ್ನು ಪ್ರಾರಂಭಿಸುವ ಏರ್ಪಾಡು ಮಾಡಿದನು. ಈ ರೀತಿಯಾಗಿ ಅವನು ಸತ್ಕೀರ್ತಿಯನ್ನು ಸಂಪಾದಿಸಿ ಶಿವಧರ್ಮ ದುರಂಧರನಾಗಿ ಆನಂದಭರಿತನಾಗಿದ್ದನು.

ಈ ರೀತಿಯಾಗಿ ದಿನಗಳುರುಳುತ್ತಿರಲು ಅವನ ಮನದಲ್ಲಿ ಸುವರ್ಣ ಮಯವಾದ ಶಿವಾಲಯವೊಂದನ್ನು ನಿರ್ಮಿಸಬೇಕೆಂಬ ಅಭಿಲಾಷೆಯು ಉತ್ಪನ್ನವಾಯಿತು. ಕೂಡಲೇ ಅವನು ಆ ಬಗ್ಗೆ ಪ್ರಯತ್ನಿಸಿ ತನ್ನ ಬಯಕೆಯನ್ನು ಕಾರ್ಯರೂಪದಲ್ಲಿ ತಂದುಬಿಟ್ಟನು. ಆ ದೇವಾಲಯದ ಸೌಂದರ್ಯವನ್ನು ನೋಡಿ ಬೆರಗಾಗಿ ಅದರ ರಮಣೀಯತೆಯನ್ನು ಕಂಡು ಹಿಗ್ಗುತ್ತ ಆ ಪ್ರಸಾದದ ಗೋಪುರದ ಪಕ್ಕದೊಳು ನಿಂತುಕೊಂಡು ತನಗಾದ ಸಂತೋಷದ ಭರದಲ್ಲಿ ತನ್ನ ದೃಷ್ಟಿಗೆ ಕಾಣುವಷ್ಟು ಗ್ರಾಮಗಳನ್ನೆಲ್ಲ ಶಿವಭಕ್ತರಿಗೆ ಪಾತ್ರವರಿತು ದಾನ ಮಾಡಿದನು.

ಈ ರೀತಿಯ ಸಂಭ್ರಮಾನಂದದ ಉತ್ಸಾಹದಿಂದ ಅವನು ಸ್ನಾನ ಮಾಡಿ ಅಲ್ಲಿಯ ಮಹಾಲಿಂಗದೆಡೆಯಲ್ಲಿ ಪದ್ಮಾಸನವನ್ನು ಹಾಕಿ ಅಷ್ಟವಿಧಾರ್ಚನೆ, ಷೋಡಶೋಪಚಾರಪೂರಕವಾಗಿ ಶಿವಮೂರ್ತಿಯನ್ನು ಪೂಜಿಸಿ ಪಂಚಾಕ್ಷರ ಮಹಾಮಂತ್ರವನ್ನು ಜಪಿಸಿ ಮತ್ತೆಮತ್ತೆ ಲಿಂಗಕ್ಕೆ ಕೈಮುಗಿದು ಪ್ರದಕ್ಷಿಣೆ ಹಾಕುತ್ತ ಶಿವಮಹಿಮೆಯನ್ನು ಕೊಂಡಾಡಿ ಶಿವನಾಮಗಳನ್ನು ಮಂಗಲಕರವಾಗಿ ಕೀರ್ತಿಸಿ ಶಿವಾನಂದದಲ್ಲಿ ಮಗ್ನನಾದನು.

ಐಯಡಿಯ ಭೂಪತಿಯ ಈ ತರವಾದ ಭಕ್ತಿಯನ್ನು ಕಂಡು ದಯಾಮಯನಾದ ವಿಶ್ವನಾಥನು ಕೂಡಲೇ ತನ್ನ ನಿಜರೂಪದಿಂದ ಪ್ರಕಟನಾದನು. ಆಗ ಐಯಡಿಯನು ಆ ದಿವ್ಯ ಪುರುಷನನ್ನು ಕಂಡು ಮೈಯುಬ್ಬಿ ಗದ್ಗದಕಂಠನಾಗಿ ಆತನ ಚರಣಕಮಲದಲ್ಲಿ ಮಸ್ತಕವನ್ನು ನೀಡಿ ಆನಂದದಿಂದ ಪರವಶನಾದನು. ಫಾಲನೇತ್ರನು ಭಕ್ತಶಿರೋಮಣಿಯನ್ನು ನಲುಮೆಯಿಂದ ಹಿಡಿದೆತ್ತಿ ಕುಳ್ಳಿರಿಸಿಕೊಂಡು ಆತನ ಮೈಮೇಲೆ ತನ್ನ ವರದ ಹಸ್ತವನ್ನಾಡಿಸಿ ನಿತ್ಯವಾದ ಗಣಪದವಿಯನ್ನು ದಯಪಾಲಿಸಿದನು.

ಪೊಡವಿ ತೀವಿರೆ ಶಿವನ ಗುಡಿಗಳಂ ರಚಿಸಿದೈ ।
ಯಡಿಯರಡಿ ದಾವರೆಗಳಂ ನೆನೆದು ಸುಖಂ ।
ಬಡುವೆ ನೆನ್ನಾತ್ಮ ದಣಿವಂತೆ ॥

-ಶ್ರೀ ನಿಜಗುಣ ಶಿವಯೋಗಿಗಳು.

## ೫೫. ಕುರುಂಬರು

ಚೋಳಮಂಡಲದಲ್ಲಿ ಪೆರಮುಳವಿಯೆಂಬ ನಗರವು ಶಿವಭಕ್ತರಿಂದ ರಂಜಿಸುತ್ತಿತ್ತು. ಕುರುಂಬನೆಂಬವನು ಆ ಪಟ್ಟಣದ ದೊರೆಯಾಗಿದ್ದನು. ಅವನು ಸದ್ಗುಣಿಯಾಗಿ ಭಕ್ತದೇಹಿಯಾಗಿ ಶೂಲಿಯನ್ನುಸೇವಿಸುತ್ತ ಧರ್ಮಕ್ಕೆ ಚ್ಯುತಿಬರವಂತೆ ರಾಜ್ಯಭಾರವನ್ನು ನಡೆಯಿಸಿಕೊಂಡು ಹೋಗುತ್ತಿದ್ದನು. ಈತನ ಪ್ರಜೆಗಳು ನಮ್ಮ ಧೊರೆಗೆ ಶಾಶ್ವತವಾದ ಯಶಸ್ಸುಂಟಾಗಲಿ ಎಂದು ಶಿವನಲ್ಲಿ ಮೊರೆಯಿಡುತ್ತಿದ್ದರು. ದಿನಗಳೆದಂತೆ ಕುರುಂಬನಿಗೆ ಸಂಸಾರದಲ್ಲಿ ವಿರಕ್ತಿಯುಂಟಾಗಿ ತನ್ನ ರಾಜ್ಯವನ್ನು ಜಾಣರ ವಶಕ್ಕೆ ಒಪ್ಪಿಸಿ, ಶಿವನನ್ನು ಮೆಚ್ಚಿಸಿದ ಸೌಂದರನನ್ನು ನೋಡಬೇಕೆಂಬ ಲವಲವಿಕೆಯಿಂದ ಕಾಲುಗಳಲ್ಲಿ ಬಂಗಾರದ ಗೆಜ್ಜೆಗಳನ್ನು ಕಟ್ಟಿಕೊಂಡು ಬಸವನ ಚಿತ್ರದಿಂದೆಸೆವ ಧ್ವಜವನ್ನು ಕೈಯಲ್ಲಿ ಹಿಡಿದುಕೊಂಡು, ತನ್ನ ಪರಿವಾರದೊಡನೆ ಅಲಂಕೃತನಾಗಿ ಗಜವನ್ನೇರಿಬರುತ್ತಿರುವ ಸೌಂದರನನ್ನು ಸಂಧಿಸಿ ಆತನ ಪಾದಗಳಿಗೆರಗಿದನು.

ಆಗ ಸೌಂದರನು ಅವನನ್ನು ಮೇಲಕ್ಕೆಬ್ಬಿಸಿ ನೀನು ಯಾರೆಂದು ಕೇಳಲು ತನ್ನ ವೃತ್ತಾಂತವನ್ನರುಹಿ, ಮುಂದೆಯೂ ನಿಮ್ಮ ಜತೆಯಲ್ಲಿಯೇ ಬಸವಾಂಕಿತ ಧ್ವಜವನ್ನು ಹಿಡಿದುಕೊಂಡು ಹೊರಡುವೆನೆಂದು ಹೇಳಲು ಸೌಂದರನು ಒಪ್ಪಿ ಅವನನ್ನು ತನ್ನ ಸಂಗಡ ಕರೆದುಕೊಂಡು ಹೊರಟನು. ಸೌಂದರನೊಂದಿಗೆ ಎಲ್ಲ ಕಡೆಗೂ ಸುತ್ತಾಡಿ ಶಿವಾಲಯಗಳ ದರ್ಶನಲಾಭವಿದೆಯೆಂದು ಭಾವಿಸಿದ ಕುರುಂಬನು ಅವನ ಬೆನ್ನುಬಿಡದೆ ಹೋದನು.

ಮುಂದೆ ಸೌಂದರನು ಚಾರಮನೊಂದಿಗೆ ಕೈಲಾಸಕ್ಕೆ ಹೊರಟಾಗ (ಈ ಸಂಗತಿಯನ್ನು ಹಿಂದೆಯೇ ಹೇಳಿರುವದರಿಂದ ಅದು ಇಲ್ಲಿ ಅಪ್ರಸ್ತುತ) ಕರುಂಬನು ಕೂಡ ಧ್ವಜವನ್ನು ಹಿಡಿದುಕೊಂಡು ಅವದ ಹಿಂದೆಯೇ ಆಕಾಶಕ್ಕೆ ಹಾರಿದನು. ಈ ರೀತಿಯಾಗಿ ಅವನು ಅವರೀರ್ವರೊಂದಿಗೆ ಕೈಲಾಸದ ಮಹಾದ್ವಾರವನ್ನು ತಲುಪಿದನು. (ಈ ಬಗೆಗೂ ಹಿಂದೆ ಹೇಳಲಾಗಿದೆ)

ಅನಂತರ ಕುರುಂಬನು ಶಿವನ ಒಡ್ಡೋಲಗದೊಳಗೆ ಕಾಲಿರಿಸಿದಾಗ ಅವನಿಗೆ ಅಪರಿಮಿತಾನಂದವಾಯಿತು. ಈ ಶಿವಭಕ್ತನನ್ನು ಶಂಕರನು ಅತ್ಯಂತ ನಲುಮೆಯಿಂದ ಆದರಿಸಿ ಅವಿರಳವಾದ ಬ್ರಹ್ಮಸ್ವರೂಪವನ್ನು ದಯಪಾಲಿಸಿದನು.

ನಂಬಿಯಣ್ಣನ ಮನದೊಳಿಂಬಾಗೆ ಮುಂದೆ ಗುಡಿ ।
ಯಂಬಿಡದೆ ಪಿಡಿದು ನಡೆದ ಪಿರುಮಳನಿ ಕು।
ರಂಬರೆಂ ಕೂರ್ತು ನಮಿಸುವೆನು ॥

—ಶ್ರೀ ನಿಜಗುಣ ಶಿವಯೋಗಿಗಳು.

# ೫೬. ಚಿರುತೊಂಡನು

ಶಿವಪೂಜಾ ದುರಂಧರರ ನಾಡಾದ ಚೋಳಮಂಡಲದಲ್ಲಿ ಕಾಂಚೀ ನಗರವು, ಶಿವಭಕ್ತರಿಂದಲೂ, ಭವ್ಯವಾದ ಶಿವಾಲಯಗಳಿಂದಲೂ, ಸದ್ಗುಣ ಸಂಪನ್ನರಿಂದಲೂ, ಸತ್ಶೀಲ ವ್ಯಾಪಾರಸ್ಥರಿಂದಲೂ ಪರಿಶೋಭಿಸುತ್ತಿದ್ದಿತು. ಆ ನಗರದಲ್ಲಿ ಚಿರುತೊಂಡನೆಂಬ ವೈಶ್ಯನು ವಾಸಿಸುತ್ತಿದ್ದನು. ಇವನ ಉದ್ಯೋಗವು ವ್ಯಾಪಾರವಾದರೂ ಈತನು ಮಹಾ ಶಿವಭಕ್ತನಾಗಿದ್ದನು. ಗುರು–ಲಿಂಗಗಜಂಗಮರಲ್ಲಿ ಈತನಿಗೆ ಮಹಾ ಭಕ್ತಿಯಿದ್ದಿತು. ಶಿವನ ದಯೆಯಿಂದ ಇವನ ಮನೆಯಲ್ಲಿ ಲಕ್ಷ್ಮಿಯು ಕಾಲು ಮುರಿದುಕೊಂಡು ಬಿದ್ದಿದ್ದರೂ ಈತನಿಗೆ ಗರ್ವವೆಂಬುದು ಗೊತ್ತಿರಲಿಲ್ಲ. ಸದಾ ಹಸನ್ಮುಖಿಯಾಗಿ ಜಂಗಮರನ್ನು ಸಾಕ್ಷಾತ್ ಶಿವಸ್ವರೂಪವೆಂದು ಭಾವಿಸಿ, ಅವರನ್ನು ಕರೆತಂದು ಆದರೋಪಚಾರಗಳಿಂದ ಸತ್ಕರಿಸಿ ಅನಂತರ ತಾನು ಊಟ ಮಾಡುತ್ತಿದ್ದನು. ಇದು ಅವನ ನಿತ್ಯದ ಕಾಯಕವಾಗಿತ್ತು.

ಐಶ್ವರ್ಯದಲ್ಲಿ ಚೋಳರಾಜನ ಸರಿಸಮಾನನೆನಿಸಿದ ಈತನಿಗೆ ಸಿರಿಯಾಳನೆಂದೂ ಕರೆಯುತ್ತಿದ್ದರು. ಪರಮಪತಿವ್ರತೆಯೂ, ಶಿವಭಕ್ತೆಯೂ ಆದ ಚಂಗಳೆಯು ಈತನಿಗೆ ತಕ್ಕ ಪತ್ನಿಯಾಗಿದ್ದಳು. ಪತಿಯ ಕಾರ್ಯದಲ್ಲಿ ನೆರವಾಗುವದೆಂದರೆ ಈ ಸಾಧ್ವಿಗೆ ಅತ್ಯಂತ ಆನಂದವಾಗುತ್ತಿದ್ದಿತು. ತನಗನುಕೂಲೆಯಾದ ಪತ್ನಿ, ಸರಳವಾದ ವ್ಯಾಪಾರ ಇವುಗಳಿಂದ ಪರಿಪ್ಲುತನಾದ ಸಿರಿಯಾಳನು ಇನ್ನೇನನ್ನೂ ಬಯಸದೆ ಸದಾ ಗುರು-ಲಿಂಗ-ಜಂಗಮರ ಸೇವೆಯಲ್ಲಿ ನಿರತನಾಗಿ,ಅವರಿಗೆ ಯಥೋಜಿತ ಉಡುಗೊರೆಗಳನ್ನಿತ್ತು ಸತ್ಕರಿಸಿ ಪುಣ್ಯಸಂಚಯ ಮಾಡಿಕೊಳ್ಳುತ್ತ ಕಾಲ ಕಳೆಯುತ್ತಿದ್ದನು.

ಚಿರುತೊಂಡನು ಇಂತಹ ಶಿವಭಕ್ತನಾಗಿದ್ದರೂ ಅವನಿಗೆ ಸಂತಾನವಿರಲಿಲ್ಲ. ಅವನ ಪತ್ನಿ ಚಂಗಳೆಗೆ ಯಾವಾಗಲೂ ಇದೊಂದೇ ಚಿಂತೆಯು ಕಾಡುತ್ತಿತ್ತು. ಒಂದು ಸಲವಂತೂ ಅದೇ ಚಿಂತೆಯಲ್ಲಿ ಕಣ್ಣೀರು ಸುರಿಸುತ್ತ ಕುಳಿತಿರುವಾಗ ಚಿರುತೊಂಡನು ಅಲ್ಲಿಗೆ ಬಂದು ತನ್ನ ಪತ್ನಿಯ ಕಣ್ಣಲ್ಲಿ

ನೀರನ್ನು ಕಂಡು ಅಚ್ಚರಿಯಿಂದ, "ಸಾಧ್ವಿಮಣಿಯೇ! ಎಂದಿಲ್ಲದ ದುಃಖವು ಇಂದು ನಿನ್ನನ್ನೇಕೆ ಆವರಿಸಿದೆ? ನಿನಗೆ ಯಾವುದರ ಕೊರತೆಯೆಂದು ಈ ರೀತಿ ಪರಿತಪಿಸುತ್ತಿರುವೆ?" ಎಂದು ಕೇಳಿದನು.

ಪತಿಯ ಮಾತುಗಳನ್ನು ಕೇಳಿ ಚಂಗಳೆಗೆ ಇನ್ನಿಷ್ಟು ದುಃಖವಾಯಿತು. ಆದರೂ ಅವಳು ತನ್ನ ದುಃಖವನ್ನು ನುಂಗಿಕೊಂಡು, "ಪತಿದೇವಾ! ನನಗೆ ಇನ್ನಾವ ಚಿಂತೆಯೂ ಇಲ್ಲ. ಧನ-ಕನಕ ಎಲ್ಲವೂ ಇದೆ. ಆದರೆ ಪುತ್ರ ಸಂತಾನವು ಮಾತ್ರ ಇಲ್ಲ. ಅದೇ ನನ್ನ ಹೃದಯವನ್ನು ಕೊರೆಯುತ್ತಿದೆ. ಅಲ್ಲದೆ ಮಕ್ಕಳಿಲ್ಲದ ಮನೆಯು ದೇವರಿಲ್ಲದ ಮಂದಿರದಂತೆ ಶೂನ್ಯ. ನಕ್ಕೆಯಿಂದ ಮಗುವನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಮುದಾಡುವದರಿಂದಾಗುವ ಆನಂದವನ್ನು ಶಿವಾರ್ಪಣ ಮಾಡುವ ಹೆಣ್ಣಿನ ಜನ್ಮವೇ ಸಾರ್ಥಕ. ನನ್ನ ಬಾಳೂ ಒಂದು ಬಾಳೇ?" ಎಂದು ಗೋಳಿಟ್ಟಳು.

ಚಂಗಳೆಯ ಮಾತುಗಳು ಚಿರುತೊಂಡನಿಗೂ ಸರಿಯೆನ್ನಿಸಿದವು. ಆಗ ಅವನು ಪತ್ನಿಯನ್ನು ಸಾಂತ್ವನಗೊಳಿಸಿ ಈರ್ವರೂ ಶಿವಾಲಯಕ್ಕೆ ಹೋಗಿ ದೇವದೇವನಾದ ಮಹಾದೇವನನ್ನು ಪ್ರಾರ್ಥಿಸಿ ತನಗೊಂದು ಮಗುವನ್ನು ದಯಪಾಲಿಸಬೇಕೆಂದು ಬೇಡಿಕೊಳ್ಳಲು ಸಾಂಬನು ಪ್ರತ್ಯಕ್ಷನಾಗಿ ಒಂದು ಫಲವನ್ನಿತ್ತು ಅಂತರ್ಧಾನನಾದನು. ಆನಂದಭರಿತರಾದ ದಂಪತಿಗಳು ಆ ಫಲವನ್ನು ತೆಗೆದುಕೊಂಡು ಬಂದು ಅದನ್ನು ಅತ್ಯಂತ ಪ್ರೀತಿಯಿಂದ ಸೇವಿಸಿದರು. ದಿನಗಳೆವಂತೆ ಸಾಧ್ವಿಮಣಿ ಚಂಗಳೆಯು ಗರ್ಭವತಿಯಾದಳು. ಆಗಲಂತೂ ಅವರಿಗೆ ಎಲ್ಲಿಲ್ಲದ ಸಂತೋಷವಾಯಿತು.

ಈ ರೀತಿಯ ಸಂತೋಷವು ಅವನ ಕಾಯಕಕ್ಕೆ ಅಡ್ಡಿಯನ್ನುಂಟು ಮಾಡುವದರ ಬದಲು ಅದರಲ್ಲಿಯ ಆಸಕ್ತಿ ಇನ್ನೂ ಹೆಚ್ಚಾಯಿತು. ಗುರು-ಲಿಂಗ-ಜಂಗಮರಲ್ಲಿಯ ವಿಶ್ವಾಸ ಮತ್ತಿಷ್ಟು ದೃಢವಾಯಿತು. ಮುಂದೆ ನವಮಾಸಗಳು ತುಂಬಿದ ನಂತರ ಚಂಗಳೆಯು ಪುತ್ರರತ್ನವನ್ನು ಹೆತ್ತಳು. ಪುತ್ರಜನನದ ಸಂತೋಷದಲ್ಲಿ ಚಿರುತೊಂಡನು ಶಿವಲಿಂಗದೆದುರು ಕುಣಿದಾಡಿ ಬಿಟ್ಟನು.

ಮಗುವಿಗೆ ಚಿಲಾಳನೆಂದು ನಾಮಕರಣ ಮಾಡಿದರು. ಶಿವಪ್ರಸಾದದಿಂದ ಹುಟ್ಟಿದ ಆ ಮಗುವು ಬಿದಿಗೆಯ ಚಂದ್ರನಂತೆ ದಿನದಿನಕ್ಕೆ ಬೆಳೆಯು

ತೊಡಗಿತು. ಚಂಗಳೆಗೆ ಆ ಮಗುವಿನೊಂದಿಗೆ ಸಂತಸದಿಂದ ಕಾಲಕಳೆಯಲು ಹಗಲು ರಾತ್ರಿಗಳು ಸಾಲುತ್ತಿರಲಿಲ್ಲ. ಅವಳು ಮಗುವಿನಲ್ಲಿ ತಾನು ಪಡೆಯುವ ಆನಂದವನ್ನು ಶಿವಾರ್ಪಣ ಮಾಡುತ್ತಿದ್ದಳು. ಈ ರೀತಿಯಾಗಿ ದಿನಗಳು ಉರುಳತೊಡಗಿದವು. ತನ್ನ ಕಾಯಕದಲ್ಲಿ ಚಿರುತೊಂಡನು ಕೂಡ ಯಾವ ಕೊರತೆಯಾಗದಂತೆ ನೋಡಿಕೊಂಡು ಹೋಗುತ್ತಿದ್ದನು. ಹೀಗಾಗಿ ಅವನ ಖ್ಯಾತಿಯು ಎಲ್ಲೆಡೆಗೂ ಹಬ್ಬಿತು.

ಕರುಣಾಮಯಿಯೂ, ಭಕ್ತವತ್ಸಲನೂ ಆದ ಗಿರಿಜಾಪತಿಗೆ ಚಿರುತೊಂಡನನ್ನು ಪರೀಕ್ಷಿಸಬೇಕೆಂಬ ಇಚ್ಛೆಯುಂಟಾಯಿತು. ಕೂಡಲೇ ಕಾಪಾಲಿಕನ ವೇಷವನ್ನು ಧರಿಸಿ ಭೂಮಿಗೆ ಬಂದನು. ಅದರ ಪ್ರತೀಕವೆಂಬಂತೆ ಚಿರುತೊಂಡನಿಗೆ ಎರಡು ದಿನಗಳಿಂದಲೂ ಜಂಗಮರು ಸಿಗದೆ ನಿರಾಹಾರದಿಂದಿದ್ದನು. ಮೂರನೆಯ ದಿನ ಕಾಪಾಲಿಕನನ್ನು ಕಂಡು ಚಿರುತೊಂಡನಿಗೆ ಅತೀವ ಆನಂದವಾಯಿತು. ಕೂಡಲೇ ಅವನು ಕಾಪಾಲಿಕರೂಪಿಯಾದ ಶಿವನ ಪಾದಗಳಿಗೆರಗಿ, ''ಮಹಾಸ್ವಾಮಿ ! ನನ್ನ ಮನೆಗೆ ಬಂದು ಆತಿಥ್ಯವನ್ನು ಸ್ವೀಕರಿಸಬೇಕು'' ಎಂದು ಬೇಡಿಕೊಂಡನು. ಆಗ ಕಾಪಾಲಿಕ (ಭೈರವ)ನು ಗಂಭೀರನಾಗಿ, ''ಸಿರಿಯಾಳಾ ! ನೀನು ದಾನಿಯೆಂಬುದೂ, ಮಹಾ ಶಿವಭಕ್ತನೆಂಬುದೂ ನನಗೆ ಗೊತ್ತು. ಆದರೆ ನನ್ನನ್ನು ಮನೆಗೆ ಕರೆದೊಯ್ಯುವದು ನಿನ್ನಿಂದ ಸಾಧ್ಯವಿಲ್ಲ. ಏಕೆಂದರೆ ನನ್ನ ವ್ರತವೇ ಹಾಗಿರುವದು. ಅದಕ್ಕಾಗಿ ನೀನು ಸುಮ್ಮನೆ ಹೋಗಿಬಿಡು'' ಎಂದನು. ಅದನ್ನು ಕೇಳಿ ಸಿರಿಯಾಳನು ಅವನಿಗೆ ಪ್ರಾರ್ಥಿಸುತ್ತ,''ದಯವಿಟ್ಟು ಅಂಥ ಮಾತುಗಳನ್ನಾಡಬೇಡಿ. ತಮ್ಮ ವ್ರತವು ಎಂಥದಿದ್ದರೂ ನಡೆಯಿಸಿಕೊಡಲು ನಾನು ಸಿದ್ಧನಿದ್ದೇನೆ. ತಾವು ನನ್ನ ಮನೆಯವರೆಗೆ ಬರುವ ಕೃಪೆಯಾಗಬೇಕು" ಎನ್ನಲು ಕಾಪಾಲಿಕನು, ''ಸಿರಿಯಾಳಾ ! ನೀನು ಇಷ್ಟೊಂದು ಬಲಾತ್ಕಾರ ಮಾಡುವಿಯೆಂದಾಗ ಬರುತ್ತೇನೆ. ಆದರೆ ನನ್ನ ವ್ರತವನ್ನೂ ಕೇಳಿಕೋ. ನಾನು ಆರು ತಿಂಗಳಿಗೊಂದು ಸಲ ಊಟ ಮಾಡತಕ್ಕವನು. ಆಗಲೂ ಕೂಡ ಭಕ್ತನಾದವನು ತನ್ನ ಮಗನ ಕತ್ತನ್ನು ಕತ್ತರಿಸಿ ಆ ಮಾಂಸವನ್ನು ಬೇಯಿಸಿ ಹಾಕಿದರೆ ನಾನು ಊಟ ಮಾಡುತ್ತೇನೆ. ಇದಕ್ಕೆ ನಿನ್ನ ಪತ್ನಿ ಪುತ್ರರು ಸಿದ್ಧರಿರುವರೋ ಕೇಳಿಕೊಂಡು

ಬಾ ” ಎಂದನು.

ಆಗ ಸಿರಿಯಾಳನು ಮನೆಗೆ ಬಂದು ತನ್ನ ಪತ್ನಿಯನ್ನು ವಿಚಾರಿಸಲು ಆ ಸಾಧ್ವಿಯು “ಶಿವನಿಂದ ದೊರೆತ ಫಲವು ಶಿವನಿಗೇ ಅರ್ಪಿತವಾಗುವಾಗ ನಾನೇಕೆ ಬೇಡವೆನ್ನಲಿ?” ಎಂದಳು. ಮಗನು ಕೂಡ ಎಂದಾದರೊಂದು ದಿನ ಮಣ್ಣುಪಾಲಾಗುವ ಈ ದೇಹವು ಶಿವಾರ್ಪಿತವಾಗುವ ಸಮಯ ಬಂದಾಗ ನಾನು ಬೇಡವೆನ್ನುವನೇ?” ಎಂದನು. ಹರ್ಷಿತನಾದ ಸಿರಿಯಾಳನು, ಭೈರವನ ಬಳಿ ಹೋಗಿ ಮನೆಗೆ ಬರಲು ಬಿನ್ನವಿಸಲು ಅವನೂ ಒಪ್ಪಿಕೊಂಡನು.

ಸತಿ-ಪತಿಗಳು ಕೂಡಿ ಮಗನ ಕತ್ತನ್ನು ಕತ್ತರಿಸಿ ಅಡುಗೆಯನ್ನು ಮಾಡಿದರು. ಭೈರವನು ಬಂದು ಊಟಕ್ಕೆ ಕುಳಿತುಕೊಂಡು, “ ಸಿರಿಯಾಳಾ! ನಿನ್ನ ಮಗನನ್ನೂ ಊಟಕ್ಕೆ ಕರೆ” ಎಂದನು. ಸಿರಿಯಾಳನು ಕೂಡ ಅದೇ ಮಾತನ್ನು ತನ್ನ ಪತ್ನಿಗೆ ಹೇಳಲು ಆಗ ಚಂಗಳೆಯು,“ಮಗು ಚಿಲಾಳಾ! ಶಿವಸ್ವರೂಪಿ ಭೈರವರು ಕರೆಯುತ್ತಿದ್ದಾರೆ. ಬಾರಪ್ಪಾ!” ಎಂದು ಕೂಗಿದಳು.

“ಬಂದೆನಮ್ಮಾ!” ಎನ್ನುತ್ತ ಚಿಲಾಳನು ಹೊರಬಾಗಿಲಿನೊಳಗಿಂದ ಓಡಿ ಬಂದನು. ಇತ್ತ ತಾಟನೊಳಗೆ ಬಡಿಸಿದ ಮಾಂಸವು ಮಾಯವಾಗಿತ್ತು. ಸತಿ-ಪತಿಗಳಲ್ಲಿಯ ಶಿವಭಕ್ತಿಗೆ ಮೆಚ್ಚಿದ ಶಂಕರನು ಅವರಿಗೆ ತನ್ನ ನಿಜರೂಪವನ್ನು ತೋರಿಸಿ ಅವರನ್ನು ಕೈಲಾಸಕ್ಕೆ ಕರೆದೊಯ್ದು ಅಮರವಾದ ಗಣಪದವಿಯನ್ನು ದಯಪಾಲಿಸಿದನು.

ವರಕುಮಾರನ ಶಿರವನರಿದಿಟ್ಟು ಸವಿಮಾಡಿ।
ಹರನಿಗುಣಲಿಟ್ಟ ಚಿರುತೊಂಡರಣುಗನು।
ಗಿರುತಿರ್ಪ ನಚ್ಚಿ ಸುಖಿಯಾಗಿ॥

—ಶ್ರೀ ನಿಜಗುಣ ಶಿವಯೋಗಿಗಳು.

# ೫೭. ಅತಿಭಕ್ತನು

ನಯನಮನೋಹರವಾದ ಚೋಳಧರಿತ್ರಿಯಲ್ಲಿ ತಿರುವಣ್ಣಾವೆಂಬ ಹೊಳೆಯ ದಡದೊಳಗೆ ಹೊಳೆಯ ಹೆಸರಿನದೇ ಒಂದು ಪಟ್ಟಣವು ಇದ್ದಿತು. ಅಲ್ಲಿಯ ಒಂದು ಬೆಸ್ತರ ಕುಂಟುಂಬದಲ್ಲಿ ಅತಿಭಕ್ತನೆಂಬ ಶಿವಭಕ್ತನು ಜನ್ಮವೆತ್ತಿದನು. ತನ್ನ ಸಂಸಾರವು ಸರಳವಾಗಿ ಸಾಗುವದಕ್ಕೂ ತನ್ನ ಹಿತವನ್ನು ಬಯಸುವ ಪೂಜ್ಯರ ಕಾರ್ಯಗಳು ಸಾಂಗವಾಗಿ ನೆರವೇರುವದಕ್ಕೂ ಯಾವುದೇ ರೂಪದಿಂದ ಅಂದರೆ, ಧನ, ಧಾನ್ಯ, ವಸ್ತ್ರ ಯಾವುದೇ ಪ್ರತಿಫಲವನ್ನು ಪಡೆಯುವದಕ್ಕೆ ಕೈಕೊಳ್ಳುವ ಮಾರ್ಗಕ್ಕೆ ಕಾಯಕವೆಂದು ಹೆಸರು. ಎಂಥದೇ ಕಾಯಕವನ್ನವಲಂಬಿಸಿದರೂ, ಅದರಲ್ಲಿ ಸಮಯೋಚಿತ ಬುದ್ಧಿಯನ್ನು ದಕ್ಷತೆಯನ್ನು ವಹಿಸುತ್ತ ಪರಮಾತ್ಮನಲ್ಲಿಯೂ, ವಂದ್ಯರಾದ ಭಕ್ತರಲ್ಲಿಯೂ, ನಲುಮೆಯನ್ನು ತಳೆದು ಸಂಸಾರವನ್ನು ಸಾಗಿಸಿದರೆ ಅದರಲ್ಲಿ ಸದ್ಗತಿ ದೊರಕುವದು ಖಂಡಿತ. ಅದಕ್ಕೆ ಜಾತಿ-ಪಂಥಗಳ ಭೇದವಿಲ್ಲ.

ಮೀನ ಹಿಡಿದು ಅವುಗಳನ್ನು ಮಾರಿ ಉಪಜೀವಿಸುವಂಥ ಬೆಸ್ತರ ಕುಲದಲ್ಲಿ ಹುಟ್ಟಿದ ಅತಿಭಕ್ತನಲ್ಲಿ ಹೀನ ಕುಲವೊಂದರ ಹೊರ್ತಾಗಿ ಉಳಿದೆಲ್ಲ ಸದ್ಗುಣಗಳು ಅವನಲ್ಲಿ ಮನೆಮಾಡಿಕೊಂಡಿದ್ದವು. ಅವನು ಮೀನಗಾರನಾಗಿದ್ದರೂ, ಇನ್ನುಳಿದ ಪ್ರಾಣಿಗಳಲ್ಲಿ ದಯಾಪರನಾಗಿದ್ದನು. ಶಿವಭಕ್ತರನ್ನು ಅತಿ ಆದರದಿಂದ ಕಾಣುತ್ತಿದ್ದ ಅವನ ಮನವು ಸತ್ಪಾತ್ರದೆಡೆಗೂ ಎಳೆಯುತ್ತಿತ್ತು. ತನ್ನ ಕಾಯಕದಿಂದ ಬಂದ ಹಣವನ್ನು ಶಿವಭಕ್ತರಿಗೆ ತನ್ನ ಶಕ್ತಿ ಮೀರಿ ಕೊಡುತ್ತ, ಜಂಗಮಪ್ರೇಮಿಯಾಗಿ ಶಿವಾನಂದಪರನಾಗಿ ಕಾಲಕಳೆಯುತ್ತಿದ್ದನು.

ಅವನು ತಟಾಕಕ್ಕೆ ಹೋದೊಡನೆ ಮೊದಲ ಸಲ ಸಿಕ್ಕುವ ಮೀನವು ಶಿವಾರ್ಪಣವೆಂದು ಅದನ್ನು ಬಿಟ್ಟುಬಿಡುತ್ತಿದ್ದನು. ಇದು ಅವನ ನಿತ್ಯದ ನಿಯಮವಾಗಿತ್ತು. ಅದು ಎಷ್ಟು ದೊಡ್ಡ ಮೀನು ಸಿಕ್ಕಿದರೂ, ಅದನ್ನು

ಬಿಟ್ಟುಬಿಡುತ್ತಿದ್ದನು. ಹೀಗಿರಲೊಂದು ದಿನ ಬೆಳಿಗ್ಗೆ ಅವನು ಶಿವಧ್ಯಾನ ಮಾಡುತ್ತ ತನ್ನ ಸಲಕರಣೆಗಳೊಂದಿಗೆ ಜಲಾಶಯದ ಕಡೆಗೆ ಹೋಗುತ್ತಿರುವಾಗ ಅವನಿಗೆ ಮಾರ್ಗದಲ್ಲಿ ಅನೇಕ ಶುಭ ಸಂಕೇತಗಳಾದವು. ಅವುಗಳನ್ನು ಗಮನಿಸಿದ ಅವನಿಗೆ ಅತಿ ಆನಂದವಾಗಿ ಲಗುಬಗೆಯಿಂದ ಜಲಾಶಯವನ್ನು ತಲುಪಿದನು.

ಅನಂತರ ಅವನು ವಾಡಿಕೆಯಂತೆ ತಟಾಕದ ದಂಡೆಯಲ್ಲಿ ನಿಂತುಕೊಂಡು ಶಿವಧ್ಯಾನ ಮಾಡಿ ಗಾಳವನ್ನು ನೀರೊಳಗೆ ಬೀಸಿ ನಿಂತುಕೊಂಡನು. ಗಾಳವನ್ನು ಬೀಸಿ ಎರಡು ನಿಮಿಷಗಳೂ ಕಳೆದಿರಲಿಲ್ಲ, ಆಗಲೇ ದಾರವು ಅಲುಗಾಡತೊಡಗಿತು. ಆಗ ಅವನು ಸಾವಕಾಶವಾಗಿ ಅದನ್ನು ಮೇಲಕ್ಕೆ ಜಗ್ಗಲು ಸುವರ್ಣಮಯವಾದ ಬಹುಬೆಲೆಬಾಳುವ ಮೀನವೊಂದು ಗಾಳದಲ್ಲಿ ಸಿಕ್ಕಿದ್ದಿತು. ಆದರೂ ಅವನದನ್ನು ಲಕ್ಷಕ್ಕೆ ತಾರದೆ ಶಿವಾರ್ಪಿತವೆಂದು ನೀರೊಳಗೆ ಬಿಟ್ಟು, ಮತ್ತೆ ಗಾಳವನ್ನು ಎಸೆದನು. ಎರಡನೆಯ, ಮೂರನೆಯ ಸಲವೂ ಅದೇ ಮೀನವು ಬರಲು ಶಿವಾರ್ಪಿತವಾದುದನ್ನು ತೆಗೆದುಕೊಳ್ಳಲಿಚ್ಛಿಸದೆ ನೀರೊಳಗೆ ಬಿಟ್ಟು ಬಿಟ್ಟನು.

ಈ ರೀತಿಯಾಗಿ ಎಷ್ಟು ಸಲ ಗಾಳವನ್ನು ಹಾಕಿದರೂ ಅದೇ ಮೀನ ಬರತೊಡಗಲು ಅವನು ನಿರಾಶನಾಗಿ ಆ ಜಾಗೆಯಿಂದ ಮತ್ತೊಂದು ಸ್ಥಳಕ್ಕೆ ಹೋಗಿ ಶಿವನ ಹೆಸರನ್ನುಚ್ಚರಿಸಿ ಗಾಳವನ್ನು ಬೀಸಿದನು. ದಾರವು ಅಲುಗಾಡಿದಾಗ ಅದನ್ನು ಮೇಲಕ್ಕೆತ್ತಲು ಮೊದಲಿನ ಮೀನವೇ ಬಂದುದನ್ನು ಕಂಡು "ಇನ್ನು ಈ ವೃತ್ತಿಯೇ ಸಾಕು.'' ಎಂದುಕೊಂಡು ಭಕ್ತವತ್ಸಲನಾದ ಭಗವಂತನನ್ನು ಅತ್ಯಂತ ಶ್ರದ್ಧೆಯಿಂದ ಭಜಿಸತೊಡಗಲು ದಯಾಮಯನೂ, ಕರುಣಾನಿಧಿಯೂ ಆದ ನೀಲಕಂಠನು ಅವನಿಗೆ ಪ್ರತ್ಯಕ್ಷನಾಗಿ ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ಅನುಗ್ರಹಿಸಿದನು.

ಮೊದಲು ಸಿಕ್ಕಿದ ಮೀನು ಮುಡದಿ ಶಿವಗೆಂದು ಬಿಡು ।
ವುದರಿಂದೆ ವಿಮಲ ನೆನಸಿದತಿ ಭಕ್ತನೀ ।
ಸೊದ ವಿಸಾನಂದ ಘನವೆನಗೆ ॥

—ಶ್ರೀ ನಿಜಗುಣ ಶಿವಯೋಗಿಗಳು.

# ೫೮. ಚಿರುತೊಣೆಯಾಂಡರು

ಮಹಾಶಿವಭಕ್ತರೆಂದು ಖ್ಯಾತರಾಗಿರುವ ಚಿರುತೊಣೆಯಾಂಡರು ಚೋಳದೇಶದ ನಿವಾಸಿಗಳಾಗಿದ್ದರು. ಭಕ್ತಿಯಲ್ಲಿ ಇವರು ಯಾರಿಗೂ ಎರಡನೆಯವರಾಗಿರಲಿಲ್ಲ. ಪ್ರತಿದಿನವೂ ಶಿವಪೂಜೆಯನ್ನು ಗೈಯದೆ ಗಂಟಲೊಳಕ್ಕೆ ನೀರನ್ನು ಕೂಡ ಇಳಿಸುತ್ತಿರಲಿಲ್ಲ.

ನಾನಾ ತರದ ಹೂವುಗಳನ್ನು ತಂದು ತಮ್ಮ ಆರಾಧ್ಯ ದೇವನನ್ನು ಪೂಜಿಸುವದೆಂದರೆ ಅವರಿಗೆ ಅತೀವ ಆನಂದ. ಅದಕ್ಕಾಗಿ ಅವರು ಎಂಥ ಸಮಯವೇ ಇರಲಿ ನಾಲ್ಕೆಂಟು ವಿಧಗಳ ಹೂವುಗಳನ್ನು ತಂದು ಶಿವಪೂಜೆಯನ್ನು ಮನದಣಿಯೆ ಮಾಡದ ಹೊರ್ತು ಅವರ ಮನಕ್ಕೆ ಸಮಾಧಾನ ದೊರೆಯುತ್ತಿರಲಿಲ್ಲ. ಅವರ ಜೀವನವು ಇದೇ ರೀತಿಯಾಗಿ ನಡೆಯುತ್ತಿದ್ದಿತು.

ಹೀಗಿರಲೊಂದು ದಿನ ಚಿರುತೊಣೆಯಾಂಡರು ವನದೊಳಗಿಂದ ನಾನಾತರಹದ ಸುಗಂಧ ಪುಷ್ಪಗಳನ್ನು ಶಿವಪೂಜೆಗೋಸುಗ ತೆಗೆದುಕೊಂಡು ಬಂದರು. ಸ್ತ್ರೀ ಸಹಜವಾದ ಚಾಪಲ್ಯದಿಂದ ಅವರ ಪತ್ನಿಯು ಆ ಪುಷ್ಪಗಳಲ್ಲಿ ಕೆಲವನ್ನು ಎತ್ತಿಕೊಂಡು ಆಘ್ರಾಣಿಸಿದಳು. ಅದು ಚಿರುತೊಣೆಯಾಂಡರ ಗಮನಕ್ಕೂ ಬಂದಿತು. ಕೂಡಲೇ ಅವರು ಕುಪಿತರಾಗಿ— "ನೀಚಳೇ! ಶಿವಪೂಜೆಗೆಂದು ತಂದಿರಿಸಿದ ಪುಷ್ಪಗಳನ್ನು ಆಘ್ರಾಣಿಸಿದೆಯಾ? ನಿನ್ನ ಮೂಗನ್ನೇ ಕೊಯ್ದು ಬಿಡುತ್ತೇನೆ.'' ಎಂದು ಗರ್ಜಿಸಿದರು.

ಆಗ ಅವರ ಪತ್ನಿಯು ತನ್ನದು ಮಹಾಪರಾಧವಾಯಿತೆಂದೂ, ಇನ್ನೊಂದು ಸಲ ಈ ರೀತಿ ತಾನು ಮಾಡುವದಿಲ್ಲವೆಂದೂ, ಈ ಸಲ ಕ್ಷಮಿಸಿ ಬಿಡಬೇಕೆಂದೂ ಪರಿಪರಿಯಿಂದ ಬೇಡಿಕೊಂಡಳು.

ಅವಳ ಪ್ರಾರ್ಥನೆಯು ಚಿರುತೊಣೆಯಾಂಡರ ಕಿವಿಯ ಮೇಲೆ ಬೀಳಲೇ ಇಲ್ಲ. ಅವರ ಮನವೆಲ್ಲ ಶಿವನಿಗರ್ಪಿತವಾಗಲಿದ್ದ ಪುಷ್ಪಗಳು ಆಘ್ರಾಣಿಸಲ್ಪಟ್ಟವಲ್ಲ! ಎಂಬ ಕಡೆಗೇ ಇದ್ದಿತು. ಅವಳು ಗೋಳಿಡುವ

ದನ್ನು ಕಂಡು ಇನ್ನಷ್ಟು ಕುಪಿತರಾದ ಚಿರುತೊಣೆಯಾಂಡರು ಅವಳ ಮೂಗನ್ನೇ ಕೊಯ್ದು ಬಿಟ್ಟನು.

ಭಕ್ತವತ್ಸಲನೂ, ದೇವ ದೇವನೂ ಆದ ಮಹಾದೇವನು ತನ್ನ ಭಕ್ತನ ಭಕ್ತಿ ಮೆಚ್ಚಿ ಪ್ರತ್ಯಕ್ಷನಾಗಿ ದಂಪತಿಗಳೀರ್ವರನ್ನೂ ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನಿತ್ತನು.

ಫಣಿಧರನ ಬಲಿಯುಲರ ನೆಣಿಸದರಸನ ರಾಣಿ ।
ಮಣಿದೆತ್ತಿ ವಾಸಿ-ಸಲು ಮೂಗನರಿದ ಚಿರು ।
ತೊಣೆಯಾಂಡ ರಡಿವಿಡಿದು ಬಾಳ್ವೆಂ ॥

—ಶ್ರೀ ನಿಜಗುಣ ಶಿವಯೋಗಿಗಳು.

# ೫೯. ತಿರುನೀಲಕಂಠರು

ದಕ್ಷಿಣ ಭಾರತದ ಚೋಳರಾಜ್ಯದಲ್ಲಿ ಪೊನ್ನಾಂಬಲವೆಂಬ ಪಟ್ಟಣವು ಶಿವಭಕ್ತರಿಂದ ತುಂಬಿತುಳುಕುತ್ತಿತ್ತು. ಅಲ್ಲಿ ತಿರುನೀಲಕಂಠನೆಂಬ ಶಿವ ಭಕ್ತನಿದ್ದನು. ಕುಂಬಾರ ವೃತ್ತಿಯುವನಾದ ಅವನು ಸಂಗೀತ ವಿದ್ಯೆಯಲ್ಲೂ ಮಹಾ ಪ್ರವೀಣನಾಗಿದ್ದನು. ಅಲ್ಲದೆ ಶಿವನ ಲೀಲೆಯನ್ನು ವ್ಯಕ್ತಗೊಳಿಸುವ ಅನೇಕ ಹಾಡುಗಳನ್ನೂ ರಚಿಸಿದ್ದನು.

ಈತನ ಖ್ಯಾತಿಯನ್ನು ಕೇಳಿದ ಮಂಡಲಾಧೀಶನು ತಿರುನೀಲಕಂಠನನ್ನು ಕರೆಯಿಸಿಕೊಂಡು ಅವನಲ್ಲಿಯ ಕಾವ್ಯಸಾಧನೆಯನ್ನು ಸವಿದು ಸಂತೃಪ್ತನಾಗಿ ಮನದಣಿಯ ಬಹುಮಾನವನ್ನಿತ್ತು ಕಳುಹಿದನು. ಈ ರೀತಿಯಾಗಿ ಆ ಶಿವಭಕ್ತನು ಕಾಲಯಾಪನೆ ಮಾಡುತ್ತಿದ್ದನು. ಈತನಿಗೆ ''ಯಾಲ್ಪಾ ನಾಯನಾರ್'' ಎಂದೂ (ತಮಿಳಿನಲ್ಲಿ) ಹೆಸರಿದೆ. ಸತ್ಯವತಿಯು ಈತನ ಪತ್ನಿಯು.

ಹೀಗಿರಲೊಂದು ರಾತ್ರಿ ತಿರುನೀಲಕಂಠನು ಶಿವಾಲಯದಿಂದ ಬರುತ್ತಿರುವಾಗ ಓರ್ವ ವೇಶ್ಯೆಯು ನೋಡದೆ ಅವನ ಮೇಲೆ ಮೈಲಿಗೆಯ ನೀರನ್ನೆಸೆದಳು. ಅದಾವುದನ್ನೂ ಗಮನಿಸದೇ ಮುಂದೆ ಸಾಗಿದ ತಿರುನೀಲಕಂಠನನ್ನು ಅನಂತರ ಗುರುತಿಸಿದ ವೇಶ್ಯೆಯು ಹಳಹಳಿಪಟ್ಟು ಅವನ ಬಳಿ ಹೋಗಿ ತನ್ನದು ತಪ್ಪಾಯಿತು ಕ್ಷಮಿಸಬೇಕೆಂದೂ ತನ್ನ ಮನೆಯ ವರೆಗೆ ಬಂದು ಸ್ನಾನಮಾಡಿ ಹೋಗಬೇಕೆಂದೂ ಪ್ರಾರ್ಥಿಸಿಕೊಳ್ಳಲು, ಅವನು ಹಾಗೆಯೇ ಆಗಲಿ ಶಿವನಿಚ್ಛೆಎಂದಂದುಕೊಂಡು ಅವಳ ಮನೆಗೆ ಹೋದನು.

ಅನಂತರ ವೇಶ್ಯೆಯು ಅವನನ್ನುತನ್ನಮನೆಗೆ ಕರೆದೊಯ್ದು ಅಭ್ಯಂಗ ಸ್ನಾನ ಮಾಡಿಸಿ ಪರಿಮಳಗಳನ್ನು ಮೈಗೆ ಲೇಪಿಸಿ ಕಳುಹಿಸಿಕೊಟ್ಟಳು. ತಿರುನೀಲಕಂಠನು ಮನೆಯನ್ನು ತಲುಪಿದ ನಂತರ ಅವನ ಪತ್ನಿಯಾದ ಸತ್ಯವತಿಯು ಇದೆಲ್ಲ ಏನು? ಎಂದು ಪ್ರಶ್ನಿಸಿದಳು. ಅದಕ್ಕೆ ತಿರುನೀಲ-ಕಂಠನು ಅಲ್ಲಿ ಜರುಗಿದ ಸಂಗತಿಯನ್ನೆಲ್ಲ ವಿವರಿಸಿದನು.

ಸತ್ಯವತಿಗೆ ತನ್ನ ಪತಿಯಮಾತಿನಲ್ಲಿ ವಿಶ್ವಾಸವುಂಟಾಗಲಿಲ್ಲ. ''ಇವರು ವೇಶ್ಯೆಯ ಮೇಲೆ ಮೋಹಿತರಾಗಿ ಅಲ್ಲಿಗೆ ಹೋಗಿ ಬಂದಿರುವದೇ ನಿಜ. ನನ್ನ ಮುಂದೆ ಸುಳ್ಳು ಹೇಳುತ್ತಿದ್ದಾರೆ" ಎಂದು ಮನದಲ್ಲಿ ನಿರ್ಧರಿಸಿ ಕೊಂಡು ಪತಿಯೊಂದಿಗೆ ಇನ್ನು ಮುಂದೆ ಮಾತನಾಡಲಿಕ್ಕಿಲ್ಲವೆಂದು ಶಿವನ ಮೇಲೆ ಆಣೆ ಇಟ್ಟುಕೊಂಡಳು.

ತನ್ನ ಪತ್ನಿಗೆ ನಾನಾ ವಿಧವಾಗಿ ತಿಳಿಸಿ ಹೇಳಿದರೂ ಏನೂ ಪ್ರಯೋಜನವಾಗದ್ದನ್ನು ಕಂಡು ತಿರುನೀಲಕಂಠನಿಗೂ ಕೆಡುಕೆನಿಸಿತು. ಆದರೂ ಕೊನೆಗೆ ಶಿವದಿಚ್ಛೆಯಿದ್ದಂತಾಗಲೆಂದು ಸುಮ್ಮನಾಗಿಬಿಟ್ಟನು. ಮುಂದೆ ೮೦ ವರ್ಷಗಳ ವರೆಗೆ ದಂಪತಿಗಳು ಮಾತನಾಡದೆಯೇ ದಿನಗಳನ್ನು ಕಳೆದರು.

ಕೊನೆಗೊಂದು ದಿನ ಶಿವನು ಇವರಲ್ಲಿಯ ವಿರಸವನ್ನು ಹೋಗಲಾಡಿಸ ಬೇಕೆಂಬ ಉದ್ದೇಶದಿಂದ ವೃದ್ಧನ ವೇಷತಾಳಿ ಅವರ ಮನೆಗೆ ಬಂದು, ''ನಾನು ಸ್ನಾನ ಮಾಡಿ ಬರುತ್ತೇನೆ. ಆ ವರೆಗೂ ಈ ತಂಬಿಗೆ ನಿಮ್ಮಲ್ಲಿರಲಿ" ಎಂದು ಹೇಳಿ ಸ್ನಾನಕ್ಕೆ ಹೋದನು. ತನ್ನ ಸ್ನಾನವನ್ನು ತೀರಿಸಿಕೊಂಡು ಅವರ ಮನೆಗೆ ಬಂದು ತಂಬಿಗೆಯನ್ನು ಕೇಳಿದನು. ಆದರೆ ಅಲ್ಲಿ ತಂಬಿಗೆಯೇ ಇರಲಿಲ್ಲ. ದಂಪತಿಗಳು ಗಾಬರಿಗೊಂಡರು. ಬೇರೆ ತಂಬಿಗೆಯನ್ನು ಕೊಡುತ್ತೇವೆಂದು ಗೋಗರೆದರು. ಆದರೂ ವೃದ್ಧರೂಪೀಶಿವನು ಅವರ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳದೆ'' ತಂಬಿಗೆಯನ್ನು ನೀವು ಮುಚ್ಚಿಟ್ಟಿದ್ದೀರಿ. ನಾನು ಅರಸನ ಬಳಿ ದೂರು ಒಯ್ಯುತ್ತೇನೆ" ಎಂದು ನುಡಿದು ಅರಸನಿಗೆ ತಿಳಿಸಿಯೂ ಬಿಟ್ಟನು.

ಅರಸನೆದರೂ ಆ ದಂಪತಿಗಳು ಹಾಗೆಯೇ ಹೇಳಿದರು. ಆಗ ಆ ವೃದ್ಧನು ದಂಪತಿಗಳೀರ್ವರೂ ಹೊಳೆಯಲ್ಲಿ (ಒಂದು ಕೋಲಿನ ಎರಡೂ ತುದಿಗಳನ್ನು ಪರಸ್ಪರರು ಹಿಡಿದುಕೊಂಡು) ಮುಳುಗಿ ''ತಂಬಿಗೆ ಕಾಣೆಯಾಗಿದೆ, ನಾವು ತೆಗೆದಿರಿಸಿಲ್ಲ'' ಎಂದು ನುಡಿಯಿರಿ ಎಂದನು.

ದಂಪತಿಗಳೀರ್ವರೂ ಅದೇ ರೀತಿಯಾಗಿ ಕೋಲಿನ ಎರಡೂ ತುದಿಗಳನ್ನು ಹಿಡಿದುಕೊಂಡು ನೀರಲ್ಲಿ ಮುಳುಗಿ ''ತಂಬಿಗೆ ಕಾಣೆಯಾಗಿದೆ; ನಾವು ನಿಜವಾಗಿಯೂ ಮುಚ್ಚಿಟ್ಟಿಲ್ಲ'' ಎಂದರು. ಆಶ್ಚರ್ಯದ ಸಂಗತಿ

ಯೆಂದರೆ ಅವರು ನೀರೊಳಗೆ ಮುಳುಗಿ ಏಳುವದರೊಳಗಾಗಿ ಮೊದಲಿನಂತೆ ಅಂದರೆ ಪರಸ್ಪರರು ಮಾತನಾಡುವದನ್ನು ನಿಲ್ಲಿಸಿದಾಗ ಎಷ್ಟು ವಯಸ್ಸಿನವರಿದ್ದರೋ ಅಷ್ಟೇ ಯೌವ್ವನವಂತರಾಗಿದ್ದರು.

ಆಗ ಪರಮೇಶ್ವರನು ತನ್ನ ನಿಜರೂಪವನ್ನು ತೋರಿಸಿ ಕೈಲಾಸಕ್ಕೆ ಹೋದನು. ಅಂದಿನಿಂದ ಅವರೀರ್ವರೂ ಇಹಲೋಕದ ಸಕಲ ಭೋಗಗಳನ್ನು ಅನುಭವಿಸಿ ಕೊನೆಗೆ ಕೈಲಾಸಕ್ಕೆ ತೆರಳಿದರು.

ಶಿವನಾಣೆಯಿಡೆ ತನ್ನ ಯುವತಿಯನು ತೊರೆದು ಶಂ
ಭುವಿನ ಕೃಪೆಪಡೆದ–ತಿರುನೀಲಕಂಠರ್ಗೆ
ನವೆಯು ದೊಲವಿಂದೆ ಶರಣಂಬೆ

—ಶ್ರೀ ನಿಜಗುಣ ಶಿವಯೋಗಿಗಳು.

# ೬೦. ಕಣಂಬುಲ್ಲ ನಂಬಿಯು

ಚೋಳರಾಜ್ಯದಲ್ಲಿಯ ಕಣಂಬೂರೆಂಬ ನಗರವು ಶಿವಾಲಯಗಳಿಂದಲೂ, ಹರಿಭಕ್ತರಿಂದಲೂ, ಶ್ರೀಮಂತರಿಂದಲೂ, ನಾನಾವಿಧವಾದ ಕೈಗಾರಿಕೆಗಳನ್ನು ಕೈಕೊಂಡ ಜನ ಸಮುದಾಯದಿಂದಲೂ, ಒಕ್ಕಲಿಗರಿಂದಲೂ, ವಿದ್ಯಾಮಂದಿರಗಳಿಂದಲೂ ನಯನ ಮನೋಹರವಾಗಿದ್ದಿತು. ಅಂಥ ಪಟ್ಟಣದಲ್ಲಿ ಕಡು ಬಡವನೂ, ಅತಿ ಮುಗ್ಧನೂ ಆದ ನಂಬಿ ಯೆಂಬ ಶಿವಭಕ್ತನು ಹುಲ್ಲನ್ನು ಮಾರಿ ಉಪಜೀವಿಸುತ್ತಿದ್ದನು. ಹುಲ್ಲನ್ನು ಮಾರಿ ಬಂದ ಅಲ್ಪ ಧನದಿಂದಲೇ ಗುರು-ಲಿಂಗ ಜಂಗಮರ ಸೇವೆಯನ್ನು ಮಾಡಿ ಶಿವನಿಷ್ಠಾಪರನಾಗಿ ಆನಂದದಿಂದ ಕಾಲ ಕಳೆಯುತ್ತಿದ್ದನು.

ಶಿವಭಕ್ತನಾದ ನಂಬಿಯನ್ನು ಎಲ್ಲರೂ ಕಣಂಬುಲ್ಲ ನಂಬಿ ಎಂದು ಕರೆಯುತ್ತಿದ್ದರು. ಇವನು ಒಂದು ದಿನ ಅಡವಿಗೆ ಹೋದಾಗ ಸಾಯಂಕಾಲವಾಯಿತು. ಮುಂದೆ ನಡೆಯುವಷ್ಟರಲ್ಲಿ ಅವನಿಗೊಂದು ಶಿವಾಲಯವು ಗೋಚರವಾಗಲು ಒಳಗೆ ಹೋಗಿ ಪರಮಾತ್ಮನಿಗೆ ಕೈಮುಗಿದು, ಪ್ರದಕ್ಷಿಣೆಯನ್ನು ಮಾಡಿ ಅರ್ಚಕನು ಮಾಡುವ ಪೂಜೆಯನ್ನು ನೋಡಿ ಸಂತೋಷಬಿಡುವಾಗ ಕತ್ತಲಾಗಿ ಬಿಟ್ಟಿತು. ಇಂಥ ಕತ್ತಲೆಯಲ್ಲಿ ಮಹಾದೇವನ ಗತಿಯೇನು ? ಎಂಬ ಚಿಂತೆಯು ಅವನನ್ನು ಬಾಧಿಸತೊಡಗಿತು. ಅಲ್ಲದೆ ಇಂಥ ಕಾರ್ಗತ್ತಲೆಯಲ್ಲಿ ಈ ದೇವನನ್ನು ಬಿಟ್ಟು ಹೋಗುವದು ಯೋಗ್ಯವಲ್ಲವೆಂದೂ ತೋಚಿತು.

ಆಗ ಅವನು ಗುಡಿಯ ಸುತ್ತಾ ಮುತ್ತು ಬೆಳೆದ ಒಣಹುಲ್ಲನ್ನು ಆರಿಸಿ ತಂದು ಬೆಂಕಿ ಹೊತ್ತಿಸಿ ಶಿವಲಿಂಗದೆದುರು ಬೆಳಕನ್ನುಂಟು ಮಾಡಿದನು. ಇದೇ ರೀತಿ ಬೆಳಗಾಗುವ ವರೆಗೂ ಮಹಾದೇವನೆದುರು ಬೆಳಕನ್ನು ಉಂಟು ಮಾಡಿ ಬೆಳಗಾದೊಡನೆ ತನ್ನ ಕಾಯಕಕ್ಕೆ ಹೋದನು. ಈ ರೀತಿಯಾಗಿ ಅವರು ಅರಣ್ಯದೊಳಗಿನ ಮಂದಿರದಲ್ಲಿದ್ದ ಲಿಂಗಮೂರ್ತಿಗೆ ಬೆಳತನಕವೂ ಬೆಳಕನ್ನೀಯುವ ಕಾರ್ಯದಲ್ಲಿ ನಿರತನಾಗೆ ಬಿಟ್ಟನು. ಇದೇ

ರೀತಿಯಾಗಿ ಅನೇಕ ವರ್ಷಗಳು ಗತಿಸಿ ಹೋದವು.

ಹೀಗಿರುತ್ತಿರಲೊಂದುದಿನ ಅವನು ನಿತ್ಯನಿಯಮದಂತೆ ಸೂರ್ಯನು ಅಸ್ತವಾಗುವ ಸಮಯಕ್ಕೆ ಶಿವಭಕ್ತರು ಬಿಡದೆ ಧರಿಸುವ ಭಸ್ಮ ರುದ್ರಾಕ್ಷ ಗಳನ್ನು ಧರಿಸಿ ಗಿರಿಜಾರಮಣನನ್ನು ಧ್ಯಾನಿಸುತ್ತ ದೇವಾಲಯಕ್ಕೆ ಬಂದು ನಾನಾತರಹ ಸೌದೆಗಳನ್ನು ತಂದು ಅಲ್ಲಿರಿಸಿ ತಾಪತ್ರಯವನ್ನು ನಿವಾರಿಸುವ ಸಾಂಬಮೂರ್ತಿಯನ್ನು ಎವೆಯಿಕ್ಕದೆ ನೋಡುತ್ತ, ಆತನ ಸ್ತೋತ್ರವನ್ನು ಮಾಡುತ್ತ ನಿತ್ಯಕ್ರಮದ ದೀಪ್ತಿಯಿಂದ ಬೆಳಗುತ್ತಿರಲು ಬೆಳಗಿನ ಸಮಯವು ಬಂದಿತು. ಆಗ ಶಂಕರನು ತನ್ನ ಭಕ್ತನ ಭಕ್ತಿಯನ್ನು ಪರೀಕ್ಷಿಸಬೇಕೆಂದು ಯೋಚಿಸಿದ್ದರ ಪ್ರತೀಕವಾಗಿ ಹುಲ್ಲಿನ ಸಿವಡುಗಳಿಗೆ ಬೆಂಕಿ ಬಿದ್ದು ಸೌದೆ ಗಳೆಲ್ಲ ಸುಟ್ಟು ಹೋದವು. ಆಗ ಭಕ್ತಲೂಮನಾದ ನಂಬಿಯು ಬಹಳವಾಗಿ ಮರುಗಿ ಶಿವಶಿವಾ ಏನು ಮಾಡಲಿ? ಎಂದು ಕಳವಳ ಪಡುತ್ತಿರಲು ಅವನಿ ಗೊಂದು ಹಂಚಿಕೆಯು ಹೊಳೆಯಿತು.

ತನ್ನ ತಲೆಯಲ್ಲಿಯ ಜಡೆಗಳು ಬಹುದಿವಸಗಳಿಂದ ಎಣ್ಣೆಯನ್ನು ಹೀರಿಕೊಂಡು ತೈಲಮಯವಾಗಿವೆ, ಇವುಗಳನ್ನೇ ದೀವಿಗೆಗಾಗಿ ಉಪಯೋ ಗಿಸಿಕೊಳ್ಳಬೇಕೆಂದು ನಿರ್ಧರಿಸಿ ಭಕ್ತಿಯ ವೀರಾವೇಶದಿಂದ ತನ್ನ ಮಸ್ತಕ ದಲ್ಲಿ ಶೋಭಿಸುವಂಥ ಕೇಶಗಳಿಗೆ ಬೆಂಕಿಯನ್ನು ಹಚ್ಚಿಕೊಂಡು ಕುಣಿದಾಡ ತೊಡಗಿ ಅದೇ ಆವೇಶದಲ್ಲಿ ಮೈಮರೆತು ಬಿಟ್ಟನು. ಯಾವುದರ ಪರಿ ವೆಯೂ ಅವನಿಗಿದ್ದಂತಿರಲಿಲ್ಲ.

ಆಗ ಮುಕ್ತಿನಾಥನೂ, ಭಕ್ತವತ್ಸಲನೂ ಆದ ಶಂಕರನು ಆ ಲಿಂಗ ದೊಳಗಿಂದಲೇ ಉದ್ಭವಿಸಿ ಅವನಿಗೆ ದರ್ಶನವನ್ನಿತ್ತು ಕೈಲಾಸಕ್ಕೆ ಕರೆ ದೊಯ್ದು ಗಣಪದವಿಯನ್ನು ಅನುಗ್ರಹಿಸಿದನು.

ಅಂಬಿಕಾವಲ್ಲಭ ನೊಡಂಬಡೆ ಶಿರೋಜಂಗ।
ಳಿಂ ಬೆಳಗನೆತ್ತಿ ದುರುತರ ಕಣಂಬುಲ್ಲ।
ನಂಬಿ ಮೊರೆಯೊನ್ನಡವಿಡದೆ ॥

—ಶ್ರೀ ನಿಜಗುಣ ಶಿವಯೋಗಿಗಳು.

# ೬೧-೬೨. ಜಡೆಯ ನಯನಾರು--ಯಸ್ಯಜ್ಞಾನಿದೇವಿ

ಚೋಳಭೂಮಿಯು ಅತ್ಯಂತ ಮಂಗಲಮಯವಾದುದು. ಅಲ್ಲಿಯ ತಿರುವಾವಲೂರು ಎಂಬ ನಗರಿಯು ಸಮಸ್ತ ವೈಭವಗಳಿಂದ ಹೆಸರಾಗಿತ್ತು. ಆ ನಗರವನ್ನು ನರಸಿಂಗ ಮೊನೆಯರು ಎಂಬ ಉಪನಾಮವುಳ್ಳ ಉತ್ತುಂಗ ಚೋಳನು ಸದ್ಧರ್ಮದಿಂದ ಪಾಲಿಸುತ್ತಲಿದ್ದನಾದರೂ ಆತನಿಗೆ ಪುತ್ರ ಸಂತಾನವಿರಲಿಲ್ಲ. ಆ ಬಗ್ಗೆ ಅವನು ಶಿವನನ್ನು ಅತ್ಯಂತ ವಿಧೇಯನಾಗಿ ಪೂಜಿಸಿದಾಗ ಆ ರಾತ್ರಿ ಅವನ ಕನಸಿನಲ್ಲಿ, " ಹೇ ಅವನೀಶನೇ ! ಇದೇ ನಗರದಲ್ಲಿರುವ ಜಡೆಯನಾಯನಾರು-ಯಸ್ಯಜ್ಞಾನದೇವಿ ಎಂಬ ದಂಪತಿ ಗಳ ಉದರದಲ್ಲಿ ಓರ್ವ ಕುಮಾರನು ಜನಿಸುವನು. ಆತನನ್ನೇ ನೀನು ಕುಮಾರನನ್ನಾಗಿ ಮಾಡಿಕೋ" ಎಂಮ ಹೇಳಿದಂತಾಯಿತು. ಆಗ ಅರಸ ನಿಗೆ ಅಷ್ಟರಿಂದಲೆ ಸಮಾಧಾನವಾಯಿತು. ಅದೇ ನಗರದಲ್ಲಿ ವಾಸಿಸು ತ್ತಿದ್ದ ಮಹಾ ಶಿವಭಕ್ತನಾದ ಜಡೆಯನಾಯನಾರು ಹಾಗು ಯಸ್ಯಜ್ಞಾನ ದೇವಿ ಎಂಬ ದಂಪತಿಗಳಿಗೂ ಪುತ್ರಸಂತಾನವಿರಲಿಲ್ಲ. ಆಗ ನಾಯನಾ ರನು ಅದೇ ಊರಿನ ವಲ್ಮೀಕಿನಾಥನನ್ನು ಅತ್ಯಂತ ಕಳಕಳಿಯಿಂದ ಬೇಡಿ ಕೊಂಡನು.

ವಲ್ಮೀಕನಾಥನ ದಯೆಯಿಂದ ಆ ದಂಪತಿಗಳಿಗೆ ಒಂದು ಗಂಡು ಮಗು ಹುಟ್ಟಿತು. ಆ ಕೂಸು ಇನ್ನಾರೂ ಆಗಿರದೆ ಮಹಾದೇವನ ಓಲಗ ದಲ್ಲಿ ಹೂವಿನ ಕಾಯಕದ ಮೇಲೆ ನಿಯಮಿಸಲ್ಪಟ್ಟ ಪುಷ್ಪದತ್ತನೇ ಆಗಿ ದ್ದನು. ಈತನಿಗೆ ಕೈಲಾಸದಲ್ಲಿ ಕಮಲವಲ್ಲಿ-ಅರುಂಧತಿಯರೆಂಬ ರುದ್ರ ಕನ್ನಿಕೆಯರು ಮನಸೋತುದರಿಂದ ಪಾರ್ವತಿಯು ನೀವು ಇಲ್ಲಿರುವದು ಯೋಗ್ಯವಲ್ಲ. ಭೂಲೋಕಕ್ಕೆ ಹೋಗಿ ಮನೋಕಾಮನೆಯನ್ನು ತೃಪ್ತಿ ಮಾಡಿಕೊಂಡು ಬನ್ನಿರಿ ಎಂದು ಮೂವರನ್ನೂ ಭೂಲೋಕಕ್ಕೆ ಕಳುಹಿ ಸಿದಳು. ಪುಷ್ಪದತ್ತನು ನಿಮ್ಮನ್ನಗಲಿ ಜೀವಿಸುವ ಬಗೆಯಾವರೂ ಹೇಗೆಂದು ಶಂಕರನನ್ನು ಕೇಳಿಕೊಳ್ಳಲು ನೀನೇನೂ ಚಿಂತಿಸಬೇಡ. ಭೂಲೋಕದಲ್ಲಿ

ಸದಾ ನಿನ್ನ ಬೆನ್ನ ಹಿಂದೆ ಇದ್ದು ನಾನು ನಿನ್ನನ್ನುರಕ್ಷಿಸುತ್ತೇನೆ ಎಂದನು. ಅದೇ ರೀತಿಯಾಗಿ ಪುಷ್ಪದತ್ತನು ಆ ದಂಪತಿಗಳ ಉದರದಲ್ಲಿ ಜನಿಸಿದನು.

ಶಿವನ ಅನುಗ್ರಹದಿಂದ ಜನಿಸಿದ ಆ ಕುಮಾರನಿಗೆ ನಂಬಿಯೆಂದು ನಾಮಕರಣ ಮಾಡಲಾಯಿತು. ಆ ನಂಬಿಯು ಬಾಲ್ಯದಲ್ಲಿಯೇ ತನ್ನ ಪವಾಡಗಳನ್ನು ತೋರಿಸತೊಡಗಿದನು. ಒಂದು ದಿನ ನಂಬಿಯು ರಾಜ ಬೀದಿಯಲ್ಲಿ ಆಡುತ್ತ ಕುಳಿತಿರುವಾಗ ಅರಸನ ಆನೆಗೆ ಮದವೇರಿ ಅದು ಎದುರು ಬಂದವರನ್ನು ಕೊಲ್ಲುತ್ತ ಹೊರಟಿತ್ತು. ಅದನ್ನು ಕಂಡು ಎಲ್ಲರೂ ಭಯಭೀತರಾಗಿ ಪಕ್ಕಕ್ಕೆ ಸರಿದು, ಮನೆಯೊಳಗೆ ಸೇರಿಕೊಂಡು ಅದಕ್ಕೆ ಮಾರ್ಗವನ್ನು ಮಾಡಿಕೊಡುತ್ತಿದ್ದರು. ಹುಡುಗರಂತೂ ಅಂಜಿ ಮನೆಯೊಳಗೇ ಸೇರಿಕೊಂಡವು. ನಂಬಿಯು ಮಾತ್ರ ಇದಾವುದರ ಕಡೆಗೂ ಗಮನ ವೀಯದೆ ಆಟದಲ್ಲಿಯೇ ಮಗ್ನನಾಗಿದ್ದನು.

ಆನೆಯು ಸಮೀಪಕ್ಕೆ ಬರಲು ನಂಬಿಯು ಎದ್ದು ಅದರ ಎದುರಿಗೆ ಹೋಗಿ ನಿಂತುಕೊಂಡನು. ಮರೆಯಲ್ಲಿ ನಿಂತು ನೋಡುತ್ತಿದ್ದವರೆಲ್ಲ ನಂಬಿಯ ಹಣೆಯಬರಹ ಇಲ್ಲಿಗೆ ಮುಕ್ತಾಯವಾಯಿತು ಎಂದು ಆಡಿಕೊಂಡರು. ಜಡೆಯನಾಯನಾರು ಹಾಗು ಯಸ್ಯಜ್ಞಾನಿದೇವಿಯರು, ''ದೇವಾ ನಮ್ಮ ಮಗನನ್ನು ಕಾಪಾಡು'' ಎಂದು ಶಿವನಲ್ಲಿ ಮೊರೆಯಿಟ್ಟರು. ತನ್ನೆದುರಿಗೆ ನಿಂತ ಬಾಲಕನನ್ನು ನೋಡಿ ಆ ಆನೆಯ ಮತ್ತವು ಇಳಿದು ಬಿಟ್ಟಿತು. ಕೊಂಚವೂ ನೋವಾಗದಂತೆ ಆ ಬಾಲಕನನ್ನು ಸೊಂಡಿಲಿನಿಂದ ಮೆತ್ತಗೆ ಎತ್ತಿ ತನ್ನ ತಲೆಯ ಮೇಲೆ ಕೂಡ್ರಿಸಿಕೊಂಡಿತು. ಇದನ್ನು ಕಂಡು ಎಲ್ಲರಿಗೂ ಆಚ್ಚರಿಯಾಯಿತು. ಈ ಸಂಗತಿಯು ದೊರೆಯಾದ ಉತ್ತಂಗ ಚೋಳನಿಗೂ ತಿಳಿದು ಆ ಮಗುವನ್ನು ತನಗೆ ಕೊಡಬೇಕೆಂದು ಆ ದಂಪತಿಗಳಿಗೆ ಕೇಳಿ ತೆಗೆದುಕೊಂಡು ಅವರಿಗೆ ಯೋಗ್ಯ ಸತ್ಕಾರದಿಂದ ಆದರಿಸಿದನು. ಮುಂದೆ ಇದೇ ನಂಬಿಗೆ, ಸೌಂದರನೆಂಬ ನಾಮಕರಣವಾಯಿತು.

ಈ ರೀತಿಯಾಗಿ ಆ ದಂಪತಿಗಳು ಮುಂದೆಯೂ ನಂಬಿಯ ಉತ್ಕರ್ಷಗಾಗಿ ಶಿವನು ಹೇಳಿದಂತೆ ಕೇಳಿ ಶಿವನ ಸಂಪ್ರೀತಿಯನ್ನು ದೊರಕಿಸಿ ಗಣ ಸಾಯುಜ್ಯವನ್ನು ಪಡೆದರು.

ಪೊಡವಿ ಬಣ್ಣಿಸೆ ದೇವರೊಡೆಯ ನೊಲುಮೆಯನೊಪ್ಪಿ ।
ವಿಡಿದ ಸೌಂದರನ ಪಿತನಾಗಿ ಜಸವೆತ್ತ ।
ಜಡೆಯ ಸೈನಾರ ಸುತನಪ್ಪೆ ॥

೦ ೦ ೦ ೦

ಭೂವಿಸುತ ನಂಬಿಯು ಮಾವರನ ಕರುಣದಿಂ ।
ದೋವಿ ಪಡೆದಮಲ ತರುಣಿಯಸ್ಯ ಜ್ಞಾನ ।
ದೇವಿಯರ ಸೂನು ಧಿಟವಾನು ॥

–ಶ್ರೀ ನಿಜಗುಣ ಶಿವಯೋಗಿಗಳು.

# ೬೩. ಸೌಂದರನಂಬಿಯು

ತ್ರಿಣಯನಂ ತಾನೊಲಿದು ಗಣಿಕೆಯುರ ಮನೆಗೆ ಕುಂ।
ಟಣಿಯಾಗಿ ನಡೆಸಿದಧಿಕ ನಂಬಿಗೆ ಮನಂ।
ದಣಿವಂತೆ ನಮಿಸಿ ನಲಿಯುವೆನು ॥

—ಶ್ರೀ ನಿಜಗುಣ ಶಿವಯೋಗಿಗಳು.

ಚೋಳ ಭೂಮಿಯ ತಿರುವಾವಲೂರು ಎಂಬಲ್ಲಿ ಜಡೆಯನಾಯನಾರು ಯಸ್ಯಜ್ಞಾನಿದೇವಿಯರ ಗರ್ಭದಲ್ಲಿ ಜನಿಸಿದ ಕುಮಾರನಂಬಿಯು ಉತ್ತುಂಗ ಚೋಳನ ಮಗನಾಗಿದ್ದುದು ಹಿಂದೆಯೇ ಹೇಳಲಾಗಿದೆ. ನೂತನ ಕುಮಾರನನ್ನು ತಮ್ಮ ಅರಮನೆಗೆ ಕರೆದುಕೊಂಡು ಹೋದೊಡನೆ ಆ ಚೋಳ ಭೂಪತಿಗೆ ಹಿಂದೆ ವಲ್ಮೀಕಿನಾಥನು ತನ್ನ ಕನಸಿನೊಳಗೆ ಹೇಳಿದ ಸಂಗತಿಯ ನೆನಪಿಗಾಗಿ ಅತೀವ ಆನಂದವಾಯಿತು. ಆ ವಿಷಯವನ್ನು ತನ್ನ ಪಟ್ಟದರಸಿಗೆ ತಿಳಿಸಲು ಅವಳಿಗೂ ಹರುಷವಾಯಿತು. ಆ ರಾಣಿಯು ಕುವರನನ್ನು ತೊಡೆಯ ಮೇಲಿರಿಸಿಕೊಂಡು ನಲುಮೆಯಿಂದ ಮುದ್ದಾಡಿದಳು.

ಸೌಂದರನಂಬಿಗೆ ರಾಜೋಚಿತವಾದ ಶಿಕ್ಷಣದಲ್ಲಿ ಪಾರಂಗತನನ್ನಾಗಿ ಮಾಡಲಾಯಿತು. ಮುಂದೆ ಇವನು ಪ್ರಾಪ್ತವಯಸ್ಕನಾಗಲು ಇವನಿಗನುರೂಪಳಾದ ಕನ್ಯೆಯನ್ನು ಶೋಧಿಸಲು ಆ ಚೋಳ ನೃಪತಿಯು ತನ್ನ ಪ್ರಧಾನಿಯಾದ ತುಂಬರನಿಗೆ ತಿಳಿಸಿದನು. ರಾಜಾಜ್ಞೆಯಂತೆ ತುಂಬರನು ಎಲ್ಲ ಕಡೆಗೂ ತಿರುಗಾಡಿ ತಿರಿಮುಂದಪುರದಲ್ಲಿಯ ರಾಜಕನ್ಯೆಯನ್ನು ಗೊತ್ತುಮಾಡಿ ವಿವಾಹದ ಸಿದ್ಧತೆಗಳನ್ನು ನಡೆಯಿಸಿದನು. ವಿವಾಹವು ತಿರಿಮುಂದಪುರದಲ್ಲಿಯೇ ನಡೆಯುವದೆಂದು ನಿರ್ಧರಿಸಲಾಯಿತು.

ಇತ್ತ ಕೈಲಾಸಪರ್ವತದಲ್ಲಿ ಪಾರ್ವತಿರಮಣನು ತನ್ನ ಸತಿಯೊಡನೆ– **ಭವಾನಿ !** ಪುಷ್ಪದತ್ತನು ನಂಬಿ ಎಂಬ ಹೆಸರಿನಿಂದ ಮೃತ್ಯುಲೋಕದಲ್ಲಿ

ಯುವರಾಜನಾಗಿರುವನು. ಆತನನ್ನು ಮೋಹಿಸಿದ ರುದ್ರಕನ್ಯೆಯರೀರ್ವರೂ ಪರಿವೆ ನಾಚಿ, ಸಂಕಿಲೆ ನಾಚಿ ಎಂಬ ನಾಮಗಳಿಂದ ಶೋಭಿಸುತ್ತಿರುವರು. ಇವರೀರ್ವರೊಡನೆ ನನ್ನ ಕುವರನು ಬೆರೆಯುವಂತೆ ಮಾಡುವೆನು. ಅಲ್ಲದೆ ಆಗಾಗ್ಗೆ ಶಿವತತ್ವವನ್ನು ಅರುಹಿ ಹೆಚ್ಚಿನ ಮಾಯೆಯು ಆವರಿಸಿದಂತೆ ಮಾಡಿ ಮತ್ತೆ ಇಲ್ಲಿಗೆ ಬರುವಂತೆ ಮಾಡುವೆನು " ಎಂದು ಹೇಳಿ ಹಣ್ಣು-ಹಣ್ಣು ಮುದುಕನ ವೇಷವುಂ ತಳೆದು ಹರುಕು—ಮುರುಕಾದ ಕಾಷಾಯ ವಸ್ತ್ರವಂ ಧರಿಸಿ ಹಗುರಾದ ಕಮಂಡಲವನ್ನು ಹಿಡಿದುಕೊಂಡು ಲಗ್ನಮಂಟಪದೊಳಗೆ ಹೋಗಿ ಜೋಯಿಸರೊಡನೆ ವ್ಯಾಜ್ಯಕಾಯ್ದು ಅವರನ್ನು ಲಗ್ನ ಮಂಟಪದಿಂದ ಹೊರಗೆ ಹಾಕಿದನು. ಅಲ್ಲದೆ ಅಲ್ಲಿಯ ಮದುವೆಗಾಗಿ ಸಿದ್ಧ ಪಡಿಸಿದ ಸಾಮಗ್ರಿಗಳನ್ನೆಲ್ಲ ನಾಶಮಾಡತೊಡಗಲು ರಾಜಭಟರು ಇವನನ್ನು ಹಿಡಿದು ತಂದು ಅರಸನೆದುರು ನಿಲ್ಲಿಸಿದರು.

ನೀನು ಈ ರೀತಿ ಮಾಡಲು ಕಾರಣವೇನೆಂದು ಅರಸನು ಆ ವೃದ್ಧನನ್ನು ಕೇಳಲು, ವೃದ್ಧರೂಪಿ ಶಂಕರನು— " ಎಲೈ ಅರಸನೇ! ನೀನು ಅಳಿಯನೆಂದು ಭಾವಿಸುತ್ತಿರುವವನು ನಿಜವಾಗಿ ಅರಸುಕುವರನಾಗಿರದೆ ನನ್ನ ತೊತ್ತಿನ ಮಗನಾಗಿದ್ದಾನೆ. ಬೇಕಾದರೆ ಈ ಪತ್ರವನ್ನು ನೋಡು " ಎಂದು ಒಂದು ಪತ್ರವನ್ನು ಅರಸನ ಕೈಗಿತ್ತು ಮಂದಹಾಸದಿಂದ ನಿಂತಿರಲು ಅರಸನು ಮದುವೆಯು ನಿಂತು ಹೋಗುವದಲ್ಲ! ಇದಕ್ಕೇನು ಮಾಡಬೇಕು? ಎಂದು ಮನದೊಳಗೆ ಚಿಂತಿಸಿ ಆ ವೃದ್ಧನನ್ನು ಹೊರಗೆ ಹೋಗಲು ಆಜ್ಞಾಪಿಸಿದನು.

ಅನಂತರ ಆ ವೃದ್ಧನು ತಿರುವಾವಲೂರಿಂದ ಕನ್ಯೆಯ ಪುರದ ಕಡೆಗೆ ವಿವಾಹಕ್ಕಾಗಿ ಬಂದ ಜನಸಮೂಹದ ಬಳಿಗೆ ಹೋಗಿ " ನೀವು ಇಲ್ಲಿ ಏತಕ್ಕೆ ಬಂದಿರುವಿರಿ? ನಂಬಿಯು ನನ್ನ ತೊತ್ತಿನ ಮಗನು " ಎಂದು ಹೇಳಿದರೂ ಅವನ ಮಾತನ್ನು ಯಾರೂ ಕೇಳಲಿಲ್ಲ. ಆಗ ಅವನು ಇಲ್ಲಿಯವರು ತನ್ನ ಮಾತು ಕೇಳುವದಿಲ್ಲವೆಂದರಿತು ಚೋಳರಾಜನಲ್ಲಿಗೆ ಹೋಗಿ ಅರಿಕೆ ಮಾಡಿಕೊಂಡನು. ಅದಕ್ಕೆ ಅರಸನು ಹೌದೆಂದು ಒಪ್ಪಿಕೊಂಡನು. ಅಷ್ಟರಲ್ಲಿ ಮಂದನಪುರದ ರಾಜಚರರು ಶರವೇಗದಿಂದ ಬಂದು ಲಗ್ನಮಂಟಪದಲ್ಲಿ ಒದಗಿದ ಅನಿಷ್ಟವನ್ನು ತಿಳಿಸಿದರು. ಆಗ ಸೌಂದರನು ಸಿಟ್ಟಿನಿಂದ

ವೃದ್ಧನ ಕೈಯೊಳಗಿನ ಪ್ರಮಾಣ ಪತ್ರವನ್ನು ಕಸಿದುಕೊಂಡು ಹರಿದು ಹಾಕಿದನು. ಆಗ ವೃದ್ಧನು "ಎಲವೋ ನೀನು ನರಸಿಂಗ ಮೊನೆಯರ ಪುತ್ರನಲ್ಲ. ಅವರ ಸಾಕುಮಗನು. ಯಸ್ಯಜ್ಞಾನಿದೇವಿ ಹಾಗು ಜಡೆಯ್ಯ ನಾಯನಾರರ ಮಗನು ನನ್ನ ತೊತ್ತಿನ ಮಗನು. ಈಗ ನೀನು ವಯಸ್ಸಿಗೆ ಬಂದಿರುವಿ. ನಾನು ಮುದುಕನಾಗಿರುವೆನು. ಈಗಲಾದರೂ ನೀನು ನನ್ನ ಶುಶ್ರೂಷೆಗೆ ನಡೆ" ಎಂದನು.

ಆದರೂ ಸೌಂದರನಂಬಿಯು ಸುಮ್ಮನಿರುವಾಗ ಮುದುಕನು ಒಂದು ಪ್ರಮಾಣಪತ್ರವನ್ನು ಹರಿದು ಹಾಕಿದರೆ ಇನ್ನೂ ಒಂದು ಪತ್ರ ನನ್ನ ಬಳಿ ಯಿದೆ. ಅದನ್ನು ಬೇಕಾದವರು ನೋಡಿಕೊಳ್ಳಬಹುದು ಎಂದು ಕೂಡಿದ ಜನರೆದುರು ತೋರಿಸಿದನು. ಅದರಲ್ಲಿ ನಂಬಿಯಂಬವನನ್ನು ಇಂಥ ದಿವಸ ಉತ್ತುಂಗ ಚೋಳನಿಗೆ ಕೊಡಲಾಗಿದೆ. ಎಂದು ಬರೆಯಲಾಗಿತ್ತು. ಇದ್ಯ ನಿಜಸಂಗತಿಯೆಂದು ಕೆಲವರು ಒಪ್ಪಿಕೊಂಡರು. ಆಗ ಸೌಂದರನಿಗೆ ಅತೀವ ಕೋಪವು ಬಂದು ಆ ಪತ್ರವನ್ನು ಹರಿದು ಹಾಕಿ ಮುದುಕನನ್ನು ಕೊಲ್ಲ ಬೇಕೆಂದು ಅವನ ಬೆನ್ನುಹತ್ತಿದನು. ಆಗ ಆ ಮುದುಕನು ಓಡುತ್ತ ಹೋಗಿ ಶಿವಾಲಯದೊಳಗೆ ಹೊಕ್ಕನು. ನಂಬಿಯೂ ಅವನ ಹಿಂದೆಯೇ ಹೋಗಲು ಆ ಮುದುಕನು ನೋಡು-ನೋಡುವಷ್ಟರಲ್ಲಿ ಲಿಂಗದೊಳಗೆ ಐಕ್ಯನಾದನು. ಆಗ ನಂಬಿಗೆ ಹಿಂದಿನ ಸ್ಮರಣೆಯುಂಟಾಯಿತು. ಶಿವಲಿಂಗ ವನ್ನು ನಾನಾವಿಧವಾಗಿ ಸ್ತುತಿಸತೊಡಗಿದನು.

ಕರುಣಾನಿಧಿಯಾದ ಶಂಕರನು ಮತ್ತೆ ಅವನಿಗೆ ದರುಶವನ್ನಿತ್ತು ಅವ ನಿಗೆ ಸಂತೈಸಿ ತಾಳಗಳನ್ನು ಕೊಟ್ಟು ತಿರುಪಾಡುಗಳನ್ನು ಹಾಡಲು ಹೇಳಿ ನೀನು ಲಿಂಗಗಳಿದ್ದಲ್ಲಿಗೆ ಹೋಗಿ ತಿರುಪಾಡು ಹಾಡಿದ್ದಾದರೆ ನಿನಗೆ ಪ್ರತಿ ದಿನವೂ ಪಡಿ ಹೊನ್ನು ಕೊಡುತ್ತೇನೆಂದು ಹೇಳಿ ಅಂತರ್ಧಾನನಾದನು. ಇದೆಲ್ಲವನ್ನು ನೋಡಿದ ಚೋಳನ ಮಂತ್ರಿಯು— "ಮಹಾನುಭಾವಾ! ನೀನು ಶಿವಕುಮಾರನು ನಮ್ಮನ್ನು ಕಾಯಬೇಕೆಂದು" ಬೇಡಿಕೊಳ್ಳಲು ನಂಬಿಯು ಹಾಗೆಯೇ ಆಗಲೆಂದು ಅವರಿಗೆ ಅಭಯವಿತ್ತನು. ಮುಂದೆ ಶಂಕರನೇ ಕುಂಟಣಿಗನಾಗಿ ಪಾತರದವರ ಮನೆಯಲ್ಲಿ ಜನಿಸಿದ ರುದ್ರಕನ್ಯೆ

ಪರಿವಿನಾಚಿಯನ್ನು ಸೌಂದರನ ವಶಕ್ಕೆ ಬರುವಂತೆ ಮಾಡಿದನು. ಈ ಮಧ್ಯೆ ಅವನು ಅನೇಕ ಶಿವಲಿಂಗಗಳನ್ನು ಸಂದರ್ಶಿಸಿ ಎಷ್ಟೋ ಭಕ್ತ ಜನರಿಗೆ ತನ್ನ ದರ್ಶನವನ್ನಿತ್ತನು. ಸೌಂದರನಂಬಿಯು ಶಿವಕುಮಾರನೆಂದೂ ಶಿವನು ಈತನಿಗೆ ಅನುದಿನವೂ ಪಡಿ ಹೊನ್ನು ಕೊಡುವನೆಂದೂ ನಾಲ್ಕೂ ಕಡೆಗೆ ಖ್ಯಾತಿಯಾಗಿಬಿಟ್ಟಿತ್ತು. (ಆಯಾ ಸಮಯದಲ್ಲಿ ನಂಬಿಯು ಯಾರು ಯಾರಿಗೆ ದರ್ಶನವಿತ್ತಿರುವನೆಂಬ ಬಗೆಗೆ ಬೇರೆ ಬೇರೆ ಶಿವಶರಣರ ಚರಿತ್ರೆಯಲ್ಲಿ ಬಂದುದರಿಂದ ಮತ್ತೆ ಮತ್ತೆ ಅದನ್ನೇ ಇಲ್ಲಿ ಹೇಳುವದು ಅಪ್ರಸ್ತುತ)

ಇದೇ ರೀತಿ ಸೌಂದರನಂಬಿಯು ದಿನಂಪ್ರತಿಯೂ ಒಂದೊಂದು ಶಿವಲಿಂಗದೆದುರು ತಿರುಪಾಡುಗಳನ್ನು ಹಾಡುತ್ತ ಭಕ್ತರನ್ನು ಸಂದರ್ಶಿಸುತ್ತ ಪರಿವೆನಾಚಿಯೊಂದಿಗೆ ಸುಖಪಡುತ್ತಿರಲು ಇನ್ನೋರ್ವ ರುದ್ರಕನ್ಯೆಯಾದ ಈಶಾನ ಶೆಟ್ಟಿ ಶಿವದೇವಿಯರ ಗರ್ಭದಲ್ಲಿ ಜನಿಸಿದ ಸಂಕಿಲನಾಚಿಯನ್ನೂ ಈಶ ಪ್ರೇರಣೆಯಿಂದ ಮದುವೆಯಾಗಿ ಅವಳೊಂದಿಗೆ ಸುಖದಿಂದಿದ್ದು ರುದ್ರಾಣಿಯ ವಾಣಿಯನ್ನು ನಿಜಗೊಳಿಸಿದನು. ಈ ರೀತಿಯಾಗಿರುತ್ತಿರಲು ಅವನು ಕೊನೆಗೆ ಇಂದ್ರನು ದಯಪಾಲಿಸಿದ ಐರಾವತದ ಮೇಲೆ ಕುಳಿತುಕೊಂಡು ಚಾರಮನೊಂದಿಗೂ ಹಾಗು ನಂದಿಧ್ವಜನಾದ ಕುರುಂಬನೊಂದಿಗೂ ಕೈಲಾಸವನ್ನು ಸೇರಿದನು.

ಕೈಲಾಸದ ಹೆಬ್ಬಾಗಿಲದಲ್ಲಿ ನಂದಿ ಮಹಾಕಾಳರು ಚಾರಮನನ್ನು ಒಳಗೆ ಬಿಡದೆ ತಡೆಯಲು ಸೌಂದರನು "ಚಾರಮಾ! ನೀನು ಇಲ್ಲಿಯೇ ಇರು. ಆ ಮೇಲೆ ನಿನ್ನನ್ನು ಕರೆಯಿಸಿಕೊಳ್ಳುತ್ತೇನೆ." ಎಂದು ಒಳಗೆ ಹೋಗಿ ಶಿವನ ಪಾದಗಳಿಗೆರಗಿ ಹೆಬ್ಬಾಗಿಲಿನ ಬಳಿಯ ಸಂಗತಿಯನ್ನು ನಿವೇದಿಸಿದನು. ಆಗ ಶಿವನು ಚಾಮರನಿಗೆ ಉಪದೇಶವೀಯಲು ನಂದಿಗೆ ಆಜ್ಞಾಪಿಸಲು ನಂದಿಯು ಹೋಗಿ ಚಾರಮನಿಗೆ ಉಪದೇಶವಿತ್ತು ಒಳಗೆ ಕರೆ ತಂದನು. ಈ ರೀತಿಯಾಗಿ ಪರಶಿವನು ಚಾರಮನಿಗೆ ಗಣಪದವಿಯನ್ನೂ ಸೌಂದರ ನಂಬಿಯಾದ ಪುಷ್ಪದತ್ತನಿಗೆ ಅವನ ಮೊದಲಿನ ಸ್ಥಾನವನ್ನೂ ಕೊಟ್ಟು ಕಾಪಾಡಿದನು.

ಈ ವಿಧದೊಳರವತ್ತು ಮೂವರ ಚರಿತ್ರವನು ।
ಮೂವರನ ಕರುಣ ಶರಧಿಮಿಗೆ ಮೀರುತಿರ ।
ಲೋವಿಕೇಳ್ದವನೆ ಕೃತ ಕೃತ್ಯ ॥

—ಶ್ರೀ ನಿಜಗುಣ ಶಿವಯೋಗಿಗಳು.

# ಶಿವಭಕ್ತರ ದಾರಿ ದೀಪಗಳು

ಕರುಣಾಮಯಿಯೂ ದೇವದೇವನೂ ಆದ ಮಹಾದೇವನು ವಿಶುದ್ಧವಾದ ವಾಯುವನ್ನು ಹಾಗು ನಿರೋಗದಾಯಕವಾದ ರವಿ–ರಶ್ಮಿಯನ್ನು ಬಡವ–ಬಲ್ಲಿದ; ಗಂಡು–ಹೆಣ್ಣು ಎಂಬ ಯಾವುದೇ ಭೇದವಿಲ್ಲದೆ ಸರ್ವರ ಸಮಾನ ಉಪಯೋಗಕ್ಕಾಗಿ ದಯಪಾಲಿಸಿರುವನು. ಅದರ ಉಪಯೋಗವನ್ನು ಕೂಡ ಎಲ್ಲರೂ ತಮತಮಗೆ ತಿಳಿದ ರೀತಿಯಲ್ಲಿ ಉಪಯೋಗಿಸಿಕೊಳ್ಳುವರು.

**ಶಿವಾರ್ಪಣ :** ಶುದ್ಧವಾದ ಹಾಗೂ ಸಾತ್ವಿಕವಾದ ಆಹಾರವನ್ನು ಪ್ರಸಾದರೂಪವಾಗಿ ಸ್ವೀಕರಿಸುವದು. ಮಿತವಾದ ಆಹಾರ ಸೇವನೆ, ಸಮಯಕ್ಕೆ ಸರಿಯಾಗಿ ನಿದ್ರೆ ಮಾಡುವದು, ಅನಿಷ್ಟ ಚಿಂತನೆಯಿಂದ ನಿರ್ಲಿಪ್ತನಾಗುವದು, ಸದ್ಭಾವನೆಯುಳ್ಳವನಾಗಿ ಸನ್ಮಾರ್ಗದಲ್ಲಿಯೇ ಮುನ್ನಡೆಯುವದು, ಇವೇ ಮೊದಲಾದವುಗಳನ್ನು ಆಚರಣೆಯಲ್ಲಿ ತರುವದು ಶ್ರೇಯಸ್ಕರವಾದುದು. ರೂಪ-ರುಚಿ-ರಸ-ಗಂಧ-ಸ್ಪರ್ಶಗಳೇ ಮೊದಲಾದ ಯಾವತ್ತೂ ಭೋಗವನ್ನು ಶಿವಾರ್ಪಣ ಮೂಲಕ ತೆಗೆದುಕೊಳ್ಳಬೇಕು.

**ಆರೋಗ್ಯ :** ಸರ್ವ ಸಂಪತ್ತುಗಳಲ್ಲಿ ಶರೀರ ಸಂಪತ್ತು ಅರ್ಥಾತ್ ಆರೋಗ್ಯವು ಅತಿ ಹೆಚ್ಚಿನದಾಗಿದೆ. ಬಾಲಕರಿಗೂ, ಬ್ರಹ್ಮಚಾರಿಗಳಿಗೂ, ಗೃಹಸ್ಥರಿಗೂ, ವಾನಪ್ರಸ್ಥದಲ್ಲಿರುವವರಿಗೂ, ಯತಿಗಳಿಗೂ ಕೂಡ ಇದು ಅಗತ್ಯವಾಗಿರಬೇಕಾದ ವಸ್ತುವಾಗಿದೆ. ಶಿವಯೋಗದ ಪೂರ್ಣ ಸಿದ್ಧತೆಯಾಗಬೇಕಾದರೆ ಹಾಗು ಅದು ಶೀಘ್ರದಲ್ಲಿ ಫಲಿಸಬೇಕಾದರೆ ಆರೋಗ್ಯದ ಅವಶ್ಯಕತೆ ಹೆಚ್ಚಿಗಿರುತ್ತದೆ.

**ಪಾಪ–ಪುಣ್ಯ :** ಅಪ್ರಾರ್ಥಿತರಾಗಿ ಇತರರಿಗೆ ಪಾತ್ರವರಿತು ಸಕಾಲಕ್ಕೆ ಉಪಕಾರ ಮಾಡುವದೇ ಪುಣ್ಯವು. ಇತರರನ್ನು ಪೀಡಿಸುವದೇ

ಪಾಪವು. ಮಾನವನು ತನ್ನ ಕರ್ತವ್ಯವನ್ನರಿತುಕೊಂಡು ಸರಿಯಾಗಿ ವರ್ತಿಸಿ ಆತ್ಮದ ಉದ್ಧಾರ ಮಾಡಿಕೊಳ್ಳುವದು ಪುಣ್ಯಕರ್ಮವು. ಕೆಟ್ಟ ಕೆಲಸಗಳಲ್ಲಿ ತೊಡಗಿ ಅಧಃಪತನವನ್ನು ಬರಮಾಡಿಕೊಳ್ಳುವದೇ ಪಾಪಾಚರಣೆಯಾಗಿದೆ.

**ಶೀಲ :** ಧರ್ಮ-ಅರ್ಥ-ಕಾಮ–ಮೋಕ್ಷಗಳೆಂಬ ಪುರುಷಾರ್ಥಗಳಿಗೆ ಶೀಲವೆಂಬುದೇ ತಳಹದಿಯಾಗಿದೆ. ನಿಷ್ಕಲಂಕವಾದ, ಸ್ತುತ್ಯವಾದ ಸದ್ವರ್ತನೆಯು ಸಕಲ ಸಾಧನೆಗಳಿಗೂ ಸೋಪಾನವಾಗಿದೆ.

**ಶಿವಭಕ್ತ :** ಶಿವೋಪಾಸಕರಾದವರು ವಿಭೂತಿ ರುದ್ರಾಕ್ಷಗಳನ್ನು ಧರಿಸಿ ಪಂಚಾಕ್ಷರ ಮಹಾಮಂತ್ರವನ್ನು ಮನಸ್ಸಿಗೆ ಬಂದಂತೆ ಕೂಗುತ್ತ ಹೊರಟರೆ ಶಿವಭಕ್ತನು ಪಾಲಿಸತಕ್ಕ ಕಟ್ಟಳೆಗಳು ತೀರಿದಂತಾಗುವದಿಲ್ಲ. ಇನ್ನುಳಿದ ಐದು ಆವರಣಗಳಾದ ಗುರು-ಲಿಂಗ-ಜಂಗಮ-ಪಾದೋದಕ—ಪ್ರಸಾದಗಳಲ್ಲಿ ಆಡಂಬರವಿಲ್ಲದ ಸರಳವಾದ ಪ್ರೇಮವನ್ನು ತಳೆದು, ಸದ್ಧರ್ಮ ಗುರು ಪರಂಪರಾಗತರಾದ ಪೂಜ್ಯ ಗುರುಗಳಿಂದ ಬೋಧವನ್ನು ಪಡೆದು ಶಾಸ್ತ್ರೋಕ್ತವಾಗಿ ಶಿವಮಂತ್ರ ಯುಕ್ತರಾದವರೇ ಶಿವಭಕ್ತರೆಂದು ಕರೆಯಿಸಿಕೊಳ್ಳಲು ಯೋಗ್ಯರಾಗುತ್ತಾರೆ.

**ಪಂಚಾಚಾರ :** ಶಿವಭಕ್ತರು ಷಟ್‌ಸ್ಥಲಗಳನ್ನು ಅರಿತುಕೊಂಡು, ಅಷ್ಟಾವರಣ ನಿಷ್ಠರಾಗಿ ಪಂಚಾಚಾರ ನಿರತರಾಗತಕ್ಕದ್ದು. ಶಿವಧ್ಯಾನದಲ್ಲಿ ಆಸಕ್ತರಾಗಿರಬೇಕು. ಅಲ್ಲದೆ ಶಿವನನ್ನುಳಿದು ಇತರ ದೇವತೆಗಳ ಉಪಾಸನೆಯನ್ನು ಮಾಡದಿರುವದೇ ಲಿಂಗಾಚಾರವು. ಪ್ರತಿದಿನವೂ ತಪ್ಪದೆ ಮೂರು ವೇಳೆ ಅಂದರೆ ತ್ರಿಕಾಲದಲ್ಲಿ ಶುಚಿರ್ಭೂತನಾಗಿ ಶಿವಲಿಂಗಾರ್ಚನಪೂರ್ವಕವಾಗಿ ಶಿವಮಂತ್ರವನ್ನು ಜಪಿಸುವದೇ ಸದಾಚಾರವಾಗಿದೆ. ಶಿವಭಾವನೆಯುಳ್ಳವನಾಗಿ, ಪವಿತ್ರವಾದ, ಆಚರಣೆಯಿಂದ ನೈಜ ಶಿವಭಕ್ತರಿಗೆಲ್ಲ ಕಿಂಕರತೆಯನ್ನು ಅಕ್ಕರತೆಯಿಂದ್ಲ ವಹಿಸುವದೇ ಭೃತ್ಯಾಚಾರವೆನಿಸುವದು.

ಸದಾಕಾಲವೂ ಶುದ್ಧ ಮನಸ್ಸಿನಿಂದ ಶಿವಾಗಮೋಕ್ತವಾದ, ಇಷ್ಟಲಿಂಗ ವ್ರತವನ್ನಾಚರಿಸುವದೇ ಶಿವಾಚಾರವಾಗಿದೆ. ಶಿವನಿಂದೆ, ಶಿವ—ಸಂಬಂಧವಾದ ಅಷ್ಟಾವರಣ ನಿದೆ, ಶಿವಧರ್ಮದ ನಿಂದೆ ಹಾಗು ಶಿವಶಾಸ್ತ್ರ

ಗಳ ನಿಂದೆಯನ್ನು ಸಹಿಸದಿರುವದು, ಹಾಗು ಸಾಧ್ಯವಾದಲ್ಲಿ ದುಷ್ಟರಾದ ಆ ನಿಂದಕರನ್ನು ನಿಗ್ರಹಿಸುವದು, ಹಾಗು ದಂಡಿಸುವದು ಗಣಾಚಾರ ವೆನಿಸುವದು.

**ದೇವರು ಸರ್ವಸಾಕ್ಷಿ :** ಪೃಥ್ವಿ, ಅಪ್ಪು, ತೇಜ, ಆಕಾಶ, ವಾಯು ಎಂಬ ಪಂಚಮಹಾಭೂತಗಳೂ ಹಾಗು ಸೂರ್ಯ, ಚಂದ್ರ ಹಾಗು ಆತ್ಮ ಇವು ಪರಮಾತ್ಮನ ಅಷ್ಟತನುಗಳು. ಆದುದರಿಂದಲೇ ಎಂಥ ಬಲಾಢ್ಯ ನಾಗಲಿ, ಇಲ್ಲವೆ ಯಾವುದೇ ಸಮರ್ಥ ಪ್ರಾಣಿಯಾಗಲಿ, ಆ ಮಹಾದೇ ವನು ಅರಿಯದಂತೆ ಏನನ್ನೂ ಮಾಡಲು ಸಾಧ್ಯವಿಲ್ಲ. ದೇವರು ಸರ್ವ ಸಾಕ್ಷಿಭೂತನೆನ್ನುವದು ಇದೇ ಕಾರಣಕ್ಕಾಗಿ.

**ಧ್ಯಾನ :** ಜಾಗರ, ಸ್ವಪ್ನ, ಸುಷುಪ್ತಿ, ತೂರ್ಯಾ, ತೂರ್ಯಾತೀತೆ ಎಂಬ ಪಂಚಾವಸ್ಥೆಗಳಲ್ಲಿ ಶಿವಧ್ಯಾನ ವಿರಹಿತನಾಗದಿರುವಿಕೆಯು ಶಿವ ಭಕ್ತನ ಲಕ್ಷಣಗಳಲ್ಲಿ ಗಣನೀಯವಾದ ಮುಖ್ಯ ವಿಷಯವಾಗಿರುವದು. ಮನುಷ್ಯನು ಯಾವುದೇ ಕಾರ್ಯದಲ್ಲಿ ತೊಡಗಿದ್ದರೂ ಪರಮಾತ್ಮನ ನಿಜ ಜ್ಞಾನವು ತಪ್ಪಕೂಡದು-'' ನೀರು ತುಂಬಿದ ಕೊಡವನ್ನು ತಲೆಯ ಮೇಲೆ ಇರಿಸಿಕೊಂಡು ಹೊರಟಂಥವಳು, ತನ್ನ ಜೊತೆಗಾರ್ತಿಯರೊಂದಿಗೆ,ಇಲ್ಲವೆ ಬೇರೆಯವರೊಂದಿಗೆ ಮಾತನಾಡುತ್ತ, ನಗುತ್ತ-ಕಲೆಯುತ್ತ ಬರುತ್ತಿದ್ದರೂ ತನ್ನ ತಲೆಯ ಮೇಲಣ ಕೊಡದ ಬಗ್ಗೆ ಜಾಗ್ರತೆ ವಹಿಸಿ ಅದು ಬೀಳದಂತೆ ಮನೆಗೆ ತರುವಳು.'' ಅದೇ ರೀತಿಯಾಗಿ ಮಾನವನು ಕೂಡ ತಾನು ಯಾವುದೇ ಕೆಲಸದಲ್ಲಿ ನಿರತನಾಗಿದ್ದರೂ ಪರಮಾತ್ಮನ ಧ್ಯಾನವನ್ನು ಮರೆ ಯತಕ್ಕದ್ದಲ್ಲ.

**ಉಪಾಸನೆ :** ಪ್ರೇಮದಿಂದ ಪ್ರೇಮವು ಬೆಳೆಯುವದು. ಅದೇ ಪ್ರೇಮವು ಸ್ನೇಹದಿಂದ ಇನ್ನಷ್ಟು ಹೆಚ್ಚಾಗುವದು. ಅನುರಾಗವು ಕೂಡ ಪ್ರೇಮದಿಂದಲೆ ಬೆಳೆಯುವದು- ಸ್ನೇಹ, ಪ್ರೀತಿ, ಪ್ರೇಮ ಹಾಗು ಅನು ರಾಗ ಇವು ದೇವರಲ್ಲಿಯೂ ಹಾಗು ಪೂಜ್ಯರಾದ ಗುರುಗಳಲ್ಲಿಯೂ ಉಂಟಾ ದರೆ ಅದು ಭಕ್ತಿಯೆಂದು ಕರೆಯಿಸಿಕೊಳ್ಳುವದು.

ಭಗವಂತನಲ್ಲಿಯೂ ಹಾಗು ಆತನ ಸ್ವರೂಪ-ಪ್ರತಿನಿಧಿ ಮತ್ತು ಅವ

ತಾರವೆನಿಸುವ ಗುರು–ಲಿಂಗ–ಜಂಗಮರಲ್ಲಿ ಭಕ್ತಿಯು ಹೆಚ್ಚಾದಂತೆ, ಖಂಡಿತವಾಗಿಯೂ ಗುರುದೇವತಾ ಕಟಾಕ್ಷವು ಲಭಿಸುತ್ತದೆ. ಕುಟಿಲವಿಲ್ಲದ ಭಕ್ತಿಯು ಅಧಿಕವಾಗಿ, ನೈಸರ್ಗಿಕವಾದ ಶಿವನಿಷ್ಠೆಯು ಬಲಿತು ಪರಿಶುದ್ಧನಾಗಿ, ಶಿವಾಭಿನ್ನನಾಗಿ, ಶಿವತಾದಾತ್ಮ್ಯವನ್ನು ಹೊಂದಿ ದೇವದೇವನಾದ ಮಹಾದೇವನ ಮೊರೆಹೊಕ್ಕು ತ್ರಿಕರಣಪೂರ್ವಕವಾಗಿ ಶಂಭುವಿನನ್ನುಉಪಾಸಿಸಲು, ಈಶಾನುಗ್ರಹದಿಂದ ಸಕಲ ಮನೋರಥಗಳು ಈಡೇರುವದು ನಿಶ್ಚಿತ.

**ಅನನ್ಯಭಾವ** : ಶಿವಧರ್ಮ ರತಿಯೊಡನೆ ಶಿವಭಿನ್ನನಾಗಿ, ಆತ್ಮಾರಾಮನಾಗಿ, ಮನೋವಾಕ್ಕಾಯಗಳಿಂದ ಶಿವನನ್ನು ಆರಾಧಿಸುವಂಥವರಿಗೆ, ಉನ್ಮಾದ, ಮದನ, ಮೋಹನ,ಸಂತಾಪ ಹಾಗು ವಶೀಕರಣಗಳೆಂಬ ಪಂಚ ಬಾಣಗಳು ಏನನ್ನೂ ಮಾಡಲಾರವು. ಅವುಗಳ ಬಾಧೆಯು ತಟ್ಟಲಾರದು. ಪರಶಿವನು ಮೊದಲೇ ಕಾಮವಿರೋಧಿಯು· ಹೀಗಿರುವಾಗ ಆ ಮಹಾಮೂರ್ತಿಯನ್ನು ಅನನ್ಯಭಾವದಿಂದ ಪೂಜಿಸುವ ಆತನ ಭಕ್ತರಿಗೆ ಕಾಮನು ಏನನ್ನು ಮಾಡಬಲ್ಲನು ?

**ವಿಭೂತಿ** : ಶಿವನ ಸದ್ಯೋಜಾತಾದಿ ಮುಖಗಳಿಂದ ನಂದಿ, ಭದ್ರೆ, ಸುರಭಿ, ಸುಶೀಲೆ, ಸುಮನೆ ಎಂಬ ಗೋವುಗಳು ಹುಟ್ಟಿ ವಿಭೂತಿ, ಭಸಿತ, ಭಸ್ಮ, ರಕ್ಷೆಗಳು ಅನುಕ್ರಮವಾಗಿ ಹುಟ್ಟಿಕೊಂಡವು. ಶಾಸ್ತ್ರೋಕ್ತವಾಗಿ ತಯಾರಿಸಿದ ಇವುಗಳ ಕ್ರಮಪೂರಿತ ಧರಿಸುವಿಕೆಯಿಂದ ಸರ್ವಕಂಟಕಗಳು ನಿವಾರಣೆಹೊಂದಿ ಅವರ್ಣನೀಯವಾದ ಶುಭವುಂಟಾಗುವದು.

**ರುದ್ರಾಕ್ಷ** : ತ್ರಿಪುರ ಸಂಹಾರದ ಕಾಲಕ್ಕೆ ಪರಶಿವನ ಕಣ್ಣೀರಿನ ಹನಿಗಳು ಇಳೆಗೆ ಬಿದ್ದು ಅವುಗಳೇ ಪವಿತ್ರವಾದ ರುದ್ರಾಕ್ಷಗಳಾದವು. ಒಂದರಿಂದ ಹದಿನಾಲ್ಕು ಮುಖಗಳವರೆಗೆ ಇರುವ ರುದ್ರಾಕ್ಷಗಳನ್ನು ಸ್ಥಾನವರಿತು, ಸಂಖ್ಯಾಕ್ರಮವನ್ನು ತಿಳಿದುಕೊಂಡು ( ರುದ್ರಾಕ್ಷಗಳನ್ನು ಸಂಖ್ಯಾಕ್ರಮದಿಂದ ಯಾವ ರೀತಿ ಧರಿಸಬೇಕೆಂಬುದನ್ನು ಮುಂದೆ ಹೇಳಲಾಗಿದೆ. ನೋಡಬೇಕು.) ಪರಿಶುದ್ಧವಾದ ಮನದಿಂದ ಧರಿಸಿದರೆ ಪಾಪವೆಲ್ಲ ಅಳಿದು ಬಣ್ಣಿಸಲಸದಳವಾದ ಕ್ಷೇಮವು ಉಂಟಾಗುವದು.

**ಗುರು** : 'ಗು' ಕಾರದಿಂದ ಕತ್ತಲೆಯೆಂದೂ, 'ರು' ಕಾರದಿಂದ

ಸೂರ್ಯೋದಯವೆಂದೂ ಗುರು ಶಬ್ದದ ಉತ್ಪತ್ತಿಯ ಬಗೆಗೆ ಆಗಮದಲ್ಲಿ ಹೇಳಲಾಗಿದೆ. ಶರಣಾಗತನಾದ ಶಿಷ್ಯನ ಅಜ್ಞಾನವೆಂಬ ಕಾರ್ಗತ್ತಲೆಯನ್ನು ಹೋಗಲಾಡಿಸುವ, ಭಾಸ್ಕರನೋಪಾದಿಯಲ್ಲಿರುವ ಮಹಾತ್ಮನಿಗೆ ಗುರುವೆಂದು ಕರೆಯುವರು.

ಜಿತೇಂದ್ರಿಯನು, ಸರ್ವಶುಭಲಕ್ಷಣ ಸಂಪನ್ನನು, ಶಿವಾಗಮಜ್ಞನು, ನಿರ್ಮಲನು, ಬ್ರಹ್ಮವೇತ್ತನು, ಏಕೋತ್ತರ ಶತಸ್ಥಲವನ್ನರಿತು ಸರಿಯಾಗಿ ಆಚರಿಸುವವನು, ಭಕ್ತಾನುಗ್ರಹ ತತ್ಪರನೂ ಆದ ಮಹಾ ಮಹಿಮನನ್ನೇ ಗುರುವೆಂದು ತಿಳಿಯತಕ್ಕದ್ದು. ಇವಿಷ್ಟು ಗುಣಗಳುಳ್ಳ ಗುರುವಿನೊಂದಿಗೆ ಕಾಯಾ–ವಾಚಾ-ಮನಸಾ ದಾಸೋಹಂ ಭಾವದಿಂದ ನಡೆದುದೇ ಆದರೆ ಆ ಶಿಷ್ಯೋತ್ತಮನ ಸಕಲ ಇಷ್ಟಾರ್ಥಗಳು ಸಿದ್ಧಿಸುವದರಲ್ಲಿ ಸಂಶಯವಿಲ್ಲ.

**ಲಿಂಗ :** ಚರ–ಚರಾತ್ಮಕವಾದ ಈ ಪ್ರಪಂಚವು ಯಾವ ಪರವಸ್ತುವಿನಲ್ಲಿ ಬೆರೆತು ಹೋಗುವದೋ, ಲೀನವಾಗುವದೋ ಅದರಂತೆ ಲಯ್ಯ ಹೊಂದಿ ಪುನಃ ಹುಟ್ಟುವದೋ ಆ ವಿಶಿಷ್ಟ ವಸ್ತುವೇ ಲಿಂಗವು. ಲಿಂಗವೇ ಪರಬ್ರಹ್ಮವೆಂದು, ಶಂಕರನೇ ಲಿಂಗ ರೂಪನಾಗಿ ಸದ್ಗುರುಗಳ ಕೃಪಾಕಟಾಕ್ಷದಿಂದ, ಶಿಷ್ಯನ ಕರಕಮಲದಲ್ಲಿ ಇಷ್ಟಲಿಂಗವೆಂಬ ಅಭಿದಾನದಿಂದ ನೆಲೆಸುವನು.

ಶರೀರದ ಮೇಲೆ ಧರಿಸಲು ಯೋಗ್ಯವಾಗುವಂತೆ ಇಷ್ಟಲಿಂಗವು; ಕೇವಲ ಮನಸ್ಸಿನಿಂದ ರಮಮಾಣನಾಗುವದಕ್ಕೆ ಪ್ರಾಣಲಿಂಗವು; ಭಾವದಿಂದ ಉಪಚರಿಸಲು ಸಾಧಿಸುವಂತೆ ಭಾವ ಲಿಂಗವು; ಈ ರೀತಿಯಾಗಿ ಮೂರು ವಿಧವಾದ ಇಷ್ಟ–ಪ್ರಾಣ–ಭಾವ ಲಿಂಗಗಳನ್ನು, ಸ್ಥೂಲ, ಸೂಕ್ಷ್ಮ, ಕಾರಣ, ತನುಗಳಲ್ಲಿ ಯೋಜಿಸಲು ಅನುಕೂಲವಾಗುವಂತೆ ಸದ್ಗುರುವು ಅನುಗ್ರಹಿಸುವನು. ಈ ಮೂರೂ ಲಿಂಗಗಳು ಪರಸ್ಪರ ಸಂಬಂಧಪಟ್ಟವುಗಳಾಗಿದ್ದು, ತ್ರಿಕರಣಶುದ್ಧಿಯಿಂದ, ಶ್ರೀ ಗುರುಗಳ ಅಪ್ಪಣೆಯ ಮೇರೆಗೆ ಲಿಂಗರತನಾದರೆ ಭವರೋಗವನ್ನು ನೀಗಿ ಇಚ್ಛಿಸಿದ ಫಲವು ಕೈಸೇರುವದರಲ್ಲಿ ಸಂದೇಹವಿಲ್ಲ.

**ಜಂಗಮ :** ತನ್ನಲ್ಲಿಯ ಜ್ಞಾನ ಹಾಗು ಕ್ರಿಯಾಶಕ್ತಿಗಳಿಂದ ಪ್ರಪಂಚವನ್ನು ಪ್ರಕಾಶಗೊಳಿಸುತ್ತಿರುವ ಪರಶಿವನಿಗಿಂತಲೂ, ತಾನು ಬೇರೆ

ಅಲ್ಲವೆಂದು ದೃಢವಾದ ನಂಬುಗೆಯಿಂದ ಸ್ವ-ಸ್ವರೂಪವನ್ನು ತಿಳಿದುಕೊಳ್ಳು ವಂಥ ಪುರುಷಶ್ರೇಷ್ಠನು ಜಂಗಮನೆಂದೆನ್ನಿಸಿಕೊಳ್ಳುವನು. ಶಿವತತ್ವವನ್ನು ಅರಿತು, ಶೀವೋತ್ಕರ್ಷೆಯ ಚಿಂತನೆಯಲ್ಲಿ ಮಗ್ನನಾಗಿ ದಯಾರಸಭರಿತ ನಾಗಿ ಉತ್ಕೃಷ್ಠ ಆಚಾರಸಂಪನ್ನನಾಗಿ, ಶಿವಾನಂದದಲ್ಲಿ ಮಗ್ನನಾಗಿರ್ರು ವದೇ ಜಂಗಮ ಲಕ್ಷಣವು. ಈ ರೀತಿಯಾಗಿರುವಂಥ ಮಹಾತ್ಮನನು ಸಾಕ್ಷಾತ್ ಶಿವನೆಂದು ಭಾವಿಸಿ ಪೂಜಿಸತಕ್ಕದ್ದು. ಪರಮಾತ್ಮನೇ ಗುರ್ರು ರೂಪನಾಗಿಯೂ, ಜಂಗಮರೂಪನಾಗಿಯೂ, ಲಿಂಗರೂಪನಾಗಿಯೂ ಇರುವದರಿಂದ, ಆ ಮೂವರಲ್ಲಿಯೂ ಯಾವುದೇ ತರಹದ ಭೇದವನ್ನು ಎಣಿ ಸದೆ, ಅವರೆಲ್ಲರಲ್ಲಿಯೂ ಏಕರೂಪತೆಯನ್ನೇ ಕಾಣಬೇಕು.

**ಮಂತ್ರ :** ಆದಿಯೂ ಅಂತವೂ ಇಲ್ಲದ ನಾಶರಹಿತನಾದ, ನಿತ್ಯ ನಾದ, ಸರ್ವಜ್ಞನಾದ, ಸರ್ವಕತೃತ್ವ ಶಕ್ತಿಯುಳ್ಳ, ಕೇವಲ ಇಚ್ಛಾ ಮಾತ್ರದಿಂದಲೆ ಸೃಷ್ಟಿ-ಸ್ಥಿತಿ ಲಯಗಳನ್ನು ಉಂಟು ಮಾಡಲು ಸಮರ್ಥ ನಾದ, ಭಕ್ತಾನುಗ್ರಹ ತತ್ಪರನಾದ, ಸ್ವಪ್ರಕಾಶನಾದ ಪರಮಾತ್ಮನ ಅನಂತ ನಾಮಗಳಲ್ಲಿ ಮುಖ್ಯಾಭಿಧಾನವಾದ "ಶಿವ" ಎಂಬ ಪುಣ್ಯಪ್ರದವಾದ ಅಕ್ಷರದ್ವಯಗಳನ್ನೊಳಗೊಂಡಿರುವ ಪಂಚಾಕ್ಷರಿ ಮಹಾಮಂತ್ರವೇ ಸರ್ವ ಮಂತ್ರಗಳಲ್ಲಿ ಶ್ರೇಷ್ಠವಾದುದಾಗಿದ್ದು ಅದು ಮಂತ್ರರಾಜವೆಂದು ವೇದಾಗ ಮೋಪನಿಷತ್ತುಗಳು ಸಾರುತ್ತವೆ ಇದನ್ನು ಸಲಕ ಶಿವಭಕ್ತರೂ ಜಪಿಸ ತಕ್ಕದ್ದು — ಅಮೋಘವಾದ ಓಂಕಾರದೊಡನೆ ಪಂಚಾಕ್ಷರ ಮಂತ್ರವನ್ನು ಜೋಡಿಸಿದರೆ ಅದು ಷಡಕ್ಷರ ಮಂತ್ರವಾಗುವದು.

ಶುದ್ಧ ಮನಸ್ಸಿನಿಂದ ಗುರುಬೋಧದ ಮೇರೆಗೆ ಶಿವಮಂತ್ರವನ್ನು ಜಪಿಸುವವನಿಗೆ ಯಾವುದೂ ಅಸಾಧ್ಯವಿಲ್ಲ. ವಾಚಕ, ಉಪಾಂಶು, ಮಾನಸಗಳೆಂಬ ತ್ರಿವಿಧ ಜಪಗಳಲ್ಲಿ ಫಲ ತಾರತಮ್ಯದಿಂದ ಹೇಳಬೇಕೆಂದರೆ ವಾಚಕಕ್ಕಿಂತ ಉಪಾಂಶುವು ಹೆಚ್ಚೆಂದೂ ಉಪಾಂಶುವಿಗಿಂತಲೂ ಮಾನ ಸವು ಹೆಚ್ಚೆಂದೂ ಜ್ಞಾನಿಗಳ ಅಭಿಪ್ರಾಯವಾಗಿದೆ. ಬಾಲ್ಯದಲ್ಲಿಯೇ ಪಠಿ ಸಿದ ಶಿವಮಂತ್ರ ಪ್ರಭಾವದಿಂದ ಕೃತಕೃತ್ಯರಾದ ಉಪಮನ್ಯು ಹಾಗು ಮಾರ್ಕಾಂಡೇಯರೇ ಈ ಮಾತಿಗೆ ಸಾಕ್ಷಿ.

**ಪಾದೋದಕ :** ಶ್ರೀಗುರು ಜಂಗಮರ ಪಾದದಲ್ಲಿ ಜಗತ್ತಿನಲ್ಲಿರುವ

ಎಲ್ಲ ಮಹಾತೀರ್ಥಗಳೂ, ನೆಲೆಸಿರುವವೆಂದು ಶೃತ್ಯಾಗಮಗಳು ಸಾರುತ್ತವೆ. ಪಾದೋದಕವೆಂದರೆ, ಪರಮ ಪವಿತ್ರವಾದ ಶ್ರೀ ಪಾದದ ಚಿದ್ಘನೈಕರಸವೆಂದು ತಿಳಿಯತಕ್ಕದ್ದು. ಭಕ್ತರ ಹಿತಾರ್ಥವಾಗಿ ಮಹಿಮರು ಕರುಣಿಸಿದ ಅನುಪಮವಾದ ರಸವೇ ಪಾದೋದಕವು. ಇದಕ್ಕೆ ಸರಿಸಮಾನವಾದ ವಸ್ತುವು ಜಗತ್ತಿನಲ್ಲಿ ಬೇರೊಂದಿಲ್ಲ. ಅಂತರಂಗ ಶುದ್ಧಿಯಿಂದ ಈ ಅಮೃತವನ್ನು ಸೇವಿಸುವಂಥವನೇ ಈ ಜಗತ್ತಿನೊಳಗೆ ಧನ್ಯನು. ಅತ್ಯಂತ ಶ್ರೇಷ್ಠವಾದ ಹಾಗು ಬಹುಗೋಪ್ಯವಾದ ದಶವಿಧ ಪಾದೋದಕ ಕ್ರಮವನ್ನು ಭಕ್ತನಾದವನು ಸದ್ಗುರುವಿನಿಂದ ಅರಿತುಕೊಳ್ಳತಕ್ಕದ್ದು.

**ಪ್ರಸಾದ** : ಭಕ್ತನಾದಂಥವನು ಯಾವುದೇ ವಸ್ತುವನ್ನು ಸ್ವೀಕರಿಸಬೇಕಾದರೂ ಅದನ್ನು ಶಿವಾರ್ಪಣ (ಗುರು–ಲಿಂಗ-ಜಂಗಮರ ಅರ್ಪಣ) ಮೂಲಕವಾಗಿ, ಪ್ರಸಾದ ರೂಪವಾಗಿ ಸೇವಿಸತಕ್ಕದ್ದು. ಗುರು–ಲಿಂಗ–ಜಂಗಮರಿಗೆ ಧರಿಸಿದ ಹೂ–ಪತ್ರಿಗಳು, ಫಲ-ನೈವೇದ್ಯಗಳು ನಿರ್ಮಾಲ್ಯವೆಂದು ತಿಳಿಯಲ್ಪಟ್ಟು ಪ್ರಸಾದದಲ್ಲಿ ಎಣಿಸಲಾಗುತ್ತಿದೆ. ಗುರು-ಜಂಗಮರು ಸೇವಿಸಿ ಮಿಕ್ಕ ಪ್ರಸಾದ ಚರಶೇಷವೆಂದು ವಿಖ್ಯಾತವಾಗಿದೆ. ಪ್ರಸಾದದ ಮಹಿಮೆಯು ಇಂತಿಷ್ಟೇ ಎಂದು ವರ್ಣಿಸಲು ಯಾರಿಗೂ ಸಾಧ್ಯವಿಲ್ಲ. ಈ ರೀತಿ ವರ್ಣನಾತೀತವಾದ ಚರಶೇಷಪ್ರಸಾದವನ್ನು, ನಿರ್ಮಲಚಿತ್ತನಾಗಿ ಭಕ್ತಿಪರವಶನಾಗಿ ಸೇವಿಸುವದರಿಂದ ಸಕಲ ಮನೋಕಾಮನೆಗಳು ಈಡೇರಿ ಅವನು ನಿತ್ಯಾನಂದಮಯನಾಗಿ ಶಿವಸಾನ್ನಿಧ್ಯವನ್ನು ಸೇರುವನು.

**ರುದ್ರಾಕ್ಷಗಳನ್ನು ಧರಿಸುವ ವಿಧಾನ** : ಒಂದು ಮುಖದ ರುದ್ರಾಕ್ಷಿಯೊಂದನ್ನು ಜುಟ್ಟ (ಶಿಖೆಯಲ್ಲಿ) ನಲ್ಲಿ; ಎರಡು, ಮೂರು ಮತ್ತು ಹನ್ನೆರಡು ಮುಖದ ಮೂರು ರುದ್ರಾಕ್ಷಿಗಳನ್ನು ಒಂದೊಂದರಂತೆ ಶಿರಸ್ಸಿನಲ್ಲಿ; ಹನ್ನೊಂದು ಮುಖದ ಮೂವತ್ತಾರು ರುದ್ರಾಕ್ಷಿಗಳನ್ನು ತಲೆಯ ಸುತ್ತು; ಹತ್ತುಮುಖದವೆರಡು, ಏಳುಮುಖದವೆರಡು, ಐದುಮುಖದವೆರಡು, ಈ ಪ್ರಕಾರ ಆರು ರುದ್ರಾಕ್ಷಿಗಳನ್ನು ಎರಡು ಕಿವಿಗಳಲ್ಲಿ; ಆರು ಮುಖದ ಹದಿನಾರು ರುದ್ರಾಕ್ಷಿಗಳನ್ನು ಮತ್ತು ಎಂಟು ಮುಖದ ಹದಿನಾರು ರುದ್ರಾಕ್ಷಿಗಳನ್ನು ಕಂಠದಲ್ಲಿ; ನಾಲ್ಕುಮುಖದಐವತ್ತು ರುದ್ರಾಕ್ಷಿಗಳನ್ನು ಹೃದಯದ (ಎದೆಯ) ಮೇಲೆ; ಹದಿಮೂರು ಮುಖದ ಹದಿನಾರು ರುದ್ರಾಕ್ಷಿಗಳನ್ನು

ಎರಡೂ ಬಾಹುಗಳಲ್ಲಿ; ಒಂಭತ್ತು ಮುಖದ ಹನ್ನೆರಡು ರುದ್ರಾಕ್ಷಿಗಳನ್ನು ಎರಡೂ ಮುಂಗೈಗಳಲ್ಲಿ; ಹದಿನಾಲ್ಕು ಮುಖದ ಒಂದುನೂರಾ ಎಂಟು ರುದ್ರಾಕ್ಷಿಗಳ ಮಾಲೆಯನ್ನು ಯಜ್ಞೋಪವಿತ ( ಜನಿವಾರ ) ವಾಗಿ ಧರಿಸತಕ್ಕದ್ದು.

**ಸಪ್ತ ಷಟ್ಕಂಗಳ ವಿವರಣೆ :** ೧) ಸತ್ಯನಿಷ್ಠೆ, ಪ್ರಾಣಿದಯಾಪರತೆ, ಪ್ರಾಣಿ ಮಾತ್ರದಲ್ಲಿ ದಯಾದೃಷ್ಟಿ, ಕಾರ್ಯದಕ್ಷತೆ, ಕ್ಷಮೆ, ಮತ್ತು ಆತ್ಮೋದ್ಧಾರದ ಹವಣಿಕೆ.

೨) ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮತ್ಸರ ಎಂಬ ಷಡ್ರಿಪುಗಳಿಂದ ದೂರವಿರುವದು.

೩) ಶಮೆ, (ಅಂತಃಕರಣ ನಿಗ್ರಹ ) ದಮೆ (ಬಹಿರೇಂದ್ರಿಯ ನಿಗ್ರಹ) ತಿತಿಕ್ಷೆ ( ಕ್ರೋಧಾದಿ ವಿಕಾರಗಳನ್ನು ತಡೆಯುವದು ) ಉಪರತಿ (ಸಕಲ ಕರ್ಮ ಪರಿತ್ಯಾಗ ) ಶ್ರದ್ಧೆ ( ಶಿವಾಗಮ-ಗುರು-ವಚನಗಳಲ್ಲಿ ನೈಸರ್ಗಿಕ ವಿಶ್ವಾಸ) ಸಮಾಧಿ (ಪುಣ್ಯಮೂರ್ತಿಯಾದ ಗುರುಶ್ರೇಷ್ಠನ ಅಂದರೆ ಶಿವನೇ ಗುರುರೂಪನಾಗಿ ಅವತರಿಸಿರುವ ಮಹಿಮನ ಪವಿತ್ರೋಪದೇಶವು ಚಿತ್ತದಲ್ಲಿ ದೃಢಪಟ್ಟು ಅದನ್ನು ಕಾರ್ಯರೂಪದಲ್ಲಿ ತರುವದು )

೪) ಆಣವಮಲ, ಮಾಯಾಮಲ, ಕಾರ್ಮಿಕಮಲಗಳಿಂದ ವಿದೂರನಾಗಿ ಪುತ್ರೇಷಣ, ದಾರೇಷಣ, ಅರ್ಥೇಷಣ ರಹಿತನಾಗುವಿಕೆ.

೫) ಸ್ವಯ, ಚರ, ಪರಗಳನ್ನು ತಿಳಿದು ಮನೋವಾಕ್ಕಾಯಂಗಳಿಂದ ಬ್ರಹ್ಮಚಾರಿಯಾಗಿ, ದೀನಬಂಧುವಾಗಿ, ಜಗತ್ಕುಟುಂಬ ಭಾವನೆಯು ಕ್ಷಣ-ಕ್ಷಣಕ್ಕೆ ದೃಢವಾಗಿ ವರ್ಧಿಸುವದು

೬) ಶಿವಭಕ್ತರು ಮನನ ಮಾಡಬೇಕಾಗಿರುವ ಏಕೋತ್ತರ ಶತಸ್ಥಲಗಳಲ್ಲಿ ಪ್ರಾಮುಖ್ಯವಾದ ಭಕ್ತ, ಮಹೇಶ, ಪ್ರಾಣಲಿಂಗ, ಪ್ರಸಾದ, ಶರಣ ಐಕ್ಯಸ್ಥಲಗಳನ್ನು ಚನ್ನಾಗಿ ಅರಿತುಕೊಂಡು ಸರಳವಾದ ಪ್ರೇಮದಿಂದ ಆಚರಿಸುವದು.

೭) ಆತ್ಮರತಿ, ಆತ್ಮಕ್ರೀಡೆ, ಆತ್ಮಮಿಥುನ, ಆತ್ಮಾನಂದ, ಆತ್ಮವಿಕಾಸ ಹಾಗು ಆತ್ಮವಿಲಾಸದೊಡನೆ ನಲಿದಾಡುವಿಕೆ.

ಮನುಷ್ಯನು ತನ್ನ ಗುಣ, ಸಾಮರ್ಥ್ಯ, ಯೋಗ್ಯತೆಯ ಬಗ್ಗೆ ಹೆಮ್ಮೆ ಪಡಬಾರದು. ಆದರೆ ಸತ್‌ಶೀಲ, ಗುರುಭಕ್ತಿ, ದೇವತಾಸ್ತೋಮದಲ್ಲಿ ಉಪಮಾನರಹಿತನಾದುದರಿಂದ ದೇವ-ದೇವನಾದ ಮಹಾದೇವನಲ್ಲಿ ಅಕುಟಿಲವಾದ ಪ್ರೇಮದ ಬಗ್ಗೆ ಅಭಿಮಾನ ತಾಳಬಹುದು. ಆದರೆ ಇತರರ ಶ್ರೇಯಸ್ಸನ್ನು ಕಂಡು ಮತ್ಸರ ಪಡುವದು ಮಾತ್ರ ಅತ್ಯಂತ ನಿಂದನೀಯ ಹಾಗು ಹೇಯವಾದುದಾಗಿದೆ. ಇಷ್ಟೇ ಅಲ್ಲ; ಅದು ಪಾಪಕರವೂ ಆಗಿದೆ.

**ಪಂಚರತ್ನ** : ಗುರು-ಲಿಂಗ-ಜಂಗಮ-ವಿಭೂತಿ-ರುದ್ರಾಕ್ಷಿ-ಮಂತ್ರ-ಪಾದೋದಕ ಹಾಗು ಪ್ರಸಾದಗಳೆಂಬ ಅಷ್ಟಾವರಣಗಳು ಶಿವಭಕ್ತನಿಗೆ ಶರೀರದ ಮುಖ್ಯ ಅಂಗಗಳಂತಿರುವವು. ಅದೇ ರೀತಿಯಾಗಿ ಸದಾಚಾರ, ಶಿವಾಚಾರ, ಲಿಂಗಾಚಾರ, ಭೃತ್ಯಾಚಾರ ಹಾಗು ಗಣಾಚಾರಗಳೆಂಬ ಪಂಚಾಚಾರಗಳು ಮಾನವನ ಶರೀರಕ್ಕೆ ಪ್ರಾಣವು ಪ್ರಧಾನವಾಗಿರುವಂತೆ ಇರುವವು. ಈ ಐದು ನಿಯಮಗಳನ್ನು ಆಚರಿಸುತ್ತ ಹೋಗುವದರಿಂದ ಸದ್ಗತಿಯು ಕಟ್ಟಿಟ್ಟ ಬುತ್ತಿಯಾಗಿದೆ.

**ಅಷ್ಟಸಿದ್ಧಿ ಕೌಪೀನ (ಲಂಗೋಟಿ)** : ಅಷ್ಟಸಿದ್ಧಿ ಯುಕ್ತ ಕೌಪೀನವು ಸಾಧಾರಣವಾದುದಲ್ಲ. ಅದರಲ್ಲಿ ಆರೋಗ್ಯ, ಕರ್ತವ್ಯ ದಕ್ಷತೆ, ಧನ, ಸಂತತಿ, ಶಿವಭಕ್ತಿ, ಶಿವಜ್ಞಾನ, ವೈರಾಗ್ಯ ಹಾಗು ಮುಕ್ತಿಗಳೆಂಬ ಅಷ್ಟ ವಿಧಗಳು ಅಡಕವಾಗಿರುತ್ತವೆ.

**ಗುರುಭಕ್ತ** : ಗುರುವೇ ಹರನೆಂದು, ಗುರುವಿಗೂ, ಭವನಿಗೂ ಅಭಿನ್ನ ಭಾವವನ್ನು ತಳೆದು, ಗುರುವನ್ನು ಸಕಲಸೌಭಾಗ್ಯ ಸರ್ವಸ್ವವೆಂದು ಭಾವಿಸಿ, ಗುರುವೇ ಸದ್ಗತಿಗೆ ಕಾರಣನೆಂದೂ, ಗುರುವಿನಲ್ಲಿಯೇ ಕಲ್ಯಾಣೋತ್ಪತ್ತಿಯೆಂದೂ, ಗುರುವೇ ಸಕಲ ಚೈತನ್ಯ ಸ್ವರೂಪನೆಂದೂ, ಗುರುವೇ ಮುಕ್ತಿಬೀಜನು ಅಂದರೆ ಮಾತೆಯ ಸ್ತನ್ಯಪಾನಕ್ಕೆ ಮರಳಿ ಬಾರದಂತೆ ಮಾಡುವ ಸಮರ್ಥ ಪುರುಷ ಶ್ರೇಷ್ಠನೆಂದೂ, ಗುರುವಿನಡಿಯೇ ಕೈಲಾಸವೆಂದೂ, ಗುರುವಿಗಿಂತ ಹೆಚ್ಚಿನದು ವಿಶ್ವದೊಳು ಎಲ್ಲಿಯೂ ಇಲ್ಲವೆಂದೂ ದೃಢವಾಗಿ ನಂಬಿ ಅದರಂತೆಯೇ ನಡೆಯುವವರಿಗೆ ಗುರುಭಕ್ತರೆಂದು ಕರೆಯಲಾಗುವದು.

**ಕಾಯಕ** : ಮಾನವನು ಯಾವ ಕಾಯಕವನ್ನು ಕೈಕೊಂಡರೂ

ಪರವಿಲ್ಲ. ಆದರೆ ಆ ವೃತ್ತಿಯು ಮಾತ್ರ ಪ್ರಾಣಿಮಾತ್ರಕ್ಕೆ ಹಾನಿಯನ್ನು ತರದೆ, ಪಾಪಕ್ಕೆ ಇಂಬನ್ನೀಯದೆ ಜೀವಿಗಳಿಗೆ ಒಳಿತನ್ನುಂಟುಮಾಡಿ ಶಿವಸೇವೆಗಾಗಿ ಅಲ್ಪವಾಗಲಿ, ಅಧಿಕವಾಗಲಿ ಫಲವನ್ನು ಕೊಡುವದಾದರೆ ಆ ಕಜ್ಜವು ಪ್ರಶಸ್ತವಾದುದೆಂದು ಹೇಳಲು ಯಾವುದೇ ರೀತಿಯ ಅಭ್ಯಂತರವಿಲ್ಲ. ಅಲ್ಲದೆ ಅದರಲ್ಲಿ ಯಾವುದೇ ಉಚ್ಚ—ನೀಚಗಳೆಂಬ ಕುಕಲ್ಪನೆಗೆ ಎಡೆಯೀಯುವಂತಿಲ್ಲ.

**ಗಣಾಚಾರ** : ಸ್ಥಾವರ ಲಿಂಗಗಳ ಭದ್ರತೆಗೆ ಭಂಗ ತರುವದು, ಶಿವಗ್ರಂಥಗಳನ್ನು ತುಚ್ಛವಾಗಿ ಕಾಣುವದು, ಪರಮಾತ್ಮನನ್ನು ಹಳಿಯುವದು, ಶೈವರನ್ನು ನಿಂದಿಸುವದು, ಪರಮ ಗುರುಭಕ್ತರನ್ನು ಹಿಂಸಿಸುವದು, ಶಿವಗಣ ಸಮೂಹವನ್ನು ಹೀನವಾಗಿ ಎಣಿಸುವದು, ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಶಿವಧರ್ಮವನ್ನು ಮಾನ್ಯತೆಯಿಂದ ಗಣಿಸದಿರುವ ಶಿವದ್ರೋಹವನ್ನು ಕಂಡೊಡನೆ ಸಾಧ್ಯವಾದರೆ ನಿವಾರಿಸುವದು, ನಿಗ್ರಹಿಸುವದು, ಖಂಡಿಸುವದು. ಅದು ಸಾಧ್ಯವಾಗದಿದ್ದರೆ ಅಂದರೆ ತನ್ನಿಂದಾಗದಿದ್ದರೆ ಅಂಥ ಸ್ಥಳದಿಂದ ದೂರವಾಗುವದು ಗಣಾಚಾರವೆಂದು ಪರಿಗಣಿಸಲಾಗುವದು.

**ಗೋಮಾತೆ** : ಗೋವು ಅತಿ ಪವಿತ್ರವಾದ ಪ್ರಾಣಿಯಾಗಿದ್ದು ಅದರಿಂದ ಮಾನವನಿಗೆ ಬಹಳ ಉಪಕಾರವಾಗುತ್ತಿದೆಯೆಂಬುದು ಎಲ್ಲರಿಗೂ ಗೊತ್ತಿದ್ದ ಮಾತು. ಶಿವಭಕ್ತರಿಗಂತೂ ಗೋವು ಅವಶ್ಯವಾಗಿ ಬೇಕೇ ಬೇಕು. ಅದರ ಶಗಣಿಯು ಗೃಹಶುದ್ಧಿಗೂ, ಮೂತ್ರವು ಸಮ್ಮಾರ್ಜನೆಗೂ ಹಾಗು ಕೆಲ ಸಮಯಗಳಲ್ಲಿ ಔಷಧಿಗೂ ಬರುವದು. ಗೋಕ್ಷೀರವು ಬಹು ಆರೋಗ್ಯಕರವಾದುದಾಗಿದೆ. ಅಲ್ಲದೆ ಅದು ಲಿಂಗಾಭಿಷೇಕಕ್ಕೂ ಉಪಯೋಗವಾಗುವದು. ಅಲ್ಲದೆ ಗೋವಿನ ಶರೀರದಲ್ಲಿ ಅನೇಕ ದೇವತೆಗಳು ನಿವಾಸ ಮಾಡಿಕೊಂಡಿರುತ್ತಾರೆಂದು ಬಹುಜನರ ಅಭಿಪ್ರಾಯವಾಗಿರುವದೂ ಸರ್ವಶ್ರುತವಿದೆ.

**ಶಿವಶರಣರ ಮಾರ್ಗವು** : ಶರಣರ ಮಾರ್ಗವು ಅನ್ಯರಿಗೆ ತಿಳಿಯುವದು ದುಸ್ತರವಾದ ಮಾತೇ ಎಂದು ಹೇಳಬಹುದು. ಯಾವುದಾದರೊಂದು ಕಾಯಕವನ್ನು ಮಾಡುತ್ತ, ದೇವರಿಂದ ಪೂರೈಸಲ್ಪಟ್ಟದ್ದರ

ಲ್ಲಿಯೇ ತೃಪ್ತರಾಗಿ, ಅನ್ಯರೆದುರು ಕೈಯೊಡ್ಡದೆ, ಈಶಾರ್ಚನೆಗೆ ಬೇಕಾದ ವಸ್ತುಗಳನ್ನು ತಮ್ಮಷ್ಟಕ್ಕೆ ತಾವೇ ಒದಗಿಸಿಕೊಂಡು ಪರರ ಸಹಾಯು ವನ್ನು ಕೋರದೆ ನಿಜಭಕ್ತಿಯೆಂಬ ಸಾಧನದಿಂದ ಮುಕ್ತಿಕಾಂತೆಯನ್ನು ಆಯಾಸವಿಲ್ಲದೆ ತಮ್ಮ ಕೈವಶ ಮಾಡಿಕೊಳ್ಳುವರು.

ಭಗವಂತನು ಕೊಟ್ಟಿದ್ದರಲ್ಲಿಯೆ ಪಾತ್ರವರಿತು ವ್ಯಯಮಾಡುವ ಜಾಣ್ಮೆಯು ಇವರಲ್ಲಿ ಸಹಜವಾಗಿರುವದು. ಇವರ ನಿಷ್ಕಾಮ ಭಕ್ತಿಯೂ ನಿರ್ದುಷ್ಟವಾದ ನಡತೆಯೂ, ಅನವರತವಾಗಿರುವ ಅಸಾಧಾರಣ ಈಶ್ವರ ಭಕ್ತಿಯೂ ಶಾಶ್ವತವಾದ ಸುಖವನ್ನು ಬಯಸುವಂಥವರು ಲಕ್ಷ್ಯದಲ್ಲಿರಿಸು ವಂಥ ಸಂಗತಿಯಾಗಿರುವದು.

**ಸತ್ಪಾತ್ರ ದಾನ** : ದಾನ ಮಾಡುವಂಥ ಗುಣವು ಒಳ್ಳೆಯದೆಂದು ಸ್ವಾಭಾವಿಕವಾಗಿ ಹೇಳಬಹುದು. ಆದರೆ ದಾನವನ್ನು ಸ್ವೀಕರಿಸುವಂಥರ ತಾರತಮ್ಯಗಳನ್ನು ಅರಿತುಕೊಳ್ಳುವದೂ ಅತ್ಯವಶ್ಯವಾಗಿದೆ. ದುರಾಚಾ ರಿಗಳಿಗೂ, ದುಶ್ಚಟಗಳಿಗೀಡಾದವರಿಗೂ ನೀಡಿದ ಧನದಿಂದ, ದಾನ ಕೊಟ್ಟ ವನಿಗೆ ಕಲಂಕವೂ ಪಾಪವೂ ಬರುವದರಲ್ಲಿ ಸಂಶಯುವೇ ಇಲ್ಲ.

ಅದಕ್ಕಾಗಿ ಮೊದಲು ದಾನತೆಗೆದುಕೊಳ್ಳುವವನ ಯೋಗ್ಯತೆಯನ್ನೂ ಹಾಗೂ ಆತನ ಮನೋಭಾವವನ್ನೂ ಚನ್ನಾಗಿ ತಿಳಿದುಕೊಳ್ಳದ ಹೊರ್ತು ಆತನೊಂದಿಗೆ ವ್ಯವಹರಿಸುವದು ಒಳ್ಳೇಯದಲ್ಲ. ಕ್ರೂರರಿಗೂ, ದುಷ್ಟ ರಿಗೂ ದಾನ ಮಾಡಿದರೆ ಪಾಪದ ರಾಶಿಗೆ ಬಲೆಯೊಡ್ಡಿದ ಹಾಗೆಂದು ನಿರಾತಂಕವಾಗಿ ಹೇಳಬಹುದು. ಆದುದರಿಂದಲೇ ಪ್ರಾಚೀನ ನೀತಿ ಕಾರರು ಸತ್ಪಾತ್ರದಾನವೇ ದಾನವೆಂದು ಹೇಳಿರುವರು. ಅದಕ್ಕಾಗಿ ಈ ಮಾತನ್ನು ದಾನಿಗಳಾದವರು ಲಕ್ಷದಲ್ಲಿರಿಸಿ ಅದರಂತೆ ನಡೆಯುವದು ಒಳ್ಳೆಯದೆಂದು ಬೇರೆ ಹೇಳುವಂಥ ಕಾರಣವೇ ಇಲ್ಲ.

**ವಿನಯು** : ತಾಯಿ—ತಂದೆ ಮುಂತಾದ ಹಿರಿಯರಿಗೂ, ಗುರುಗಳು– ಯೋಗಿಗಳು-ಸುಜನರೇ ಮೊದಲಾದ ಪೂಜ್ಯರಿಗೂ ವಿಧೇಯನಾಗಿ ಅವ ರನ್ನು ಗೌರವದಿಂದ ಕಾಣುತ್ತ, ಅವರಿಗೆ ಭಕ್ತಿಭಾವದಿಂದ ಮಣಿದು ಆದರ-ಪುರಸ್ಸರವಾಗಿ ಅವರೊಡನೆ ತಮ್ಮ ಮನೋಭಿಷ್ಟವನ್ನರಿಕೆ ಮಾಡಿ ಕೊಳ್ಳುವ ನಡವಳಿಕೆಯು ವಿನಯುವೆನ್ನಿಸುವದು. ವಿನಯುವು ಮಾನವ

ನಿಗೆ ಶ್ರೇಯಸ್ಕರವಾಗಿರುವಂತೆ ಅವಿನಯವು ತಪ್ಪದೇ ಹಾನಿಯುನ್ನುಂಟು ಮಾಡುವದು.

**ಸಜ್ಜನರ ಸಂಗ :** ಸಜ್ಜನರ ಸಂಗವು ಶ್ಲಾಘನೀಯವಾದುದು; ಶಿವಾನುಭವಿಗಳೊಡನೆ ಒಡನಾಟವು ಪ್ರಶಸ್ತವಾದುದು; ಶಿವೈಕ್ಯರ ಕೂಟ ದಲ್ಲಿ ಬೆರೆಯುವದು ಇಷ್ಟವಾದುದು; ಲಿಂಗಾವಧಾನಿಗಳ ನೆರೆಯಲ್ಲಿರು ವದು ಸ್ಮರಣೀಯವಾದುದು; ಅದಕ್ಕಾಗಿ ಸದ್ಗತಿಯನ್ನು ಬಯಸುವಂಥ ವನು, ನೀತಿಯನ್ನವಲಂಬಿಸುತ್ತ ಸದಾಚಾರವನ್ನು ಆಚರಣೆಯಲ್ಲಿ ತರುತ್ತ, ಶಿವಮಾನಸಚಿತ್ತನಾಗಿ, ಚಿತ್ತಜಾರಿಯಾದ ಸದಾಶಿವನನ್ನು ಸಹಜ ಪ್ರೇಮ ದಿಂದ ಅನವರತವೂ ನೆನೆಯತಕ್ಕದ್ದು.

— ಮುಗಿದುದು —